ಎಪ್ಪತ್ತ್ಮೈದನೆಯ ಪ್ರಕಟನೆ

# ಶ್ರೀ ಕೃಷ್ಣ ಭೂಪಾಲ

(ಐತಿಹಾಸಿಕ ಕಾದಂಬರಿ)



ಲೇಖಕರು :
ಮಾ. ನಾ. ಚೌಡಪ್ಪ

ಮುದ್ರಣ ಮತ್ತು ಪ್ರಕಾಶನ :
ಶಾರದಾ ಪ್ರಕಟನಾಲಯ
ಅರಳೇಪೇಟೆ :: ಬೆಂಗಳೂರು-೨.

ಮುಖಚಿತ್ರ :

ಮುಮ್ಮಡಿ ಕೃಷ್ಣರಾಜ ಒಡೆಯರವರ ಸಮಕಾಲೀನ ವರ್ಣಚಿತ್ರದ ಪ್ರತಿಕೃತಿ

ಮುಖಚಿತ್ರದ ಮುದ್ರಣ :
ಗೋಲ್ಡನ್ ಪ್ರಿಂಟಿಂಗ್ ವರ್ಕ್ಸ್
ಬೆಂಗಳೂರು ೨.



ಪ್ರಥಮ ಮುದ್ರಣ : ೭, ಫೆಬ್ರುವರಿ ೧೯೫೮





ಬೆಲೆ :
ಒಂದೂಮುಕ್ಕಾಲು ರೂಪಾಯಿ

ಚಂದಾ ವಿವರ :
ಆರು ತಿಂಗಳಿಗೆ: ಐದೂವರೆ ರೂಪಾಯಿ
ಒಂದು ವರ್ಷಕ್ಕೆ: ಹನ್ನೊಂದು ರೂಪಾಯಿ

# ಮೊದಲ ಮಾತು

ಈ ಕಾದಂಬರಿಯ ವಸ್ತು, ಸುಮಾರು ನೂರೈವತ್ತು ವರ್ಷಗಳ ಹಿಂದೆ ಮೈಸೂರು ಸಂಸ್ಥಾನವನ್ನಾಳಿದ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲಕ್ಕೆ ಸಂಬಂಧಿಸಿದ್ದಾದರೂ ಈ ಕಾದಂಬರಿ ಅವರ ಜೀವನ ಚರಿತ್ರೆಯಲ್ಲ. ಆ ಕಾಲದಲ್ಲಿ ನಡೆದ ಘಟನೆಗಳಿಗೆ ಸಂಬಂಧಿಸಿದ ಹಲವರು ಪ್ರಮುಖರಲ್ಲಿ ಒಬ್ಬರಾಗಿ ಮುಮ್ಮಡಿಯವರು ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾರೆ. ಆದರೂ ಅವರು ಈ ಕಾದಂಬರಿಯ ಕ್ರಿಯೆಯ ಪ್ರಧಾನ ಪ್ರಚೋದಕರಾಗಿ ಮೆರೆದಿದ್ದಾರೆ. ಆದ್ದರಿಂದಲೇ ಈ ಕಾದಂಬರಿಗೆ ' ಶ್ರೀ ಕೃಷ್ಣ ಭೂಪಾಲ ' ಎಂದು ಹೆಸರಿಟ್ಟಿದ್ದೇನೆ.

ಮುಮ್ಮಡಿ ಕೃಷ್ಣರಾಜ ಒಡೆಯರವರ ಜನನದಿಂದ ಈ ಕಾದಂಬರಿ ಆರಂಭವಾಗುತ್ತದೆ. ಅಂದು ಮೈಸೂರು ಸಂಸ್ಥಾನದ ಆಡಳಿತ ಯದುವಂಶದ ಒಡೆಯರ ಕೈತಪ್ಪಿ ಟಿಪ್ಪೂವಿನ ವಶದಲ್ಲಿರುತ್ತದೆ. ಮುಮ್ಮಡಿಯವರು ಐದು ವರ್ಷ ವಯಸ್ಸಿನವರಾಗಿರುವಾಗ, ಇಂಗ್ಲಿಷರೂ ಅವರ ಮಿತ್ರರಾದ ಹೈದರಾಬಾದಿನ ನಿಜಾಮರೂ ಟಿಪ್ಪೂವಿನ ಮೇಲೆ ಯುದ್ಧ ಹೂಡುತ್ತಾರೆ. ಈ ಯುದ್ಧದಲ್ಲಿ ಟಿಪ್ಪೂ ಸಾಯುತ್ತಾನೆ. ಆನಂತರ ವಿಜಯಿಗಳು ಟಿಪ್ಪೂವಿನ ರಾಜ್ಯದ ಕೆಲವು ಭಾಗಗಳನ್ನು ತಮ್ಮತಮ್ಮಲ್ಲಿ ಹಂಚಿಕೊಂಡು ಉಳಿದ ಭಾಗವನ್ನು ಮುಮ್ಮಡಿಯವರಿಗೆ ಕೊಟ್ಟು ಅವರನ್ನು ಯದುವಂಶದ ಸಿಂಹಾಸನದಲ್ಲಿ ಪ್ರತಿಷ್ಠಿಸುತ್ತಾರೆ. ಆಮೇಲೆ ಮುಮ್ಮಡಿಯವರು ಮೂವತ್ತೇಳು ವರ್ಷ ವಯಸ್ಸಿನವರಾಗಿರುವಾಗ ಇಂಗ್ಲಿಷರು ಅಕಾರಣವಾಗಿ ಅವರಿಂದ ರಾಜ್ಯಾಡಳಿತವನ್ನು ಕಸಿದುಕೊಳ್ಳುತ್ತಾರೆ. ಅಲ್ಲಿಗೆ ಅವರ ಭೂಪಾಲನೆಯ ಕಾರ್ಯ ಕೊನೆಗೊಳ್ಳುತ್ತದೆ. ಇದಿಷ್ಟು ' ಶ್ರೀ ಕೃಷ್ಣ ಭೂಪಾಲ ' ಕಾದಂಬರಿಯ ವಸ್ತು.

ಕೊನೆಯದಾಗಿ ಒಂದು ಮಾತು : ನಾನು ಇತಿಹಾಸದ ವಿದ್ಯಾರ್ಥಿ. ನನ್ನ ಮೊದಲ ಒಲವು ಇತಿಹಾಸ ; ಸಾಹಿತ್ಯ ಎರಡನೆಯದು. ಈ ಕಾದಂಬರಿಯನ್ನು ಬರೆಯುವಾಗ ನಾನು ಆದಷ್ಟುಮಟ್ಟಿಗೆ ಇತಿಹಾಸಕ್ಕೆ ಅಂಟಿಕೊಂಡೇ ನಡೆದಿದ್ದೇನೆ. ಇದರಿಂದ ವಾಚಕರಿಗೆ ಅಂದಿನ ಕಾಲದ ಸ್ಥಿತಿಗತಿಗಳ ನಿಜಸ್ವರೂಪದ ಪರಿಚಯವಾಗುವುದೆಂದು ನಂಬಿದ್ದೇನೆ. ನನ್ನ ಈ ನಂಬುಗೆ ನಿಜವಾದರೆ ನಾನು ಕೃತಾರ್ಥ.

ಬೆಂಗಳೂರು
೭-೨-೧೯೫೮

ಮಾ. ನಾ. ಚೌ.

# ಶ್ರೀ ಕೃಷ್ಣ ಭೂಪಾಲ

ಮಧ್ಯಾಹ್ನದ ಭೋಜನವನ್ನು ಆಗತಾನೆ ಮುಗಿಸಿದ್ದ ಟಿಪ್ಪೂ ಸುಲ್ತಾನರು ವಿಶ್ರಾಂತಿಗಾಗಿ ಜನಾನದ ಕಡೆಗೆ ಹೊರಟಿದ್ದರು.

ಜನಾನದ ಒಳಬಾಗಿಲ ಹಂತವನ್ನು ಹತ್ತುತ್ತಿದ್ದಾಗ ಸುಲ್ತಾನರ ದೃಷ್ಟಿ ಅಲ್ಲೇ ಜಗಲಿಯ ಮೇಲೆ ಕಟ್ಟಿದ್ದ ಹೆಣ್ಣುಹುಲಿಯ ಕಡೆಗೆ ತಿರುಗಿತು. ಅದನ್ನವರು ನೋಡಿ ಒಂದು ವಾರವಾಗಿತ್ತು. ತುಂಬು ಗಬ್ಬದಲ್ಲಿದ್ದಾಗ ಹೆರಿಗೆಗೆಂದು ಬೇರೆ ಯೆಡೆಗೆ ಒಯ್ಯಲ್ಪಟ್ಟಿದ್ದ ಆ ಹುಲಿ ಅಂದೇ ಅಲ್ಲಿಗೆ ಹಿಂದಿರುಗಿ ಬಂದಿತ್ತು ; – ತನ್ನ ಮುದ್ದು ಮರಿಯೊಡಗೂಡಿ.

ಸುಲ್ತಾನರ ದೃಷ್ಟಿ ಆ ಮರಿಯ ಕಡೆಗೆ ತಿರುಗಿತು; ಎಂಥ ಠೀವಿ ಅದರದು! ....ಎಷ್ಟು ನಿರ್ಭಯವಾಗಿ ತನ್ನ ತಾಯಿಯ ಸುತ್ತಮುತ್ತ ಸುತ್ತುತ್ತಿದೆ!....

ಅದರ ಗಾಂಭೀರ್ಯ ಒನಪು ಒಯ್ಯಾರಗಳು ಸುಲ್ತಾನರನ್ನು ಆಕರ್ಷಿಸಿದುವು. ಅವರು ಅದರ ಬಾಲಚೇಷ್ಟೆಗಳನ್ನು ನೋಡುತ್ತಾ ಕ್ಷಣಕಾಲ ಮೈಮರೆತು ನಿಂತರು.

ಮರಿ ಪುಟಪುಟನೆ ಹಾರುತ್ತಿತ್ತು ; ನೆಗೆಯುತ್ತಿತ್ತು. ದಾಪು ಹೆಜ್ಜೆಯಲ್ಲಿ ಸರಸರನೆ ಚಲಿಸುತ್ತಾ ತಾಯನ್ನು ಸುತ್ತುತ್ತಿತ್ತು. ಆದರ ಕಾಲಿನ ನಡುವೆ ನುಗ್ಗಿ ಆಡುತ್ತಿತ್ತು; ಲೀಲೆಯಿಂದ ಮುಖದ ಮುಂದೆ ನೆಗೆದು, ಕಚ್ಚಿ, ಪರಚಿ ತಾಯನ್ನು ರೇಗಿಸುತ್ತಿತ್ತು.

ಈ ಆಟವನ್ನು ನೋಡುತ್ತಿದ್ದ ಹಾಗೆ ಸುಲ್ತಾನರ ಮುಖದಲ್ಲಿ ತುಂಟ ನಗೆ ಮೂಡಿತು ; ತಾನು ಬಂಧನದಲ್ಲಿದ್ದರೂ ತಾನೇ ಆ ಸ್ಥಾನದ ಅಧಿಪತಿಯೆಂಬಂತೆ ದರ್ಪದಿಂದ ವರ್ತಿಸುತ್ತಿದ್ದ ಆ ಮರಿಯನ್ನು ಹಿಡಿದು ಅದರ ನೆತ್ತಿಯ ಮೇಲೆ

ಎರಡು ಹುಸಿಯೇಟು ಬಡಿದು, ಅದರ ಬಾಲವನ್ನು ಚಿವುಟಿ ಅದನ್ನು ರೇಗಿಸಿ, ಆಡಿಸಿ ನೋಡಬೇಕೆಂಬ ಅಭಿಲಾಷೆ ಅವರ ಮನದಲ್ಲಿ ಮೊಳೆತು ಬೆಳೆಯಿತು.

ಸುಲ್ತಾನರು ಜಗಲಿಯ ಮೇಲೊಂದು ಹೆಜ್ಜೆಯಿಟ್ಟು, ಬಾಗಿ, ಮರಿಯ ಕಡೆಗೆ ತೋಳು ಚಾಚಿದರು. ತಾಯಿಹುಲಿ ಸುಲ್ತಾನರ ಕಡೆಗೆ ತಲೆ ತಿರುಗಿಸಿ ಗುರುಗುಟ್ಟಿತು. ಆ ವಿರೋಧವರ್ತನೆ ಸುಲ್ತಾನರಿಗೆ ಸರಿಬೀಳಲಿಲ್ಲ.—"ಈ ಹುಲಿಯದು ಇದೊಂದು ಕೆಟ್ಟ ಚಾಳಿ" ಎಂದು ಹಲ್ಲು ಕಡಿಯುತ್ತ ಅಲ್ಲೇ ಕಂಬಕ್ಕೆ ನೇತುಹಾಕಿದ್ದ ಚರ್ಮದ ಚಾಟಿಯನ್ನು ಎಳೆದುಕೊಂಡು ತಾಯಿ ಹುಲಿಯ ಮುಖದ ಮೇಲೆ ಫಟಫಟನೆ ನಾಲ್ಕು ಏಟು ಹಾಕಿದರು.

ಹುಲಿ ಆರ್ಭಟಿಸಿತು. ಇನ್ನೊಂದು ಬಲವಾದ ಏಟು ಹಾಕಬೇಕೆಂದು ಸುಲ್ತಾನರು ಕೈ ಎತ್ತುವುದರಲ್ಲಿದ್ದರು. ಆ ಹೊತ್ತಿಗೆ ಮರಿ ಛಂಗನೆ ನೆಗೆದು ಅವರ ಕೈಯನ್ನು ಪರಚಿತು. ಮರಿಯ ಉದ್ರೇಕ ಅವರನ್ನು ಅಚ್ಚರಿಗೊಳಿಸಿತು. ಚಾಟಿಯು ಚಾಲನೆ ನಿಂತಿತು. ಮರಿಯನ್ನು ಹಿಡಿಯಬೇಕೆಂದು ತಮ್ಮ ಎಡಗೈ ಮುಂದು ಮಾಡಿದರು. ಆ ಹೊತ್ತಿಗೆ ಸರಿಯಾಗಿ ಫಿರಂಗಿಯ ಗುಂಡು ಹಾರಿದ ಸದ್ದು ಕೇಳಿಬಂತು. ಸುಲ್ತಾನರು ಥಟ್ಟನೆ ತಲೆಯೆತ್ತಿ ಆ ಮೊಳಗಿಗೆ ಕಿವಿಗೊಟ್ಟು ಕೇಳಿದರು: ಸದ್ದು ಪೂರ್ವದ ಕಡೆಯ ಬತೇರಿಯಿಂದ....

ಸುಲ್ತಾನರು ಒಡನೆಯೇ ಜನಾನದ ಒಳಹೊಕ್ಕರು. ಅಲ್ಲೇ ಇದ್ದ ನಾಯಿಮಾರ್ ಬೇಗಂರವರ ಕೊಟಡಿಯನ್ನು ಪ್ರವೇಶಿಸಿದರು.

ಬೇಗಂ ಕಿಟಕಿಯ ಹತ್ತಿರ ನಿಂತು ಬತೇರಿಯ ಕಡೆಗೆ ನೋಡುತ್ತಿದ್ದರು. ಸುಲ್ತಾನರು ಒಳಕ್ಕೆ ಬಂದ ಸುಳಿವು ಅವರಿಗೆ ಹತ್ತಲಿಲ್ಲ. ಸುಲ್ತಾನರೂ ಸದ್ದಿಲ್ಲದೆ ಅವರ ಹಿಂಬದಿಗೆ ಹೋಗಿ ನಿಂತು ತಾವೂ ಬತೇರಿಯ ಕಡೆಗೆ ನೋಡಿದರು.

ಗುಂಡು ಹಾರಿಸಿದ ಫಿರಂಗಿಯಿಂದ ಹೊರಟಿದ್ದ ಕರಿನೀಲಿಯ ಹೊಗೆ ಬತೇರಿಯನ್ನು ತುಂಬಿತ್ತು. ಅಲ್ಲಿ ಯಾವುದೂ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ; ಆದರೂ ಸುಲ್ತಾನರು ಆ ಕರಿನೀಲಿಯ ಹೊಗೆ ಸುಳಿಸುಳಿಯಾಗಿ ಸುತ್ತಿಕೊಂಡು ಮೇಲೇರುತ್ತಾ, ಹಬ್ಬಿ ಹರಡಿ ವಿರಳವಾಗುತ್ತಾ ಕಾರ್ಮೋಡದಲ್ಲಿ ಬೆರೆತು ಹೋಗುವುದನ್ನು ನೋಡುತ್ತಾ ನಿಂತರು....

"**ಹೋ–ಷಿ–ಯಾ–ರ್—**"

ಇನ್ನೊಂದು ಗುಂಡಿನ ಮೊಳಗಿನಂತೆ ಕೇಳಿ ಬಂತು ಒಳಅಂಗಳದ ಹಬಸಿ

ಕಾವಲುಗಾರನ ಧ್ವನಿ. ಸುಲ್ತಾನರು ಜನಾನಕ್ಕೆ ಬರುತ್ತಿದ್ದಾರೇನೋ ಎಂದು ಭಾವಿಸಿ ಬೇಗಂ ಥಟ್ಟನೆ ಹಿಂದಿರುಗಿದರು—

"ಜಹಾಪನ! – ಇಲ್ಲಿಗೆ—"

"ಈಗತಾನೆ ಬಂದೆ. – ನೀವು ಬತೇರಿಯ ಕಡೆ ನೋಡುತ್ತಾ...."

"ಫಿರಂಗಿ ಗುಂಡು—"

"ಕೇಳಿದೆ."

"**ಹುಜೂರ್–ಅದಬ್‌ಸೆ**"....

"ತಮ್ಮನ್ನು ನೋಡಲು ಯಾರೋ ಇಲ್ಲಿಗೆ ಬರುವಂತಿದೆ, ಜಹಾಪನ."

"ಞ್ಞ ?"

"ತಮ್ಮನ್ನು ನೋಡಲು ಯಾರೋ ಇಲ್ಲಿಗೇ ಬರುವಂತಿದೆ, ಎಂದೆ ಜಹಾಪನ."

ಸುಲ್ತಾನರು ಕಿಟಕಿಯಿಂದ ಮುಖ ತಿರುಗಿಸಿ ಪಲ್ಲಂಗದ ಕಡೆಗೆ ನಡೆದರು. ಬೇಗಂ ಅವರ ಹಿಂದೆ ನಡೆದು ಬರುತ್ತಾ ಸುಲ್ತಾನರ ಮುಂಗೈ ಮೇಲಿನ ಗಾಯ ವನ್ನೂ ಅದರಿಂದ ರಕ್ತ ತೊಟ್ಟಿಡುತ್ತಿರುವುದನ್ನೂ ಕಂಡರು. ಒಡನೆಯೇ ತಾವು ಹೊದೆದಿದ್ದ ಬಿಳಿಯ ದುಪ್ಪಟವನ್ನು ಸರ್ರನೆ ಹರಿದು ಪಟ್ಟಿಕಟ್ಟಿದರು. ಸುಲ್ತಾನರನ್ನು ಪಲ್ಲಂಗಕ್ಕೆ ಕರೆದೊಯ್ದು ಕೂರಿಸಿ ತಾವೇ ಗಾಳಿ ಹಾಕುತ್ತಾ ಕೇಳಿದರು :

"ಏನಾಯಿತು ಜಹಾಪನ ?"

ಸುಲ್ತಾನರು ಮಾತನಾಡದೆ, ಲೋಡುಗಳ ಮೇಲೆ ಹೊರಳಿ ಪಲ್ಲಂಗದ ಮೇಲೆ ಮೈ ಚಾಚಿದರು.

"ಹಕೀಮರಿಗೆ ಹೇಳಿಕಳುಹಿಸಲೆ ?"

"ಞ್ಞ ! – ಏನೂ ಬೇಡ. ಸಣ್ಣ ಗಾಯ ; ತಾನಾಗಿ ಮಾಯುತ್ತದೆ...."

ಬಾಗಿಲು ತೆರೆಯ ಆ ಬದಿಯಲ್ಲಿ ಯಾರೋ ಎರಡು ಬಾರಿ ಸುಳಿ ದಂತಾಯಿತು. ಬೇಗಂರವರ ದೃಷ್ಟಿ ಆ ಕಡೆಗೆ ಹರಿಯಿತು. ಅವರು ಪಲ್ಲಂಗ ದಿಂದಿಳಿದು ಹತ್ತಿರದಲ್ಲಿದ್ದ ಭದ್ರಾಸನದಲ್ಲಿ ಕುಳಿತರು. ಬೇಗಂರವರ ಗುಲಾಮಿ ತೆರೆಯನ್ನು ಸರಿಸಿ ಸುಲ್ತಾನರಿಗೂ ಬೇಗಂರವರಿಗೂ ಸಲಾಂ ಮಾಡಿ ಒಳಕ್ಕೆ ಬಂದು, ಒಂದು ಪಕ್ಕಕ್ಕೆ ಸರಿದು ನಿಂತಳು. ಸುಲ್ತಾನರನ್ನು ಕಾಣುವ ಉದ್ದೇಶ ದಿಂದ ಯಾರೋ ಅವಳನ್ನನುಸರಿಸಿ ಬಂದಿರಬೇಕೆಂದು ಗ್ರಹಿಸಿ ಬೇಗಂ ಕೇಳಿದರು.

"ಯಾರು ಅದು ?"

"ಅರಮನೆಯವರು. ಸುಲ್ತಾನರಿಗೆ ನಜರೊಪ್ಪಿಸಲು ಬಂದಿದಾರೆ."

"ಸುಲ್ತಾನರು ವಿಶ್ರಾಂತಿ ಪಡೆಯುತ್ತಿದ್ದಾರೆ."

"ಜನಾನಾದಲ್ಲೇ ಅವರನ್ನು ಕಾಣಬಹುದೆಂದು ದಿವಾನರು...."

"ಅವಸರದ ಕಾರ್ಯವಿರಬೇಕು – ಬರಲಿ."

ಅರಮನೆಯ ಅವ್ವೆಯರ ಗೊತ್ತುಗಾತಿ ಒಳಗೆ ಬಂದು ತಲೆಬಾಗಿ ವಂದಿಸಿ ಬಿನ್ನವಿಸಿಕೊಂಡಳು:

"ಖಾಸಾ ಸನ್ನಿಧಾನದಿಂದ ಸಿಹಿ ಉಡುಗೊರೆ ಬಂದಿದೆ; ಸರ್ವಾಧಿಕಾರಿಗಳು ಒಪ್ಪಿಸಿಕೊಳ್ಳಬೇಕು––"

ಈ ಮಾತು ಮುಗಿಯುತ್ತಿದ್ದಂತೆ ಅವ್ವೆಯರಿಬ್ಬರು ಚಿನ್ನದ ಹರಿವಾಣಗಳನ್ನು ಹಿಡಿದು ಬಂದರು.

"ಸಂದರ್ಭ ಏನು ?"

"ಅರಿಕೆ ಮಾಡಿಕೊಳ್ಳುತ್ತೇನೆ—ಶ್ರೀಮನ್ಮೈಸೂರು ಮಹಾ ಸಂಸ್ಥಾನಾಧೀಶ್ವರಾದ ಶ್ರೀಮನ್ಮಹಾರಾಧಿರಾಜ ರಾಜಪರಮೇಶ್ವರ ಶ್ರೀಮಚ್ಚಾಮರಾಜ ಮಹೀಪಾಲ ಮಹಾಸ್ವಾಮಿಯವರಿಗೆ ಪಟ್ಟದರಸಿಯರು ಕೆಂಪನಂಜಮಾಂಬಾ ದೇವಿಯವರಲ್ಲಿ ಶ್ರೀಮದ್ಯುವರಾಜ ಕುಮಾರರ ಶುಭ ಜನನವಾಗಿದೆ—"

"ಯಾವಾಗ ?"

"ಈಗೊಂದು ಗಳಿಗೆಯ ಹಿಂದೆ."

ಸುಲ್ತಾನರ ಮುಖಮುದ್ರೆ ಗಂಭೀರವಾಯಿತು. ಅವರು ಏನಾದರೂ ಅಪ್ಪಣೆ ಕೊಡಿಸುವರೇನೋ ಎಂದು ಅವ್ವೆಯರೂ ಅವರ ಗೊತ್ತುಗಾತಿಯೂ ಒಂದರೆಕ್ಷಣ ಕಾದರು. ಸುಲ್ತಾನರು ಮಾತನಾಡಲಿಲ್ಲ. ಗೊತ್ತುಗಾತಿ ಹರಿವಾಣಗಳಿಗೆ ಹೊದೆಸಿದ್ದ ರೇಷ್ಮೆಯ ವಸ್ತ್ರವನ್ನು ಓರೆಮಾಡಿ ಆ ಹರಿವಾಣಗಳನ್ನು ಸುಲ್ತಾನರಿಗೆ ನಜರು ಮಾಡಿದಳು.

ಸುಲ್ತಾನರ ಶುಷ್ಕದೃಷ್ಟಿ ಆ ಹರಿವಾಣಗಳ ಮೇಲಿತ್ತಾದರೂ ಅವರ ಮನಸ್ಸು ಎಲ್ಲೋ ಅಲೆಯುತ್ತಿದೆಯೆಂಬುದು ಅವರ ಮುಖದಮೇಲೆ ಎದ್ದು ಕಾಣುತ್ತಿತ್ತು. ಅಂತೂ ಅಭ್ಯಾಸಬಲದಿಂದ ಎಂಬಂತೆ ಅವರು ಆ ಹರಿವಾಣಗಳನ್ನು ಮುಟ್ಟಿದರು.

ಬತ್ತೇರಿಯಿಂದ ಇನ್ನೊಂದು ಗುಂಡು ಹಾರಿತು. ಸುಲ್ತಾನರ ದೃಷ್ಟಿ ಮತ್ತೆ ಕಿಟಕಿಯ ಕಡೆಗೆ ತಿರುಗಿತು.

ಗೊತ್ತುಗಾತಿ ಅವ್ವೆಯರ ಕೈಯಿಂದ ಆ ಹರಿವಾಣಗಳನ್ನು ತೆಗೆದುಕೊಂಡು ಪಲ್ಲಂಗದ ಹತ್ತಿರದಲ್ಲಿದ್ದ ಕಾಲುಮಣೆಯ ಮೇಲಿಟ್ಟಳು. ಅವ್ವೆಯರನ್ನು ಕರೆದು ಕೊಂಡು ಗುಲಾಮಿಯೊಡನೆ ಹೊರಟುಹೋದಳು....

" ವಿಶ್ರಮಿಸಿಕೊಳ್ಳಿ, ಜಹಾಪನ."

" ಹೂಂ—"

ಸುಲ್ತಾನರು ಸಿಥಾನವಾಗಿ ಪಲ್ಲಂಗದಿಂದ ಇಳಿದರು. ತಮ್ಮ ಶಯ್ಯಾ ಗೃಹದ ಕಡೆಗೆ ಮೌನವಾಗಿ ಹೆಜ್ಜೆ ಹಾಕಿದರು ; ಹೆಜ್ಜೆ ಭಾರವಾಗಿತ್ತು.

§

" ಇದೆಂಥ ಅವ್ಯವಸ್ಥೆ ನಂಜರಾಜಯ್ಯ—ಶುದ್ಧ ನಾಚಿಕೆಗೇಡು!"

" ಮಾತೃಶ್ರೀ ಸನ್ನಿಧಾನ ಈ ಬಡವನ ಮೇಲೆ ಕೋಪ ಮಾಡಿಕೊಳ್ಳ ಬಾರದು.—ವ್ಯವಸ್ಥೆ ಸರಿಯಾಗಿಯೇ ಇತ್ತು ತಾಯಿ."

" ಅದರ ಗುರುತು ಇದು!—ಈ ಸಲ ಎಷ್ಟು ಸಕ್ಕರೆ ಕಳುಹಿಸಿದ್ದಿರಿ?"

" ಪ್ರತಿಸಲವೂ ಕಳುಹುತ್ತಿದ್ದಷ್ಟೇ ತಾಯಿ."

" ಸಲಸಲವೂ ಕಳುಹಿದಷ್ಟೂ ಖರ್ಚಾಗುತ್ತಿರಲಿಲ್ಲವೆ ಹಾಗಾದರೆ?"

" ಆಗುತ್ತಿತ್ತು ತಾಯಿ."

" ಮತ್ತೆ ಈಗೇನಾಯಿತು ;—ಹೀಗಾಗುವುದಕ್ಕೆ ? ಅರ್ಧಕ್ಕರ್ಧ ಸಕ್ಕರೆ ಹಿಂದಕ್ಕೆ ಬಂದಿದೆಯಲ್ಲ."

" ಬಂದಿದೆ ತಾಯಿ."

" ಅಂದರೇನು ಅದರ ಅರ್ಥ ? ಸಕ್ಕರೆ ಬೀರಲು ನೀವು ಮಾಡಿದ ವ್ಯವಸ್ಥೆ ಈ ಸಾರಿ ಸರಿಯಾಗಲಿಲ್ಲ ಎಂತ ತಾನೆ?"

" ವ್ಯವಸ್ಥೆಯೆಲ್ಲಾ ಹಿಂದಿನಂತೆಯೇ—"

" ಮತ್ತೆ ಹೀಗೆ ಆದದ್ದೇಕೆ ? ಇಂಥ ಸಂದರ್ಭದಲ್ಲಿ ಸಕ್ಕರೆ ಹಂಚುವು ದಾದರೂ ಏಕೆ? ದೊರೆಗಳಿಗೆ ಪುತ್ರೋತ್ಸವವಾಯಿತೆಂದು ಜನ ಸಂತೋಷಪಡಲಿ. ಕುಮಾರರ ಶ್ರೇಯಸ್ಸನ ಬಯಸಲಿ ಅಂತ – ಅಲ್ಲವೆ?"

" ಹೌದು ತಾಯಿ."

"ಹಂಚಿಕೆಯೇ ಸರಿಯಾಗಿ ಆಗದಿದ್ದರೆ ?"

"ನಮ್ಮವರು ಯಾರೂ ಈ ವಿಚಾರದಲ್ಲಿ ಆಲಸಿಕೆ ತೋರಲಿಲ್ಲ ತಾಯಿ."

"ಮತ್ತೆ ?– ಮತ್ತೇಕೆ ಹೀಗಾಯಿತು ? ಹೇಳಿ ಅದನ್ನಾದರೂ—"

"ನಾನೇ ಕಣ್ಣಾರೆ ಕಂಡದ್ದು– ಬಿನ್ನವಿಸಿಕೊಳ್ಳಬಹುದಾದರೆ—"

"ಆಗಲಿ; ಹೇಳಿ."

"ಮೊದಲು ಸೇರುತ್ತಿದ್ದಂತೆ ಜನ ಸೇರಲಿಲ್ಲ ತಾಯಿ–ಈ ಸಾರಿ. ನಮ್ಮವರು ಕರೆದರೂ—"

"ಹೂಂ—"

"ಈ ವಿಚಾರದಲ್ಲಿ ಜನ ಅಷ್ಟಾಗಿ...."

"ಒಳ್ಳೆಯದು. ವಿಚಾರಿಸೋಣ."

"ಅಪ್ಪಣೆಯಾದರೆ—"

"ನೀವು ಹೊರಡಬಹುದು."

ಸಮ್ಮುಖದ ನಂಜರಾಜಯ್ಯನ ಮಾತು ಮಾತೃಶ್ರೀ ಲಕ್ಷಮ್ಮಣ್ಣಿಯವರ ಮನಸ್ಸನ್ನು ಘಾತಿಸಿತು. ಆ ಹೊಡೆತ ಅವರ ಮನಸ್ಸಿನಲ್ಲಿ ದೊಡ್ಡ ಆಲೋಚನಾ ತರಂಗವನ್ನೇ ಎಬ್ಬಿಸಿತು....

ಅಂತೂ ಇಲ್ಲಿಗೆ ಬಂತು – ಈ ಸರ್ವಾಧಿಕಾರಿಗಳ ಪ್ರಾಬಲ್ಯದ ವ್ಯವಹಾರ ! ....ರಾಜಕೀಯದಲ್ಲಿ ಅವರ ಪ್ರಾಬಲ್ಯ ಏನೇ ಇರಲಿ, ರಾಜರೆಂದರೆ ಜನರಿಗೆ ಗೌರವವಿತ್ತು. ಈಗ ಅದಕ್ಕೇ ಸಂಚಕಾರ ಬಂದಂತೆ ಕಾಣುತ್ತಿದೆಯಲ್ಲ !....ರಾಜ ಮನೆತನದ ಮೇಲೆ ಜನರಿಗೆ ತುಂಬ ಪ್ರೀತಿಯಿದೆಯೆಂಬುದು ನಿಜವೆ ?– ಇಲ್ಲ ಅದು ನಾವು ಬೆಳೆಸಿಕೊಂಡಿದ್ದ ಕಲ್ಪನೆಯೋ ?....ಅದು ಬರೀ ಕಲ್ಪನೆಯಾಗಿದ್ದರೆ – ಅಲ್ಲಿಗೆ—

ಮಾತೃಶ್ರೀಯವರ ಮನಸ್ಸು ಮುಂದಿನ ಘಟ್ಟವನ್ನು ಕುರಿತು ಆಲೋಚಿಸಲು ಹಿಂದೆಗೆಯಿತು. ಆದರೂ ಅವರ ಹೃದಯ ಮಾತ್ರ ರಾಜಮನೆತನದ ಜನ ಪ್ರಿಯತೆ ಕೇವಲ ಕಲ್ಪನೆಯಲ್ಲ ಎಂದು ದೃಢವಾಗಿ ನುಡಿಯಿತು....ಕೊನೆಗೆ ಮಾತೃಶ್ರೀಯವರು ಈ ವಿಚಾರವನ್ನು ಕೂಲಂಕಷವಾಗಿ ವಿಚಾರಮಾಡಿ ನೋಡ ಬೇಕೆಂದು ನಿರ್ಧರಿಸಿದರು. ತಮ್ಮ ಆಪ್ತರಾದ ಕೆಲವರಿಗೆ ತಕ್ಕ ಸೂಚನೆಗಳನ್ನು ಕೊಟ್ಟು ಅವರ ಮೂಲಕ ಪ್ರಜೆಗಳ ನಿಜಾಭಿಪ್ರಾಯವನ್ನರಿಯಲು ವ್ಯವಸ್ಥೆ ಮಾಡಿದರು.

ಅವರ ಪ್ರಯತ್ನದ ಫಲಿತಾಂಶ ವಿಷಮವಾಗಲಿಲ್ಲ. ರಾಜಮನೆತನದ ವಿಚಾರವಾಗಿ ಜನರಿಗಿದ್ದ ಪ್ರೀತಿ ವಿಶ್ವಾಸಗಳು ಕುಗ್ಗಿಲ್ಲ; ಆದರೆ ಅದನ್ನು ಬಹಿರಂಗವಾಗಿ ಪ್ರದರ್ಶಿಸುವ ಧೈರ್ಯ ಮಾತ್ರ ಜನಗಳಲ್ಲಿ ಉಳಿದಿಲ್ಲ– ಎಂಬ ಅಂಶ ಸ್ಪಷ್ಟವಾಯಿತು. "ಹಿಂದೆ ದೊಡ್ಡ ನವಾಬರ ಕಾಲದಲ್ಲಿ ಗೋಡೆಗೋಡೆಗೂ ಒಂದೊಂದು ಕಳ್ಳ ಕಿವಿಯಿತ್ತು; ಈಗ ಸುಲ್ತಾನರ ಕಾಲದಲ್ಲಿ ಗೋಡೆಗೋಡೆಗೂ ಎರಡೆರಡು ಕಿವಿಗಳಾಗಿವೆ; ಎರಡೆರಡು ಕಣ್ಣುಗಳಾಗಿವೆ. ಏನು ಆಡಿದರೂ ತಪ್ಪು; ಏನು ಮಾಡಿದರೂ ತಪ್ಪು. ಸುಲ್ತಾನರಿಗೆ ಸರಿಹೋಗದ್ದು ಆಡಿದವರ ಮಾಡಿದವರ ತಲೆ ಉಳಿಯಬೇಕಲ್ಲ!" ಎಂಬುದೇ ಎಲ್ಲರ ಪಲ್ಲವಿಯಾಗಿದೆ ಎಂಬುದು ಅವರಿಗೆ ವೇದ್ಯವಾಯಿತು.

ಮಾತೃಶ್ರೀಯವರು ಈ ಹೊಸ ಪರಿಸ್ಥಿತಿಯನ್ನು ಕುರಿತು ಆಲೋಚಿಸಿದರು; ಸುಲ್ತಾನನ ಶಕ್ತಿಯನ್ನು ಹೀಗೇ ಬೆಳೆಯಬಿಟ್ಟರೆ, ಅಲ್ಲಿಗೆ– ಎಲ್ಲ ಮುಗಿದ ಹಾಗೆ. ಹಾಗಾಗಲು ಬಿಡಬಾರದು. ಹಿಂದಿನ ಪ್ರಯತ್ನಗಳು ವಿಫಲವಾದುವೆಂದು ಹಿಂದೆಗೆಯಬಾರದು. ಅವನ ಪತನಕ್ಕಾಗಿ,ವಿನಾಶಕ್ಕಾಗಿ ಮತ್ತೆ ಬಲವಾದ ಪ್ರಯತ್ನ ಮಾಡಬೇಕು ತಡಮಾಡಬಾರದು ಎಂದು ನಿರ್ಧರಿಸಿದರು.

§

"ಅವ್ವಾ, ಸುಲ್ತಾನರು ಕಿಡಿಕಿಡಿಯಾ...."

"ಕಿಡಿಯಂತೆ! – ಕಿಚ್ಚು!! ಮುಚ್ಚವ್ವ ನಿನ ಬಾಯಿ."

ಮೊದಲು ಮಾತನಾಡಿದವಳು ಗಾಬರಿಗೊಂಡು ಸುತ್ತಲೂ ನೋಡಿದಳು.

"ಹತ್ರ ಯಾರೂ ಇದ್ದಂಗಿಲ್ಲವ್ವಾ."

"ಹುಚುಹುಚ್ಚಾಗಿ ಆಡಬೇಡ. ಮುಚ್ಚೆ ಬಾಯಿ."

ಮೊದಲು ಮಾತನಾಡಿದವಳ ಕೊರಳು ಕೂತು ಹೋಯಿತು.

ಇಬ್ಬರು ಅವ್ವೆಯರೂ ಮೌನವಾಗಿ ನಡೆದು ಶ್ರೀರಂಗಪಟ್ಟಣದ ಕೋಟೆಯನ್ನು ದಾಟಿ ಮಧುವನವನ್ನು ಸೇರಿದರು. ತಾವು ಹೊತ್ತು ತಂದಿದ್ದ ಬರಿ ಗಡಿಗೆಗಳನ್ನು ಅಲ್ಲೊಂದು ಜಾಜಿ ಪೊದೆಯ ಬದಿಯಲ್ಲಿ ಇಳಿಸಿ, ಅಲ್ಲಿಯೇ ಕುಳಿತರು. ಉಡಿಗೆ ಸಿಕ್ಕಿಸಿಕೊಂಡಿದ್ದ ಎಲೆ ಅಡಿಕೆ ಚೀಲಗಳನ್ನು ತೆಗೆದು ತಮ್ಮ ಮುಂದಿಟ್ಟು ಕೊಂಡು ಸುತ್ತಲೂ ನೋಡಿದರು.

ಮಧ್ಯಾಹ್ನ. ಕೆಲಸಗಾರರೆಲ್ಲ ಊಟಕ್ಕೆ ಹೋಗಿದ್ದರು. ತೋಟದಲ್ಲಿ ಯಾರೂ

ಇದ್ದಂತೆ ಕಾಣಲಿಲ್ಲ. ಅವ್ವೆಯರಿಬ್ಬರೂ ಹತ್ತಿರ ಹತ್ತಿರಕ್ಕೆ ಸರಿದು ಒಬ್ಬರ ನ್ನೊಬ್ಬರು ಒತ್ತಿಕೊಂಡು ಕುಳಿತರು. ಅಡಿಕೆ ಚೂರು ಬಾಯಿಗೆ ಹಾಕಿಕೊಂಡು ಎಲೆಗೆ ಸುಣ್ಣ ಹಚ್ಚುತ್ತಾ ಮಾತು ಆರಂಭಿಸಿದರು. ಬಾಯಿಗಳು ಪಿಸುಗುಟ್ಟು ತ್ತಿದ್ದುವು; ಕಣ್ಣುಗಳು ಕಾವಲು ಕಾಯುತ್ತಿದ್ದುವು.

"ಚನ್ನವ್ವ, — ಅವಳನ್ನ ಕಂಡಿದ್ದೆ."

"ಅಂದ್ರೆ ?"

"ಚಾಂದ್‌ಬೀಬಿ."

"ಯಾರೇ ?"

"ತಿಳೀಲಿಲ್ವ."

"..........."

"ಮೂಲೇಮನೆ—"

"ಗಂಗೀನೇನೆ ? – ಈಗೊಂದೊಸಿ ದಿನದ ಹಿಂದೆ ಸುಲ್ತಾನರು ಒಂದಷ್ಟು ಮಂದಿ ಅವ್ವೇರನ ಹಿಡಿಸಿ, ತುರುಕಿತ್ತೀರನ್ನ ಮಾಡಿಸರಲ್ಲ."

"ಅದೇ. ಅವಳೀ ಕಣೆ. ದೊಡ್ಡ ರಾಣಿಯೋರ ಮೀಣ ನೋಡ್ಕತಾ ಇದ್ದಳಲ್ಲೆ...."

"ಓ ! ಗೊತ್ತಾಯ್ತು ಬಿಡು. ಸುಲ್ತಾನರ ಮಹಲಿನಲ್ಲಿದೀನಿ ಗೆಲಸ ಮಾಡಿ ಕೊಂಡು – ಅಂತ ಅಂದಿದ್ಲು. ಅವಳ್ನ ಅಲ್ಲಿ ಏನೇನೋ ಹೀನ ಕೆಲಸಕ್ಕೆ ಹಾಕಿದಾರೇಂತ ಯಾರೋ ಅಂದಿದ್ರವ್ವ; ನಾನವಳನ್ನ ಕೇಳಲಿಲ್ಲ; ಹ್ಯಂಗೆ ಕೇಳೋದು ? – ಹುಣ್ಣಿನ ಮ್ಯಾಗೆ ಬರೆಹಾಕಿದ ಹಂಗೆ – ಆ – ಈಗ್ಯಾಕೆ ಬಂತು ಅವಳ ಮಾತು."

"ಅದ ಹೇಳಕ್ಕೇ ನಾ ನಿನ್ನ ಇಲ್ಲೀಗೆ ಸಾಗಿಸಿಕೊಂಡು ಬಂದಿದ್ದು. ಗಂಗಿ ಹೇಳಿದಳು 'ಸುಲ್ತಾನರು ಕಿಡಿಕಿಡಿ ಆಗಿದಾರೆ' ಅಂತ."

ಮಾತು ಅಲ್ಲಿಗೆ ನಿಂತಿತು. ಇಬ್ಬರು ಅವ್ವೆಯರೂ ಮತ್ತೆ ಸುತ್ತಲೂ ನೋಡಿ, ಹತ್ತಿರದಲ್ಲಿ ಯಾರೂ ಇಲ್ಲವೆಂದು ಧೈರ್ಯಮಾಡಿಕೊಂಡರು. ಅನಂತರ ಕಾಳವ್ವ ಮಾತು ಮುಂದುವರಿಸಿದಳು.

"ಯಾಕೇಂತಿ ಚನ್ನವ್ವ ? – ಸುಲ್ತಾನರ ಮೇಲೆ ಕೆಂಪು ಜನದ ದಂಡು ತರಿಸೋದಕ್ಕೆ ಪಿತೂರಿ ಕಾಗದ ಸಾಗಸ್ತಾಯಿದ್ದ ಅಂತ, ಸುಲ್ತಾನರ ಜನ ಒಬ್ಬನ್ನ ಹಿಡಕೊಂಡು ಬಂದು ಸುಲ್ತಾನರ ಮುಂದೆ ಹಾಜರ್ಮಾಡಿದರಂತವ್ವ."

“ ಯಾರವ್ವ ಅವನು ?”

“ ನಂಗೆ ತಿಳೀದು. ಗಂಗೀನೂ ಹೇಳಲಿಲ್ಲ-ಆಯ್ತುಲ್ಲ. ಸುಲ್ತಾನರು ತನಿಖೆ ಮಾಡಿದರಂತೆ. ಅವನು, ಒಂದು ಬಿದಿರುಕೋಲಿನಲ್ಲಿ – ಪಯಣ ಮಾಡುವಾಗ ಹಿಡಕೊಂಡು ಹೊಗ್ತಾರಲ್ಲ ಅಂಥ ಬಿದಿರುಕೋಲಿನೊಳಗೆ, ಒಂದು ಕಾಗದ ಬಚ್ಚಿಟ್ಟುಕೊಂಡು ಹೋಗತಿದ್ದ ಅಂತ ಸಾಬೀತಾಯಿತಂತೆ !”

“ ಕಾಗದವೆ ?”

“ ಹೂಂ – ಸಿಕ್ಕಿತಂತೆ ; ಅದರಲ್ಲೇನೋ ಬರೆದಿತ್ತಂತೆ, ನಮ್ಮ ಮಾತಲ್ಲಿ....”

“ ಕನ್ನಡದಲ್ಲಾ ! – ಏನು ಬರೆದಿತ್ತೋ !”

“ ಏನು ಬರೆದಿತ್ತೋ. ಆ ಕಾಗದ ಸುಲ್ತಾನರಿಗೆ ಸುನಾವಣೆ ಆದದ್ದೇ ತಡ ಅವರು ಕಿಡಿಕಿಡಿ ಆಗಿಬಿಟ್ಟರಂತೆ! ಆದರೂ ಅವನ ಗುಂಡಿಗೆ ನೋಡವ್ವ! ಸುಲ್ತಾನರು ಅವನ್ನ ತನಿಖೆ ಮಾಡಿದಾಗ ಅವರಿಗೇ ಎದುರು ಜವಾಬು ಕೊಟ್ಟನಂತೆ !”

“ ಹಂಗೇನು ?—ಯಾರವ್ವ ಅವನು ?”

“ ಗೊತ್ತಿಲ್ಲವ್ವ. ಸುಲ್ತಾನರು ನಿನ್ನ ಹೆಸರೇನು ಅಂತ ಕೇಳಿದಾಗ ‘ ಮೋಮುದ್ದಬ್ಬಾಸು ’ ಅಂದಂತೆ.”

“ ಹೋಗಲೀಬಿಡು ನಮ್ಮೋನಲ್ಲವಲ್ಲ. ತುರುಕರೋನುತಾನೆ !”

“ ಊ – ಗಂಗೀನ ತುರುಕಿತ್ತಿ ಅಂದ ಹಂಗೆ ! ಚನ್ನವ್ವಾ, ಅವನು ಮೊದಲು ಬ್ರಾಮಣ ಆಗಿದ್ದನಂತವ್ವ. ಸುಲ್ತಾನರ ಕಡೆಯೋರು ಯಾವಾಗಲೋ ಅವನ್ನ ಹಿಡಿದು ತಲೆಬೋಳಿಸಿ ತುರುಕರ ಮುಂಜಿ ಮಾಡಿಸಿದರಂತೆ.”

“ ಹಂಗನ್ನು !”

“ ಇದಕೇಳವ್ವ: ಸುಲ್ತಾನರು ತನಿಖೆಮಾಡತಾ ‘ ಎಷ್ಟು ದಿನದಿಂದ ನೀನು ಇಂಥ ಹಲ್ಕ ಕೆಲಸ ನಡಸ್ತಿದೀಯ ’ ಅಂತ ಕೇಳಿದರೆ, ಅವನೇನ್ನಬೇಕು !–‘ನೀನು ನನ್ನಂತ ಬ್ರಾಂಬರಿಗೆ ತುರುಕರ ಮುಂಜಿ ಮಾಡಿಸಿ, ನಮ್ಮ ಗುಡಿ ಗುಂಡಾರ ಹಾಳು ಮಾಡೋದಕ್ಕೆ ಆರಂಭಮಾಡದಾಗಿನಿಂದ ’ ಅಂತ ಅಂದನಂತೆ ! ಅದ ಕೇಳಿ ಸುಲ್ತಾನರು ಕೆದರಿದ ಕೆಂಡದ್ಹಾಂಗೆ ಕಣ್ಣು ಕೆಂಪಗೆ ಮಾಡಿಕೊಂಡು ‘ ಇವನ್ನ ತುಂಡುತುಂಡುಮಾಡಿ ಕಾಗೆ, ಹಂದಿಗಳಿಗೆ ಬಿಸಾಡಿ ’ ಅಂತ ಅಪ್ಪಣೆ ಮಾಡಿದರಂತೆ !”

"ಪಾಪ!"

"ಅಷ್ಟಕ್ಕೇ ಏನನ್ನುತೀ ಇದಕೇಳವ್ವ!—ಸುಲ್ತಾನರು ಹಾಗೆ ಅಪ್ಪಣೆ ಮಾಡಿದರೆ, ಅವನಂತಾನಂತೆ – 'ನಾನು ಹಚ್ಚ್ಯೋ ಉರಿ ಹಚ್ಚಿ ಆಯಿತು. ಅದು, ನಿನ್ನ ಸುಟ್ಟು ಬೂದಿ ಮಾಡೋವರೆಗೂ ಆರೋದಿಲ್ಲ. ನನ್ನ ಕೊಂದರೇನು! – ನೀನು ಉಳಿಯೋ ಹಾಗಿಲ್ಲ' ಅಂತ. ಸುಲ್ತಾನರ ಎದುರಿಗೆ ಹೀಗಾಡಿದರೆ ಏನಾದೀತು ಹೇಳು? – ನಾಲಕ್ಕು ಜನ ಜಟ್ಟಿಗಳು ಅವನ ಬಾಯಿಗೆ ಬಟ್ಟೆ ಚಂಡು ತುರುಕಿ, ಕತ್ತು ಮೇಲೆ ಮಿದ್ದು, ಬೆನ್ನು, ಎದೆ ಮೇಲೆ ಗುದ್ದಿ ಎಳಕೊಂಡು ಹೋದರಂತೆ...."

ಚನ್ನವ್ವ ದೊಡ್ಡ ನಿಟ್ಟುಸಿರು ಬಿಟ್ಟಳು.

"ಯಾಕೆ ಚನ್ನವ್ವ ಇಷ್ಟು ಉದ್ದನೆ ಉಸರೆಳೀತಿದೀಯ?"

"ಅಂತೂ ಮುಗೀತು ಅಲ್ಲಿಗೆ, ಅವನ ಅವತಾರ! ಊಂ. – ಆದರೂ ಬಹಾದ್ದೂರ್ ಗಂಡಸು ಕಣವ್ವ ಅವನು. ಸುಲ್ತಾನರ ಎದುರಿಗೇ ಅವರ ಮುಖ ಮುರಿಯೋ ಹಾಗೆ ಮಾತನಾಡಿದನಲ್ಲ!"

"ಅವನು ಹೇಳಿದ್ದೆಲ್ಲಾ ನಿಜ ಅಂತೀಯ?"

"ನಾನು ಹ್ಯಾಗೆ ಹೇಳಲಿ ಕಾಳವ್ವ!"

"ಏನೋ! ಅಂತು ಅವನು ಹೇಳಿದ ಹಂಗೇನಾದರೂ ಆದ್ರೆ—"

"ನಮ್ಮ ಜನಕ್ಕೆಷ್ಟೋ ನೆಮ್ಮದಿ ಆದೀತೂನ್ನು."

"ಅಲ್ವಾ! – ಆ ಗಂಗಿ ಪಾಡು, ದುರ್ಗಿ ಪಾಡು, ಆ ಸಿದ್ದೀ ಪಾಡು ನೋಡಿದ್ರೆ ಕರುಳು ಚುರುಕ್ ಅಂತದೆ. ಆ ಸುಲ್ತಾನಂಗೆ ಹಿಡಿ ಶಾಪ ಹಾಕೋ ಹಂಗಾಗತದೆ." – ಕಾಳವ್ವ ತಾನೂ ದೊಡ್ಡದಾಗಿ ನಿಟ್ಟುಸಿರುಬಿಟ್ಟಳು.

"ಆಯ್ತಲ್ಲ ನಡೀ" – ಚನ್ನವ್ವ ಗಡಿಗೆಗಳನ್ನೆತ್ತಿಕೊಂಡೆದ್ದಳು. ಕಾಳವ್ವನೂ ಗಡಿಗೆಗಳನ್ನೆತ್ತಿಕೊಂಡು ನಿಂತು ಸುತ್ತಲೂ ನೋಡಿ, ಚನ್ನವ್ವನ ಕಿವಿಯಲ್ಲಿ ಪಿಸು ಗುಟ್ಟಿದಳು:

"ಹೇಳಬೇಕಾದ್ದೇ ಮರೆತಿದ್ದೆನಲ್ಲೆ ಚನ್ನವ್ವ! – ಗಂಗಿ ಹೇಳಿದಳು: ಇದೆಲ್ಲಾ ನಾನು ನಿನಗೆ ಹೇಳಬೇಕು; ನೀನು ಇದನ್ನ ದೊಡ್ಡ ರಾಣಿಯವರಿಗೆ, ಅವರು ಮೀಣಕ್ಕೆ ಬಂದಾಗ ಅರಿಕೆ ಮಾಡ್ಕೋಬೇಕು – ಅಂತ. ರಾಣಿಯವರು ಇನ್ನೇನಾದರೂ ಕೇಳಿದರೆ ಆ ಕಾಗದದಾಗ ಯಾರ ಯಾರ ಹೆಸರೋ ಇದ್ವಂತೆ.

ಯಾರು ಯಾರೋ ದೊಡ್ಡದೊಡ್ಡೋರ ಮೇಲೆ ಅನುಮಾನ ಬಂದಿದೆಯಂತೆ–ಅಂತ ಹೇಳಬೇಕಂತೆ. ತಿಳೀತೇನವ್ವ ?"

"ತಿಳೀತವ್ವ."

"ನಡಿ; ಹೊಳೀಗೆ ಹೋಗಿ ನೀರು ಮೊಕ್ಕೊಂಡು ಹೋಗಾಣ."

"ನಡಿ ಹೋಗಾಣ."

§

ಮೂರು ವರ್ಷಗಳ ಹಿಂದೆ ಇಂಗ್ಲಿಷರಿಗೆ ಸೋತು, ಅವರು ಹೇಳಿದ ಅವಮಾನಕರವಾದ ಷರತ್ತುಗಳಿಗೊಪ್ಪಿ ಸಂಧಿಮಾಡಿಕೊಳ್ಳಬೇಕಾಗಿ ಬಂದ ದುಸ್ಥಿತಿಯ ನೋವು ಒಂದು ಕಡೆ; ತಮ್ಮ ರಾಜ್ಯದಲ್ಲೇ ತಮ್ಮ ವಿರುದ್ಧ ವಿದ್ರೋಹದ ಉರಿ ಏಳುತ್ತಿರುವುದರ ಕಾವು ಇನ್ನೊಂದೆಡೆ. ಈ ಕಾವು ನೋವುಗಳ ನಡುವೆ ಸಿಕ್ಕಿ ಸುಲ್ತಾನರು ಹುಚ್ಚಾಗಿದ್ದರು. ವಿರೋಧ ಬಲವಾಗಿ, ವಿದ್ರೋಹದ ಉರಿ ರಾಜ್ಯದ ಮೇಲೆಲ್ಲಾ ಹಬ್ಬಿ ಹರಡುತ್ತಿದೆಯೆಂಬ ಬಗೆಗೆ ಹೆಚ್ಚು ಹೆಚ್ಚು ನಿದರ್ಶನ ದೊರೆತಂತೆಲ್ಲಾ ಸುಲ್ತಾನರ ಮನೋವೃತ್ತಿಯಲ್ಲಿ ಪ್ರಬಲವಾದ ಬದಲಾವಣೆಗಳು ಆರಂಭವಾದುವು. ನಾನಾ ವಿಧವಾದ ವಿಚಿತ್ರ ಭಾವನೆಗಳು ಅವರ ಮನದಲ್ಲಿ ಮೊಳೆದುವು....

ಮೈಸೂರಿನ ಹಿಂದೂ ರಾಜಮನೆತನವನ್ನು ಮಣ್ಣುಗೂಡಿಸದೆ ತಮಗೆ ಉಳಿಬಾಳಿಲ್ಲವೆಂಬ ಆಲೋಚನೆ ಅನೇಕ ಬಾರಿ ಅವರ ಮನಸ್ಸಿಗೆ ಬಂತು; – ಆ ವಂಶವನ್ನು ನಿರ್ಮೂಲಗೊಳಿಸಬೇಕೆಂದೂ ಅವರು ನಿರ್ಣಯಿಸಿದ್ದುಂಟು. ಆದರೆ– ಆ ನಿರ್ಣಯವನ್ನು ಕುರಿತು ಪುನರಾಲೋಚನೆ ಮಾಡಿದಾಗಲೆಲ್ಲಾ ರಾಜವಂಶದ ಸಮಸ್ಯೆ ಹೆಚ್ಚು ಹೆಚ್ಚು ಸಿಗುರಾಗುತ್ತಿತ್ತೇ ವಿನಾ ನಯವಾಗುತ್ತಿರಲಿಲ್ಲ....

ಎಷ್ಟೇ ಆದರೂ ಇದು ಹಿಂದೂ ರಾಜ್ಯ. ಹಿಂದೂಗಳಿಗೆ ಅವರ ರಾಜರ ಮೇಲೆ ಅಭಿಮಾನ ತಪ್ಪದು – ಹಿಂದೂ ರಾಜವಂಶವನ್ನು ನಾಶಮಾಡುವುದೆಂದರೆ ಹಿಂದೂ ಪ್ರಜೆಗಳನ್ನೂ ಹಿಂದೂ ಪಾಳಯಗಾರರನ್ನೂ ಕೆಣಕಿ ಎಬ್ಬಿಸಿದಂತೆ– ರಾಜ್ಯದ ಆಡಳಿತವೇನೋ ನನ್ನ ಕೈಯಲ್ಲಿದೆ – ಹೆಸರಿಗೆ. ಆದರೆ ಪ್ರಮುಖ ಅಧಿಕಾರದಲ್ಲಿರುವವರನೇಕರು ಹಿಂದೂಗಳಲ್ಲ! ಅವರೆಲ್ಲಾ ತಿರುಗಿಬಿದ್ದರೆ!....

ಅಂಥ ಸಂದರ್ಭ ಸಿಕ್ಕಿದರೆ ಸಾಕೆಂದು ಕಾದಿರುತ್ತಾರೆ ಈ ಕಳ್ಳ ಇಂಗ್ಲಿಷರು– ನನ್ನ ರಾಜ್ಯ ನುಂಗುವುದಕ್ಕೆ ಅವರಿಗೆ ಯಾವ ಕಾರಣವಾದರೂ ಸಾಕು....ಈ

ರಾಜಮನೆತನದ ಮುದುಕಿಯ ಮಾತು ಕೇಳಿಕೊಂಡು ತಾನೆ ಆ ಕಳ್ಳ ಇಂಗ್ಲಿಷರು ಈ ಶ್ರೀರಂಗಪಟ್ಟಣದ ಹೆಬ್ಬಾಗಿಲಿಗೆ ಬಂದು ನನ್ನನ್ನು ಹೆದರಿಸುವಂತಾದದ್ದು !.... ಇದಕ್ಕೆ ಆ ತಿರುಮಲಾಚಾರಿಯ ರಾಯಭಾರ !....ಎಲ್ಲ ಕಳ್ಳರು, ದ್ರೋಹಿಗಳು - ಮೇಲುನೋಟಕ್ಕೆ ಇವರೆಲ್ಲಾ ಸಭ್ಯರೇ; ನಮ್ಮ ಹಿತಚಿಂತಕರೇ !

ಆ ಖಂಡೇರಾಯ ! - ದೊಡ್ಡ ನವಾಬರಿಗೇ ಮೋಸ ಮಾಡಿದ ! - ಅವರು ಅವನನ್ನು ಪಂಜರದಲ್ಲಿರಿಸಿ ' ಗಿಣಿ ಸಾಕಿದ ಹಾಗೆ ಸಾಕಿ ' ಕೊಂದರೂ ಈ ಹಿಂದೂ ಜನಕ್ಕೆ ಬುದ್ಧಿ ಬರಲಿಲ್ಲ. ಮತ್ತೆ ಅದೇ ಮೋಸ; ಅದೇ ದ್ರೋಹ.

ಅಂಚೆ ಶಾಮಯ್ಯ, ಅವನ ತಮ್ಮ ರಂಗಯ್ಯ-ಎಲ್ಲ ಖಂಡೇರಾಯನ ದಾರಿಯೇ - ಕೊನೆಗೆ ಅವನ ಗತಿಯೇ. ಆ ಅಂಚೆ ಶಾಮಯ್ಯನ ಪಿತೂರಿಗೆ ಸೇರಿದ್ದವರು ಏಳು ನೂರು ಮಂದಿ ! ಅವರೆಲ್ಲರನ್ನೂ ಕೊಂದಿದ್ದಾಯಿತು. ಆದರೂ ಈ ಹಿಂದೂ ಜನಕ್ಕೆ ಬುದ್ಧಿ ಬರಲಿಲ್ಲ.

ಮತ್ತೆ ಅದೇ ತಂತ್ರ. ಅದೇ ಮೋಸ-ಆ ತೋಷಿಖಾನೆ ಕೃಷ್ಣರಾಯನದು ! ನೀಚ ! ಅವನ ಮೋಸಕ್ಕೆ ತಕ್ಕ ಶಿಕ್ಷೆ ಕೊಟ್ಟಿದ್ದಾಯಿತು - ಕುದಿಯುವ ಎಣ್ಣೆ ಕೊಪ್ಪರಿಗೆಯಲ್ಲಿ ಕೆಡವಿಸಿದ್ದು !—

ಆದರೇನು ಪ್ರಯೋಜನ ! - ಈ ಹಿಂದೂ ಜನ ತಮ್ಮ ಈ ಹಳೆ ಚಾಳಿ ಬಿಡುವ ಹಾಗಿಲ್ಲ. ಅದನ್ನ ಬಿಡಿಸಬೇಕಾದರೆ ಅವರನ್ನ ಆ ಸೈತಾನಿ ಧರ್ಮದಿಂದ ಬಿಡಿಸಬೇಕು. ಇಸ್ಲಾಂ ದೀಕ್ಷೆ ಕೊಡಿಸಬೇಕು. ಅದರ ಮಹಾತ್ಮೆ ವಿವರಿಸಬೇಕು. ಇಸ್ಲಾಂ ಧರ್ಮ ಅವರ ರಕ್ತಗತವಾಗುವಂತೆ ಮಾಡಬೇಕು. ಆಗ ಅವರಿಗೆ ನನ್ನ ಶ್ರದ್ಧೆ ಅರ್ಥವಾಗುತ್ತದೆ. ನಮ್ಮ ಸೈನ್ಯದಲ್ಲಿ, ಆಡಳಿತದಲ್ಲಿ ಇರುವ ಎಲ್ಲ ಹಿಂದೂ ಅಧಿಕಾರಿಗಳಲ್ಲೂ ಈ ಇಸ್ಲಾಂ ಧರ್ಮ ಶ್ರದ್ಧೆ ಬೇರೂರಿದರೆ ! - ಆಗ ನೋಡಬೇಕು !

ಮೊದಲು ಮೈಸೂರು ರಾಜ್ಯ ಪೂರ್ತಿಯಾಗಿ ಇಸ್ಲಾಮಿ ರಾಜ್ಯ ! ಅದನ್ನು ಮೂಲ ಕೇಂದ್ರವನ್ನಾಗಿ ಮಾಡಿಕೊಂಡು ಆಮೇಲೆ ಹೈದರಾಬಾದ್, ಆರ್ಕಾಟ್, ತಿರುಚಿನಾಪಳ್ಳಿ, ಮಲೆಯಾಳ....ಹೀಗೆ ಇಡೀ ದಕ್ಷಿಣ ಭಾರತ-ಇಸ್ಲಾಂ ರಾಷ್ಟ್ರ !....

ಅಬೂಬಕರ್‌ನ ಕಾಲದಲ್ಲಿ ಅರಬ ಕಿಲಾಫತ್ ಸ್ಥಾಪಿತವಾದ ಹಾಗೆ - ಟಿಪ್ಪೂ ಸುಲ್ತಾನನ ಕಾಲದಲ್ಲಿ ದಖ್ಖನಿ ಕಿಲಾಫತ್ - ದಕ್ಷಿಣ ಭಾರತದಲ್ಲಿ !

ಮೊದಲು ಇದಾಗಲಿ - ಇಂಗ್ಲಿಷರು ಇಲ್ಲಿಂದ ಕಾಲ್ತೆಗೆಯಲಿ. ಆಮೇಲೆ ಎಷ್ಟರ ಕೆಲಸ ಹಿಂದುಸ್ತಾನಿ ಕಿಲಾಫತ್ ಸ್ಥಾಪನೆ. ಮೊಗಲ್ ಪಾದ್‌ಷಾಹಿ

ಈಗಾಗಲೇ ಸತ್ತಿದೆ. ಅದು ಬಿಟ್ಟ ಸ್ಥಾನಕ್ಕೆ ಅಧಿಕಾರಿ ಇನ್ನಾರು? – ನಾನೇ – ಟಿಪ್ಪೂ ಸುಲ್ತಾನ್ – ಹಿಂದುಸ್ತಾನದ ಮೊದಲನೆಯ ಕಲೀಫ!....

ಪಾದ್‌ಷಾ! ಕಲೀಫ!—. ನಾನು ಪಾದ್‌ಷಾ, ಕಲೀಫ! ಛೆ. ನಾನು ಸಾಧಿಸಲಿರುವ ಇಸ್ಲಾಂಧರ್ಮದ ಪುನರುದ್ಧಾರ ಕಾರ್ಯಕ್ಕೆ – ಈ ಪದವಿಗಳು ತೀರಾ ಅಲ್ಪ!....ನಿಜವಾಗಿ ನನ್ನ ಸಾಧನೆ ಪೈಗಂಬರರ ಸಾಧನೆಯಷ್ಟೇ ಮುಖ್ಯ. ಅಷ್ಟೇ ಮಹತ್ವದ್ದು.

ನಿಜ. ನಾನೂ – ಪೈಗಂಬರ್....

ಹಿಂದೆ ಮಹಮ್ಮದ್ ಪೈಗಂಬರ್‌ರವರ ಸಂಕಲ್ಪಕ್ಕೆ, ಕತ್ತಿಗೆ ಇದಿರಾದದ್ದು ಯಾವುದೂ ಉಳಿಯಲಿಲ್ಲ—ಇಂದು – ಪೈಗಂಬರ್ ಟಿಪ್ಪೂ ಸುಲ್ತಾನರವರ ಸಂಕಲ್ಪಕ್ಕೆ, ಕತ್ತಿಗೆ ಯಾವುದೂ ಅಡ್ಡನಿಲ್ಲಲಾರದು; ನಿಲ್ಲಕೂಡದು....ನಿಜ; "ನಾನು ಮಾಡುವ ಪ್ರಾರ್ಥನೆ, ನಾನು ಕೊಡುವ ಬಲಿ, ನನ್ನ ಬಾಳು, ಸಾವು ಎಲ್ಲವೂ ಅಲ್ಲಾನಿಗಾಗಿ, ಸರ್ವಲೋಕನಾಥನಿಗಾಗಿ...."

§

"ಮರೆತಿದ್ದೆ. ಪೂರ್ವದಗಡಿ ಕಾವಲು ವ್ಯವಸ್ಥೆ ಏನಾಯಿತು ಭಕ್ಷಿಗಳೆ?"

"ಅದನ್ನು ಬಲಪಡಿಸಿದ್ದೇನೆ ಖಾವಿಂದ್. ಕಮರುದ್ದೀನ್ ಸಾಹೇಬರು ತಾವೇ ಆ ವ್ಯವಸ್ಥೆಯನ್ನೆಲ್ಲಾ ನೋಡಿ ಮೆಚ್ಚಿ ಪತ್ರ ಬರೆಸಿದ್ದಾರೆ."

"ಗೆಜ್ಜಲಹಟ್ಟಿ ಕಡೆ."

"ಅಲ್ಲೂ ವ್ಯವಸ್ಥೆ ಚೆನ್ನಾಗಿದೆ. ಐದಾರು ದಿನಗಳ ಹಿಂದೆ ತಾನೆ ನಾನು ಅಲ್ಲಿಂದ ಬಂದಿದ್ದು."

"ಶಹಬ್ಬಾಸ್! ನೋಡಿ ಮೀರ್‌ಸಾದಕ್ ಸಾಹೇಬರೇ. ಪೂರ್ಣಯ್ಯನವರಿಗೆ ವಯಸ್ಸು ಏರಿದಂತೆಲ್ಲಾ ಉತ್ಸಾಹವೂ ಏರುತ್ತದೆ. ನಾವು ಹೇಳಿದ ಒಂದು ತಿಂಗಳೊಳಗಾಗಿ ಎರಡು ಗಡಿಗಳ ರಕ್ಷಣೆಗೆ ಪಕ್ಕಾ ವ್ಯವಸ್ಥೆಮಾಡಿದ್ದಾರೆ."

"ಖಾವಿಂದ್, ಇದರಲ್ಲೆಲ್ಲಾ ಪೂರ್ಣಯ್ಯನವರು ಪಳಗಿದ ಕೈ. ರಾಜ್ಯದ ಗಡಿಗಳಿಗೆ ಹೋಗಿ ಬರುವುದು ಅಂದರೆ ಅವರಿಗೆ ತೊಟ್ಟಿ, ನಡುಮನೆಗೆ ಹೋಗಿ ಬಂದ ಹಾಗೆ!"

"ಉತ್ತರ ಪಶ್ಚಿಮದ ಗಡಿಗಳ ಕಡೆಗೂ ನಾವು ಗಮನ ಕೊಡಬೇಕು. ಅತ್ತ

ಆ ಹೈದರಾಬಾದಿನವನನ್ನು ನಂಬುವಂತಿಲ್ಲ. ಅವನಂತೂ ಕಾಫಿರ್‌ಗಳಿಗಿಂತ ಕೀಳಾಗಿದ್ದಾನೆ. ಇತ್ತ ಈ ಕೊಡಗಿನವರೂ ಅಷ್ಟೇ."

"ತಕ್ಕ ಬಂದೋಬಸ್ತ್ ಮಾಡುತ್ತಿದ್ದೇನೆ ಖಾವಿಂದ್."

"ನೀವು ಕೆಲಸದಲ್ಲಿ ಬಲು ಚೂಟಿ ಭಕ್ಷಿಯವರೆ. ಸ್ವಲ್ಪ ಸೂಚನೆ ಕೊಟ್ಟರೆ ಸಾಕು – ನಮ್ಮ ಮನಸ್ಸಿನ ಮರ್ಜಿ ಹಿಡಿದು ಕೆಲಸ ಮಾಡಿಬಿಡುತ್ತೀರಿ."

"ಖಾವಿಂದರ ಅಭಿಮಾನ ದೊಡ್ಡದು."

"ನಿಮ್ಮ ಕಾರ್ಯದಕ್ಷತೆಯನ್ನು ಕಂಡು ನಮಗೆ ನಿಮ್ಮ ಮೇಲೆ ತುಂಬ ಗೌರವ, ಪ್ರೀತಿ."

"ಖಾವಿಂದರ ಅನುಗ್ರಹ."

"ಭಕ್ಷಿಗಳೆ, ನಿಮ್ಮ ಮೇಲೆ ನಮ್ಮ ಪೂರ್ಣ ಅನುಗ್ರಹವನ್ನು ತೋರಿ, ನಿಮ್ಮನ್ನೂ ನಿಮ್ಮ ವಂಶವನ್ನೂ ಸಕಲ ಕಾಲಕ್ಕೂ ಉದ್ಧಾರ ಮಾಡಬೇಕು ಎಂಬ ಪ್ರಬಲವಾದ ಆಸೆಯುಂಟಾಗಿದೆ ನಮಗೆ."

"ಖಾವಿಂದ್, ಈ ಮೊದಲು ದೊಡ್ಡ ನವಾಬರು, ಆಮೇಲೆ ತಾವು – ಹೀಗೆ ತಮ್ಮ ವಂಶದ ಅನುಗ್ರಹದಿಂದಲೇ ನಾನು ಉದ್ಧಾರವಾದದ್ದು; ದೊಡ್ಡ ನವಾಬರು ಚಿನ್ನದ ಛತ್ರಿ ಅನುಗ್ರಹಿಸಿ ಗೌರವಿಸಿದರು; ಮರುಹಳ್ಳಿ ಉಂಬಳಿ ಹಾಕಿಕೊಟ್ಟು ರಕ್ಷಿಸಿದರು. ಅದನ್ನು ಅನುಭವಿಸುತ್ತಾ ತಮ್ಮ ಸೇವೆ ಮಾಡಿಕೊಂಡಿದ್ದೇನೆ. ತಮ್ಮ ಅಭಿಮಾನ ದೊಡ್ಡದು. ನನಗೆ ಸ್ವಲ್ಪವೂ ದುರಾಸೆಯಿಲ್ಲ. ನನ್ನ ಸೇವೆ ಖಾವಿಂದರಿಗೆ ಮೆಚ್ಚಿಕೆಯಾದರೆ ಸಾಕು. ಅದಕ್ಕಿಂತ ದೊಡ್ಡ ಅನುಗ್ರಹವೇ ನಿದ್ದೀತು!"

"ನಿಮ್ಮ ಸೇವೆ ನಮಗೆ ತುಂಬಾ ಮೆಚ್ಚಿಕೆಯಾಗಿದೆ ಭಕ್ಷಿಯವರೆ. ಆದ್ದರಿಂದಲೇ ನಿಮಗೆ ಈ ಮಾತು ಹೇಳುತ್ತಿರುವುದು. ನೀವು ನಮ್ಮವರಾಗ ಬೇಕು."

"ನಾನು ಯಾವಾಗಲೂ ತಮ್ಮವನೇ ಖಾವಿಂದ್. ಕಾಯಾ ವಾಚಾ ಮನಸಾ ತಮ್ಮ ಸೇವೆ, ಹಿತರಕ್ಷಣೆ ಬಿಟ್ಟು ಬೇರೆ ಯೋಚನೆ ಮಾಡಿದವನೇ ಅಲ್ಲ. ಇಷ್ಟರ ಮೇಲೆ ಅಜ್ಞಾನದಿಂದ ನಾನೇನಾದರೂ ತಪ್ಪು ಮಾಡಿದ್ದರೆ, ತಪ್ಪು ಅಭಿಪ್ರಾಯಕ್ಕೆ ಎಡೆಗೊಟ್ಟದ್ದರೆ ಖಾವಿಂದರು ಉದಾರ ಮನಸ್ಸಿನಿಂದ ಕ್ಷಮಿಸ ಬೇಕು."

"ಭಕ್ಷಿಯವರಿಂದ ಇದುವರೆಗೆ ಯಾವ ತಪ್ಪೂ ಆಗಿಲ್ಲ ಖಾವಿಂದ್."

"ಆ ವಿಚಾರವಾಗಿ ನೀವು ಶಿಫಾರಸು ಮಾಡತಕ್ಕದ್ದೇನಿದೆ ದಿವಾನರೆ? ನಾವೇ ಚೆನ್ನಾಗಿ ಬಲ್ಲೆವು. ಭಕ್ಷಿಯವರಿಂದ ಈವರೆಗೆ ಯಾವ ತಪ್ಪೂ ಆಗಿಲ್ಲ. ಆದ್ದರಿಂದಲೇ ಅವರ ಮೇಲೆ ನಮಗೆ ಅಷ್ಟೊಂದು ಉತ್ಕಟ ಅಭಿಮಾನ ಉಂಟಾಗಿರುವುದು."

"ಕೃತಾರ್ಥನಾದೆ."

"ನಾವು ನಿಮಗೆ ಕೊಡಬಹುದಾದ ಅತಿ ದೊಡ್ಡ ಗೌರವವನ್ನು ಪಡೆದು ನೀವೂ ಕೃತಾರ್ಥರಾಗಬೇಕು. ನಮ್ಮನ್ನೂ ಕೃತಾರ್ಥರನ್ನಾಗಿ ಮಾಡಬೇಕು."

"ಅಂಥ ಗೌರವಕ್ಕೆ ಪಾತ್ರನಾಗಲು ತಕ್ಕ ಅರ್ಹತೆ—"

"ನಿಮಗಿದೆ ಭಕ್ಷಿಯವರೆ; ನಮ್ಮ ಮಾತನ್ನು ನಿರಾಕರಿಸಕೂಡದು–ನೀವು ಇಸ್ಲಾಂ ದೀಕ್ಷೆ ಪಡೆದು ಪುನೀತರಾಗಬೇಕು; ನಮ್ಮ ಮನಸ್ಸಂತೋಷಪಡಿಸಬೇಕು."

"ಖಾವಿಂದರ ಮನಸ್ಸಂತೋಷಕ್ಕೆ ಅಡ್ಡಿ ಬರಲು ಈ ಸೇವಕ ಎಷ್ಟರವನು!"

"ಶಹಬ್ಬಾಸ್. ಕೇಳಿದಿರಾ ದಿವಾನರೆ. ಪ್ರಭುಭಕ್ತಿ ಎಂದರೆ ಹೀಗಿರಬೇಕು."

"ಹೌದು ಖಾವಿಂದ್."

"ದಿವಾನರೆ, ಇನ್ನೊಂದು ಮಾತು – ಶೃಂಗೇರಿಯಿಂದ ಏನಾದರೂ ಸುದ್ದಿ ಬಂದಿತೇನು?"

"ಖಾವಿಂದರು ಆ ವಿಚಾರವನ್ನು ತೋಷಿಖಾನೆ ಭಕ್ಷಿಗಳಿಗೆ ವಹಿಸಿದ್ದಿರಿ.— ಪೂರ್ಣಯ್ಯನವರೆ, ಹೆಚ್ಚಿನ ಸಮಾಚಾರವೇನಾದರೂ ಇದ್ದರೆ ಖಾವಿಂದರಲ್ಲಿ ಅರಿಕೆ ಮಾಡಿಕೊಳ್ಳಬಹುದಲ್ಲ."

"ನಾನೇ ಆ ಮಾತು ಆಡಬೇಕೆಂದಿದ್ದೆ. ಖಾವಿಂದರೇ ಆಜ್ಞೆ ಮಾಡಿದ್ದು ಒಳಿತೇ ಆಯಿತು. ಶೃಂಗೇರಿಗೆ ಹೋಗಿದ್ದ ನಮ್ಮ ಹರಿಕಾರ ನೆನ್ನೆ ರಾತ್ರಿ ಹಿಂದಕ್ಕೆ ಬಂದ."

"ಸ್ವಾಮಿಗಳು ಏನು ಹೇಳಿ ಕಳುಹಿಸಿದ್ದಾರೆ?"

"ಖಾವಿಂದರ ಅಭಿಪ್ರಾಯವನ್ನು ಪೂರ್ಣವಾಗಿ ಅನುಮೋದಿಸಿದ್ದಾರೆ."

"ಅಂದರೆ?"

"'ರಾಜ್ಯವನ್ನು ಯುದ್ಧದ ಸುಳಿಯಿಂದ ದೂರವಿಟ್ಟು ಜನರ ಶಾಂತಿ, ಸೌಖ್ಯಗಳನ್ನು ಸಾಧಿಸಲು ಖಾವಿದಂದರು ಮನಸ್ಸು ಮಾಡಿರುವುದು ತುಂಬಾ

ಶ್ಲಾಘನೀಯ. ಆ ಪ್ರಯತ್ನಕ್ಕೆ ನಮ್ಮ ಪೂರ್ಣ ಆಶೀರ್ವಾದವಿದೆ' – ಎಂದು ತಿಳಿಸಿದ್ದಾರೆ."

"ಭಕ್ಷಿಗಳೇ – ಇದೇನು ನೀವೂ ಹೀಗೆ ಆಡುತ್ತಿದ್ದೀರಿ. ನಮ್ಮ ಪತ್ರದ ಒಕ್ಕಣೆ ಅದೇನೇ ಇರಲಿ, ನಾವು ಅಪೇಕ್ಷಿಸಿದ್ದು ಅವರ ಆಶೀರ್ವಾದವಲ್ಲ. ನಮ್ಮ ರಾಜಕಾರಣಕ್ಕೆ ಅವರ ನೆರವು. ಆ ವಿಚಾರ ಏನಾಯಿತು ಹೇಳಿ."

"ಅಂಥ ನೆರವು ಕೊಡುವ ಅಪೇಕ್ಷೆ ಸ್ವಾಮಿಗಳಿಗೆ ಇರುವಂತೆ ಕಾಣುತ್ತದೆ ಖಾವಿಂದ್."

"ಯಾಕೆ ? ಆ ವಿಚಾರ ಅವರು ಸ್ಪಷ್ಟಪಡಿಸಿಲ್ಲವೇನು ?"

"ಸ್ಪಷ್ಟವಾಗಿಯೇ ಇದೆ. 'ಚಾತುರ್ಮಾಸ್ಯ ಸಂಕಲ್ಪ ಮುಗಿಯುವವರೆಗೆ ಶೃಂಗೇರಿ ಬಿಡುವಂತಿಲ್ಲ. ಆದ್ದರಿಂದ ವಿಜಯದಶಮಿ ಉತ್ಸವ ಮುಗಿದ ಮೇಲೆ ಪುಣೆಗೆ ಹೊರಡುವ ಪ್ರಯತ್ನ ಮಾಡುತ್ತೇವೆ" ಎಂದರಂತೆ.

"ಒಟ್ಟಿನಲ್ಲಿ ಈಗ ಹೋಗಲು ಮನಸ್ಸಿಲ್ಲ ಅನ್ನಿ."

"ಹಾಗಲ್ಲ. ಖಾವಿಂದ್. ಚಾತುರ್ಮಾಸ್ಯ ಸಂಕಲ್ಪ ಮಾಡಿದ ಮೇಲೆ ಯತಿಗಳು ಇದ್ದಲ್ಲಿಂದ ಕದಲುವುದಿಲ್ಲ. ಇದು ಅವರ ಧರ್ಮ."

"ಏನು ಧರ್ಮವೋ ಕರ್ಮವೋ! ಅಂತು ನಾವು ಅಪೇಕ್ಷಿಸಿದ್ದೊಂದೂ ಆಗುವುದಿಲ್ಲ."

"ಖಾವಿಂದರು ಅಶಾಂತರಾಗಬಾರದು. ವಿಜಯದಶಮಿ ಉತ್ಸವ ಮುಗಿದೊಡನೆಯೇ ಪುಣೆಗೆ ಹೊರಡಬೇಕು. ಅಲ್ಲಿ ಶ್ರೀಮಂತ ಪೇಷ್ವೆಯವರನ್ನೂ ಮರಾಠೀ ಸರದಾರರನ್ನೂ ಕಾಣಬೇಕು. ಪರಕೀಯರನ್ನು ನಮ್ಮ ಮಾತೃಭೂಮಿಯಿಂದ ಓಡಿಸಲು, ಅವರೆಲ್ಲರೂ ಖಾವಿಂದರ ಪ್ರಯತ್ನಕ್ಕೆ ಪೂರ್ಣ ಬೆಂಬಲಕೊಡಬೇಕೆಂದು ಬೋಧಿಸಬೇಕು – ಎಂದು ಈ ದಿನವೇ ಒಂದು ಪತ್ರ ಬರೆದು—"

"ಅದೆಲ್ಲಾ ಪ್ರಯೋಜನವಿಲ್ಲ ಭಕ್ಷಿಗಳೇ. ಕಾಲಹರಣಮಾಡಿ ಪ್ರಯೋಜನವಿಲ್ಲ."

"ಅಪ್ಪಣೆ."

"ಶೃಂಗೇರಿ ಸ್ವಾಮಿಯಲ್ಲದಿದ್ದರೆ ಇನ್ನೊಬ್ಬರು. ತಕ್ಕ ಯೋಗ್ಯತೆಯುಳ್ಳ ಯಾರಾದರೊಬ್ಬರನ್ನು ಇನ್ನೊಂದು ವಾರದೊಳಗಾಗಿ ಪುಣೆಗೆ ಕಳುಹಿಸುವ ವ್ಯವಸ್ಥೆ ಮಾಡಿ."

"ಖಾವಿಂದರ ಅಪ್ಪಣೆ ಆದಂತೆ; ವ್ಯವಸೆ ಮಾಡುತ್ತೇನೆ."

"ಒಳ್ಳೇದು."

"ನಾನು ಈಗಲೇ ತೋಷಿಖಾನೆಗೆ ಹೋಗಬೇಕಾದ ಕೆಲಸವಿದೆ. ಖಾವಿಂದರು ಅಪ್ಪಣೆ ಕೊಟ್ಟರೆ."

"ಆಗಲಿ."

ಪೂರ್ಣಯ್ಯನವರು ಸುಲ್ತಾನರಿಗೆ ಕುರ್ಬಾನೀಸ್ ಮಾಡಿ ಸಭೆಯಿಂದ ಹೊರಟುಹೋದರು. ಮೇಲೆ ಅವರು ಎಷ್ಟೇ ಸ್ಥೈರ್ಯದಿಂದ, ಚಾಲೂಕಿನಿಂದ ನಡೆದುಕೊಂಡಿದ್ದರೂ ಸುಲ್ತಾನರು ಆಡಿದ ಮಾತು ಅವರ ಅಂತರಂಗವನ್ನು ತುಂಬಾ ಕಲಕಿಬಿಟ್ಟಿತ್ತು. ಸೈನ್ಯದಲ್ಲಿ, ಆಡಳಿತದಲ್ಲಿ ಇರುವ ದೊಡ್ಡ ದೊಡ್ಡ ಹಿಂದೂ ಅಧಿಕಾರಿಗಳನ್ನೆಲ್ಲಾ ಇಸ್ಲಾಂ ಮತಕ್ಕೆ ಸೇರಿಸಿಕೊಳ್ಳಲು ಸುಲ್ತಾನರು ನಡೆಸುತ್ತಿರುವ ನಾನಾ ಪ್ರಯತ್ನಗಳು ಅವರ ಗಮನಕ್ಕೆ ಬಂದಿದ್ದುವು. ಆದರೆ, ಸುಲ್ತಾನರ ಈ ಹುಚ್ಚು ತಮ್ಮ ಮೇಲೂ ತಿರುಗುವುದೆಂದು ಪೂರ್ಣಯ್ಯನವರು ಕನಸುಮನಸಿನಲ್ಲಿಯೂ ನೆನಸಿರಲಿಲ್ಲ....

ಸುಲ್ತಾನರ ಬಾಯಿಂದ ಈ ಮಾತು ಬಂದಮೇಲೆ ಸುಮ್ಮನಿರುವಂತೆಯೂ ಇಲ್ಲ. ಮುಂದೇನಾದೀತೆಂದು ಹೇಳುವಂತೆಯೂ ಇಲ್ಲ. ತೋಷೀಖಾನೆಯನ್ನು ಬಿಟ್ಟು ಮನೆಗೆ ಹೋಗುವ ಹೊತ್ತಿಗೆ ಅಲ್ಲಿ ಆಗಲೇ ಮೌಲ್ವಿಸಾಹೇಬರು ಸಿದ್ಧ ವಾಗಿದ್ದರೂ ಅದರಲ್ಲಿ ಆಶ್ಚರ್ಯವೇನೂ ಇಲ್ಲ ಎಂಬುದೂ ಅವರಿಗೆ ಗೊತ್ತಿತ್ತು.

ಪೂರ್ಣಯ್ಯನವರು ತೋಷೀಖಾನೆಯಲ್ಲಿ ಕುಳಿತು ಕ್ಷಣಕಾಲ ಆಲೋಚಿಸಿದರು. ಥಟ್ಟನೆ ಒಂದು ಮಾರ್ಗ ತೋರಿತು. ತಮ್ಮ ಸ್ವಂತ ಹರಿಕಾರನ ಮೂಲಕ "ಅತಿ ಮುಖ್ಯವಾದ ವಿಚಾರವೊಂದರ ಸಂಬಂಧದಲ್ಲಿ ಸುಲ್ತಾನರ ತಾಯಿಯವರನ್ನು ಕಂಡು ಮಾತನಾಡಬೇಕಾಗಿದೆ. ಒಡನೆಯೇ ದರ್ಶನಕ್ಕೆ ಅವಕಾಶ ಮಾಡಿಕೊಡಬೇಕು" ಎಂದು ಜನಾನ ಭಕ್ಷಿಗೆ ಹೇಳಿಕಳುಹಿಸಿದರು.

ಒಂದೆರಡು ಗಳಿಗೆ ಕಳೆಯುವುದರೊಳಗಾಗಿ ಮಾಸಾಹೀಬಾರವರಿಂದ ಕರೆ ಬಂತು. ಆ ಸುದ್ದಿ ಬರುವುದಕ್ಕೆ ಮೊದಲೇ ತಾವೇನು ಮಾಡಬೇಕೆಂಬುದನ್ನು ಪೂರ್ಣಯ್ಯನವರು ನಿರ್ಧರಿಸಿಕೊಂಡಿದ್ದರು.

ಸುಲ್ತಾನರ ತಾಯಿಯವರ ಸಮ್ಮುಖಕ್ಕೆ ಹೋದದ್ದೇ ತಡ, ಅವರಿಗೆ ನಮಸ್ಕರಿಸಿ, ಗದ್ಗದ ಕಂಠದಿಂದ :

"ತಾಯಿ ನಿಮ್ಮ ರಕ್ಷಣೆ ಬೇಡಿ ಬಂದಿದ್ದೇನೆ. ಉಳಿಸಿಕೊಳ್ಳುವುದಾಗಿ ಅಭಯ ಕೊಟ್ಟರೆ ಮಾತನಾಡುತ್ತೇನೆ" ಎಂದು ಕಣ್ಣೀರಿಟ್ಟರು.

"ಏನು ವಿಚಾರ ಹೇಳಿ ಪೂರ್ಣಯ್ಯ."

"ನನ್ನನ್ನೂ ನನ್ನ ಸಂಸಾರದವರನ್ನೂ ಸುರಕ್ಷಿತವಾಗಿ ಈ ದೇಶದಿಂದ ಹೊರಕ್ಕೆ ಕಳುಹಿಸಿಕೊಡುವ ಕೃಪೆ ಮಾಡಬೇಕು."

"ಇದೇನು ಈ ವಿಚಿತ್ರ ಪ್ರಾರ್ಥನೆ!"

"ಅಂಥ ಪೇಚಿನಲ್ಲಿ ಸಿಕ್ಕಿಬಿದ್ದಿದ್ದೇನೆ."

"ಏಕೆ, – ಟಿಪ್ಪೂ ಕೋಪಿಸಿಕೊಂಡಿದ್ದಾನೇನು ?"

"ಕೋಪವೊ ಅಲ್ಲವೋ ನನಗೊಂದು ಅರ್ಥವಾಗಲಿಲ್ಲ ತಾಯಿ. ಸುಲ್ತಾನರೇನೋ ನನ್ನನ್ನು ಅನುಗ್ರಹಿಸುತ್ತಿರುವುದಾಗಿ ಭಾವಿಸಿದ್ದಾರೆ."

"ವಿಚಾರ ಏನು ಸ್ಪಷ್ಟವಾಗಿ ಹೇಳಿ. ಆಮೇಲೆ ಪರಿಹಾರ ಆಲೋಚಿಸೋಣ."

"ಇನ್ನೇನು ಪರಿಹಾರವಿದ್ದೀತು. ಸುಲ್ತಾನರ ಅನುಗ್ರಹದಿಂದ ಪಾರಾಗಲು ನಾನು ಈ ರಾಜ್ಯ ಬಿಡಬೇಕು – ಅದೂ ಸಾಧ್ಯವಾದರೆ."

"ಆಯಿತು. ಮೊದಲು ವಿಚಾರ ಏನು ಹೇಳಿ ?"

ಪೂರ್ಣಯ್ಯನವರು, ಅಂದಿನ ಸಭೆಯಲ್ಲಿ ಸುಲ್ತಾನರು ತೋರಿದ ಅಪೂರ್ವ 'ಅನುಗ್ರಹ'ವನ್ನು ಪೂರ್ಣವಾಗಿ ವಿವರಿಸಿದರು !

ಮಾ ಸಾಹೀಬಾ ಅದನ್ನು ಕೇಳಿ ನಕ್ಕು :

"ಇದಿಷ್ಟು ಅಲ್ಪ ವಿಚಾರಕ್ಕೆ ರಾಜ್ಯ ಬಿಟ್ಟು ಓಡಿಹೋಗಬೇಕೆಂದಿದ್ದಿರಾ ಭಕ್ತಿಗಳೇ."

"ಇನ್ನೇನು ಮಾಡಲಿ ತಾಯಿ, ಇಲ್ಲದಿದ್ದರೆ ನನ್ನ ಜುಟ್ಟು ಜನಿವಾರ ಉಳಿಯಬೇಕಲ್ಲ !"

"ನಿಮಗೆ ನಮ್ಮ ಮೇಲಿರುವ ಅಭಿಮಾನಕ್ಕಿಂತ, ನಿಮ್ಮ ಜುಟ್ಟು ಜನಿವಾರದ ಮೇಲಿನ ಅಭಿಮಾನವೇ ಹೆಚ್ಚಾಯಿತು ಅನ್ನಿ !"

"ತಾವೂ ಹೀಗೆ ಅಪ್ಪಣೆ ಕೊಡಿಸಿದರೆ ನಾನಿನ್ನೇನು ಹೇಳಲಿ ತಾಯಿ. ನನ್ನ ಕೆಲಸದಲ್ಲಿ ತಪ್ಪಿದ್ದರೆ ತಿದ್ದಲಿ. ಪ್ರಭುಗಳಿಗೆ ಆ ಅಧಿಕಾರವಿದೆ. ನಾನು ದ್ರೋಹ ಮಾಡಿದ್ದರೆ ಶಿಕ್ಷಿಸಲಿ, ಅನುಭವಿಸುತ್ತೇನೆ. ಆದರೆ ಹೀಗೆ ಬಲವಂತವಾಗಿ ಒತ್ತಾಯದಿಂದ ಜಾತಿ ಕೆಡಿಸಿದರೆ—"

"ಅಂತೂ ಈಗ ನಿಮ್ಮನ್ನು ನಮ್ಮ ರಾಜ್ಯದಲ್ಲಿ ಉಳಿಸಿಕೊಳ್ಳಬೇಕಾದರೆ,

ನಿಮ್ಮ ಜುಟ್ಟು ಜನಿವಾರವನ್ನು ಉಳಿಸಬೇಕು ಅನ್ನಿ!....ಒಂದು ವೇಳೆ ಅದು ಸಾಧ್ಯವಿಲ್ಲದೆ ಹೋದರೆ ?"

"ತಮ್ಮಿಂದ ಅದು ಸಾಧ್ಯ ಎಂದೇ ತಮ್ಮ ಶರಣು ಹೊಕ್ಕಿದ್ದೇನೆ."

"ಟಿಪ್ಪೂ ನನ್ನ ಮಾತು ಕೇಳಿದರೆ ಸರಿ—"

"ಕೇಳುತ್ತಾರೆ ತಾಯಿ."

"ಒಂದು ವೇಳೆ ಕೇಳದೆ ನಿಮ್ಮನ್ನು ಒತ್ತಾಯಪಡಿಸಿದ ಅನ್ನಿ—"

"ಹಾಗಾದರೆ ಆದದ್ದಾಗಲಿ ಬಿಡಿ. ತಾವು ನನ್ನನ್ನು ಅನೇಕ ವರ್ಷಗಳಿಂದ ಬಲ್ಲಿರಿ. ನಮ್ಮ ಹಿರಿಯರ ಧರ್ಮದಲ್ಲಿ ನನಗೆ ತುಂಬ ಆಸಕ್ತಿಯಿದೆ. ಅದನ್ನು ಬಿಡುವ ಅಪೇಕ್ಷೆಯೂ ನನಗೆ ಇಲ್ಲ—ಸರಿ, ಇದರ ಮೇಲೆ ದೇವರ ಚಿತ್ತ."....

"ನಿಮಗೆ ತುಂಬಾ ಅಸಮಾಧಾನವಾದಂತಿದೆ."

"ಸೇವಕರ ಸಮಾಧಾನ ಅಸಮಾಧಾನ ಕಟ್ಟಿಕೊಂಡು ಪ್ರಭುಗಳಿಗೇನಾಗ ಬೇಕು ಹೇಳಿ."

"ನಾವು ನಿಮ್ಮನ್ನು ಸೇವಕರೆಂದು ಭಾವಿಸಿಲ್ಲವಲ್ಲ ಪೂರ್ಣಯ್ಯ. ನೀವು ನಮ್ಮ ಮನೆತನದ ಆಪ್ತರು. ಇಂಥ ಸಂದರ್ಭಗಳಲ್ಲಿ ನೀವೇ ಕಳವಳಗೊಂಡರೆ ಹೇಗೆ ? ಟಿಪ್ಪೂ ಸ್ವಭಾವ ನಿಮಗೆ ಗೊತ್ತಲ್ಲ."

"ಗೊತ್ತಿಲ್ಲದೆ ಏನು ತಾಯಿ. ಯಾವುದಾದರೂ ವಿಚಾರ ಅವರ ತಲೆ ಹೊಕ್ಕರಾಯಿತು—ಅದನ್ನು ನಡೆಸಿಯೇ ಬಿಡುತ್ತಾರೆ. ಆ ಸಂಬಂಧವಾದ ಕಷ್ಟ ನಷ್ಟ ಅಪಾಯ ಯಾವುದೂ ಅವರ ಲಕ್ಷ್ಯಕ್ಕೆ ಬರುವುದೇಯಿಲ್ಲ."

"ಆದ್ದರಿಂದಲೇ ನಿಮ್ಮಂಥ ಆಪ್ತರು ಅವನ ದುಡುಕುತನದಿಂದ ಅವನಿಗೆ ಅಪಾಯವಾಗದಂತೆ ನೋಡಿಕೊಳ್ಳಬೇಕು."

"ಒಪ್ಪಿದೆ ತಾಯಿ. ನನ್ನ ಕೈಯ್ಯಲ್ಲಿ ಸಾಧ್ಯವಾದಮಟ್ಟಿಗೆ ಆ ಕೆಲಸ ಮಾಡಿದ್ದೇನೆ. ಆದರೆ ಈಗ ನನ್ನ ಕುತ್ತಿಗೆಗೇ ಬಂದಿದೆ."

"ನಿಮ್ಮ ಕುತ್ತಿಗೆ ಮುಟ್ಟುವ ಧೈರ್ಯ ಯಾರಿಗಿದ್ದೀತು ಪೂರ್ಣಯ್ಯ."

"ಈಗ ಆ ಮಾತು ಹೇಳುವ ಧೈರ್ಯ ನನಗಂತೂ ಉಳಿದಿಲ್ಲ ತಾಯಿ."

"ನನ್ನ ಮಾತು ಕೇಳಿ. ಧೈರ್ಯಗೆಡುವುದು ನಿಮ್ಮಂಥ ಹಿರಿಯರಿಗೆ ಉಚಿತವಲ್ಲ. ಬೆಳಗಿನ ಪ್ರಸಂಗ ನಡೆಯಲೇ ಇಲ್ಲವೆಂಬಂತೆ ಇದ್ದುಬಿಡಿ. ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ."

"ತಾವು ಆ ರೀತಿ ಆಜ್ಞೆ ಮಾಡಿದರೆ ಹಾಗೆಯೇ ನಡೆದುಕೊಳ್ಳುತ್ತೇನೆ."

"ಒಂದು ಮಾತು ಪೂರ್ಣಯ್ಯ. ಟಿಪೂ ದುಡುಕಿದಾಗ ನೀವು ಸಮಾಧಾನದಿಂದ ನಡೆದುಕೊಳ್ಳಬೇಕು. ಅವನು ತಪ್ಪಿ ನಡೆದರೆ ನೀವು ಕ್ಷಮಿಸಬೇಕು. ನಿಮ್ಮನ್ನು ಇತರ ಎಲ್ಲರಂತೆ ಕಾಣಕೂಡದು. ನಿಮ್ಮ ಅಪೇಕ್ಷೆಗೆ ವಿರುದ್ಧವಾಗಿ ವರ್ತಿಸಕೂಡದು ಎಂದು ನಾನು ಅವನಿಗೆ ಹೇಳುತ್ತೇನೆ. ನಮ್ಮ ಮನೆತನಕ್ಕೆ ನಿಮಗಿಂತ ಹಿರಿಯರೂ ಆಪ್ತರೂ ಯಾರೂ ಇಲ್ಲ. ಅದನ್ನು ನೆನೆದು ನೀವು ನಡೆದುಕೊಳ್ಳುವುದಾಗಿ ಮಾತು ಕೊಡಿ."

"ಆಗಲಿ ತಾಯಿ."

ಮಾ ಸಾಹೇಬಾ ತಮ್ಮ ಸೇವಕಿಯನ್ನು ಕರೆದು ಪೂರ್ಣಯ್ಯನವರಿಗೆ ವೀಳೆಯವನ್ನು ತಂದುಕೊಡುವಂತೆ ಆಜ್ಞೆ ಮಾಡಿದರು. ಪೂರ್ಣಯ್ಯನವರು ವೀಳೆಯವನ್ನು ತೆಗೆದುಕೊಂಡು ಮಾ ಸಾಹೇಬಾರವರಿಗೆ ಸಲಾಂ ಮಾಡಿ ಹೊರಟು ಹೋದರು.

§

ಸುಲ್ತಾನರು ತಮ್ಮ ಶಯ್ಯಾಗೃಹದ ಬಾಗಿಲಿಗೆ ಬಂದೊಡನೆಯೆ ಅವರ ಕಣ್ಣಿಗೆ ಬೀಳುತ್ತಿದ್ದುದು ದೊಡ್ಡ ನವಾಬರ ಚಿತ್ರ. ಬಾಗಿಲಿಗೆ ಬಂದೊಡನೆಯೇ ಅಲ್ಲಿ ನಿಂತು ದೊಡ್ಡ ನವಾಬರ ಚಿತ್ರಕ್ಕೆ ಸಲಾಂ ಮಾಡಿ ಮುಂದಕ್ಕೆ ಹೆಜ್ಜೆ ಹಾಕುತ್ತಿದ್ದುದು ಅವರ ಪದ್ಧತಿ. ಆ ಪದ್ಧತಿಯನ್ನನುಸರಿಸಿ ಅಂದೂ ಸಲಾಂ ಮಾಡಿದರು. ಆದರೆ ಆ ಸಲಾಂನಲ್ಲಿ ಎಂದಿನ ಭಕ್ತಿಯಿರಲಿಲ್ಲ. ಅಸಂತುಷ್ಟಿಯ ಕಿಸುರುಯಿತ್ತು.

ಸುಲ್ತಾನರು ಶಯ್ಯಾಗೃಹದ ಒಳಹೊಕ್ಕು ತೂಗುಮಂಚದ ಮೇಲೆ ಮಲಗಿದರು. ನಾನಾ ಕೋಟಲೆಗಳಿಂದ ತಪ್ತವಾಗಿದ್ದ ಅವರ ಮನಸ್ಸು ಕೊತಕೊತನೆ ಕುದಿಯುತ್ತಿತ್ತು. ತಲೆ ಕಾದುಹೋಗಿತ್ತು. ನಿದ್ರೆ ಅವರ ಹತ್ತಿರ ಕೂಡ ಸುಳಿಯಲಿಲ್ಲ. ಸುಲ್ತಾನರು ಹಾಸುಗೆಯಲ್ಲಿ ಅತ್ತಿಂದಿತ್ತ ಹೊರಳಿದರು; ಮತ್ತೆ ಹೊರಳಿದರು. ಈ ಬಾರಿ ಅವರ ನೋಟ ದೊಡ್ಡ ನವಾಬರ ಚಿತ್ರದ ಮೇಲೆ ನಿಂತಿತು....

ಸುಲ್ತಾನರ ಮನಸ್ಸು ಆ ಚಿತ್ರದೊಡನೆ ಸಂಭಾಷಿಸಲಾರಂಭಿಸಿತು :—

"ಅಬ್ಬಾ ಜಾನ್! ನಿಮ್ಮ ಸಾಹಸ ದೊಡ್ಡದು; ಒಪ್ಪಿಕೊಂಡೆ. ಸಣ್ಣ ನೌಕರಿಯಲ್ಲಿದ್ದವರು ದೊಡ್ಡ ರಾಜ್ಯ ಗಳಿಸಿದಿರಿ....ನಿಮ್ಮ ಶೌರ್ಯ ಅಪ್ರತಿಮವಾದುದು; ಅನುಮಾನವಿಲ್ಲ. ವೈರಿಗಳಿಗೆ ಜಗ್ಗದೆ, ಗಳಿಸಿದ ರಾಜ್ಯವನ್ನು

ಉಳಿಸಿಕೊಂಡಿರಿ....ನಿಜ. ನಿಮ್ಮ ಬುದ್ಧಿಶಕ್ತಿ – ಅದೂ ಮೇಲ್ಪಟ್ಟದ್ದೇ. ವಿದ್ಯೆಯು ನೆರವಿಲ್ಲದಿದ್ದರೂ ಬರೀ ಬುದ್ಧಿಶಕ್ತಿಯ ಬಲದಿಂದಲೇ ಅತ್ಯುತ್ತಮವಾಗಿ ರಾಜ್ಯಭಾರ ಮಾಡಿದಿರಿ....ಸರಿ....

"ಆದರೆ – ಇದೊಂದನ್ನು ನಾನು ಒಪ್ಪಲಾರೆ; – ಈ ಒಂದು ವಿಚಾರದಲ್ಲಿ ನೀವು ದೊಡ್ಡ ತಪ್ಪು ಮಾಡಿದಿರಿ....

"ನಾನು ಕಂಡಹಾಗೆ ನೀವು ದಳವಾಯಿಯ ಅಧಿಕಾರಕ್ಕೆ ಬಂದಮೇಲೆ, ಒಬ್ಬರಲ್ಲ, ಇಬ್ಬರಲ್ಲ ಮೂರು ಮಂದಿ ಅರಸರು ಸತ್ತರು! ಈಗ ಇರುವವನು ನಾಲ್ಕನೆಯ ಅರಸು – ಈಗ ಹೇಳಿ —

"ಈಗ್ಯೆ ಹದಿನೆಂಟು ಹತ್ತೊಂಭತ್ತು ವರ್ಷದ ಹಿಂದೆ ಆ ಬೆಟ್ಟದ ಚಾಮರಾಜ ಮದುವೆಯಿಲ್ಲದೆ, ಮಕ್ಕಳಿಲ್ಲದೆ ಸತ್ತಾಗ – ನೀನು ಮಾಡಬೇಕಾಗಿದ್ದು ದೇನು ? ನೀವು ಮಾಡಿದ್ದೇನು ?

"ಮೈಸೂರು ಅರಸರ ಸಂತತಿ ಅಲ್ಲಿಗೆ ಮುಗಿಯಿತು ಎಂದು ಸುಮ್ಮನಿರ ಬೇಕಾಗಿತ್ತು; ಹಾಗಿರದೆ – ಆ ಮೂರು ವರ್ಷದ ಮುಕ್ಕನನ್ನ–ಆ ಅರಕೋಟಾರದ ಹುಡುಗನನ್ನ ತಂದು ಅರಮನೆಗೆ ದತ್ತು ಮಾಡಿಸಿದಿರಿ. ತಾನಾಗಿ ಒಣಗಿ ಹೋಗುತ್ತಿದ್ದ ಮುಳ್ಳುಗಿಡಕ್ಕೆ ಕಸಿಮಾಡಿ ಹೊಸ ಜೀವ ಕೊಟ್ಟಿರಿ! ಆ ಹಳ್ಳಿ ಮುಕ್ಕ ಈಗ ಶ್ರೀಮದ್ರಾಜಾಧಿರಾಜ! – ಖಾಸಾ ಚಾಮರಾಜ ಒಡೆಯರು! – ನನ್ನ ಮಾತು ಕೇಳಿ––

"ಪೌರುಷದಿಂದ ನೆಲ ಗೆಲ್ಲಬೇಕು. ಆಳಬೇಕು. ಅರಸುತನ ನಡೆಸಬೇಕು! ಆ ಅರಸುತನ ಒಪ್ಪೋಣ. ಈ ಯಾವ ಯೋಗ್ಯತೆಯೂ ಇಲ್ಲದವರನ್ನು ಅರಸರು ಅಂತ ನಾನು ಯಾಕೆ ಒಪ್ಪಬೇಕು ? – ನೀವು ಯಾಕೆ ಒಪ್ಪಿದಿರಿ ?

"ರಕ್ತ ಬಸಿದು ರಾಜ್ಯ ಕಟ್ಟುವುದಕ್ಕೆ ನಾವು! ರಾಜಾಧಿರಾಜ ಎಂದು ಹೊಗಳಿಸಿಕೊಂಡು ಸುಖಜೀವನ ನಡೆಸುವುದಕ್ಕೆ ಅವರು! ಅವರು ಅರಸರು; ನಾವು ಅವರ ಆಳುಗಳು!"

"ಅಬ್ಬಾಜಾನ್ – ಈ ಸ್ಥಿತಿ ಒಪ್ಪಿಕೊಂಡಿರಲ್ಲ; ಆಗ ಎಲ್ಲಿ ಹೋಗಿತ್ತು ನಿಮ್ಮ ಬುದ್ಧಿ!...."

ಬಿರುಸಗೆಯ ಕೋಲಾಹಲ ಆ ಶಯ್ಯಾಗೃಹದ ನೀರವತೆಯನ್ನು ನಾಶ ಮಾಡಿ ಸುಲ್ತಾನರನ್ನಪ್ಪಳಿಸಿ ಎಚ್ಚರಗೊಳಿಸಿತು.

ಹಾಗೆ ನಕ್ಕವರು ಯಾರೆಂದು ತಿಳಿಯಲು ಸುಲ್ತಾನರು ಥಟ್ಟನೆ ತಿರುಗಿದರು.

"ನಾನು ಅಬ್ಬಾಜಾನ್."

"ಮೊಹ್ಯುದೀನ್!"

"ಅದೇಕೆ ಅಷ್ಟು ಹೊತ್ತಿನಿಂದ ಹಾಗೆ ಬಿಟ್ಟ ಕಣ್ಣು ಮುಚ್ಚದೆ ಆ ಚಿತ್ರ ನೋಡುತ್ತಿದ್ದಿರಿ ಅಬ್ಬಾಜಾನ್! ನಾನು ಬಂದರೂ ಮೈ ಅಗುಲಿಸದೆ ಹಾಗೇ ಮಲಗಿದ್ದಿರಿ – ನಿಮ್ಮ ಆಟ ನೋಡಿ ನನಗೆ ತುಂಬ ನಗು ಬಂತು!"

"ಆಟವಲ್ಲ ಮೊಹ್ಯುದೀನ್. ಏನೋ ಯೋಚಿಸುತ್ತಿದ್ದೆ. ನೀನು ಬಂದಿದ್ದು ಕೂಡ ನನಗೆ ಗೊತ್ತಾಗಲಿಲ್ಲ."

"ಮೊಯಿಜುದೀನ್ ಕುದುರೆ ಹತ್ತಿಕೊಂಡು ದರಿಯಾದೌಲತ್‌ಗೆ ಹೋಗುತ್ತಾನಂತೆ ಈಗ. ನಾನೂ ಹೋಗಬೇಕು...."

"ಇವತ್ತು ಬೇಡ ಮೊಹ್ಯುದೀನ್. ಚಳಿಗಾಳಿ. ಮಳೆ ಬರುವ ಹಾಗಿದೆ. ಹವಾ ಚೆನ್ನಾಗಿಲ್ಲ. ಅವನು ಬೇಕಾದರೆ ಹೋಗಲಿ. ನೀನು ಇಲ್ಲೇಯಿರು."

"ಇದೇನು ಅಬ್ಬಾಜಾನ್. ಅವನು ಹೋಗಬಹುದು. ನಾನು ಬೇಡ!"

"ಥಂಡಿ ಹವ. ಬೇಡ."

"ಬೆಚ್ಚಗಿರುವಂತೆ ಬನಾತು ತೊಟ್ಟರಾಯಿತು....ಹೋಗತೀನಿ ಅಬ್ಬಾಜಾನ್" ಎನ್ನುತ್ತಾ ಮೊಹ್ಯುದೀನ್ ಓಡಿಹೋದನು. ಬಾಗಿಲು ದಾಟಿ ಮರೆಯಾದನು.

ಸುಲ್ತಾನರ ದೃಷ್ಟಿ ಗೋಡೆಯ ಮೇಲಿದ್ದ ಎಂಟು ವರ್ಷದ ಮಗುವಿನ ಕಡೆಗೆ ತಿರುಗಿತು. ಅಂದವಾದ ಗುಂಡುಮುಖ; ಆ ಮುಖಕ್ಕೆ ಮೆಚ್ಚುವಂಥ ಕೆಂಪು ರೇಷ್ಮೆ ರುಮಾಲು; ಅದನ್ನಲಂಕರಿಸಿದ್ದ ದಪ್ಪದಪ್ಪ ಮುತ್ತಿನ ಸರಗಳು; ಕತ್ತಿನಲ್ಲೊಂದು ದೊಡ್ಡ ಮುತ್ತಿನ ಹಾರ; ಆ ಹಾರಕ್ಕೆ ತೂಗು ಹಾಕಿರುವ ದೊಡ್ಡ ಪಚ್ಚೆಯ ಪದಕ....ಸುಲ್ತಾನರು ಆ ಚಿತ್ರವನ್ನು ಸ್ವಲ್ಪ ಹೊತ್ತು ದಿಟ್ಟಿಸಿದರು.

ಮೊಹ್ಯುದೀನ್, ಎರಡು ವರ್ಷದ ಹಿಂದೆ ಇಂಗ್ಲಿಷರಿಗೆ ಓಲಾಗಿ ಹೋದಾಗ ಬರೆಸಿದ್ದ ಚಿತ್ರ ಅದು. ಈ ಎರಡು ವರ್ಷಗಳಲ್ಲಿ ಅವನು ತುಂಬಾ ಬದಲಾಯಿಸಿದ್ದಾನೆಂದೆನಿಸಿತು ಸುಲ್ತಾನರಿಗೆ....

ಮೈಕಟ್ಟು ಬೆಳೆದಿದೆ. ಧೈರ್ಯ ಹೆಚ್ಚಿದೆ. ಮೊದಲಿನ ಗಾಂಭೀರ್ಯ, ಸೌಜನ್ಯಗಳ ಕೃತಕತೆ ತೊಲಗಿ ಅದಕ್ಕೆ ಹೊಸ ಸಹಜತೆ ಬಂದಿದೆ....ಸ್ವತಂತ್ರ ಮನೋಭಾವ ಮೊಳೆತಿದೆ. ಆದರೂ ಹಿರಿಯರಲ್ಲಿ ವಿಧೇಯತೆ ತಪ್ಪಿಲ್ಲ.

ಇಷ್ಟು ಒಳ್ಳೆಯ ಗುಣ ಇತರ ಮಕ್ಕಳಿಗೆಲ್ಲಿದೆ! ಎಷ್ಟೇ ಆದರೂ ಪಟ್ಟದ ಬೇಗಂ ಮಗ....

ಸುಲ್ತಾನರು ದೊಡ್ಡ ನಿಟ್ಟುಸಿರು ಬಿಟ್ಟರು. ಪಕ್ಕದಲ್ಲೇ ಇದ್ದ ಪಟ್ಟದ ಬೇಗಂರವರ ಚಿತ್ರದ ಕಡೆಗೆ ಹೊರಳಿತು ಅವರ ನೋಟ....

ಎಷ್ಟು ಸುಂದರವಾಗಿದೆ ಆ ಚಿತ್ರ! ಬೇಗಂರವರ ಸೌಂದರ್ಯವೇನು ಸಾಮಾನ್ಯವೆ? ಜಾಜಿಯ ಹೂವಿನಷ್ಟು ನವುರು; ಮುಟ್ಟಿದರೆ ಮಾಸುವಂಥದು. ....ಗಾಳಿಗೆ ಬಳುಕುವಂಥ ದೇಹ!....ಅದರ ಬಣ್ಣವೋ ಹೊನ್ನು ತೇಯ್ದು ಹಚ್ಚಿದಂತೆ....ವಜ್ರದಂತೆ ಹೊಳೆಯುವ ಆ ಕಣ್ಣುಗಳು....ಮುಖದ ಮೇಲೆ ನಲಿದಾಡುವ ಆ ಮುಗುಳ್ನಗೆ....

ಸುಲ್ತಾನರು ಕಣ್ಣುಮುಚ್ಚಿಕೊಂಡರು. ಅವರ ಮನಸ್ಸು ಎರಡು ವರ್ಷಗಳ ಹಿಂದಿನ ದುರ್ಘಟನೆಗಳ ಪುನರಾವರ್ತನೆಯಲ್ಲಿ ತೊಡಗಿತು....

ಇಂಗ್ಲಿಷ್ ಕಂಪೆನಿಯ ಸೈನ್ಯ ಶ್ರೀರಂಗಪಟ್ಟಣವನ್ನು ಮುತ್ತಿದೆ. ಕೋಟೆಯ ಹೊರಬದಿಯಲ್ಲಿ ಹೋರಾಟ ನಡೆಯುತ್ತಿದೆ....ಅದೇನು ವಿಚಿತ್ರವೋ – ಮುತ್ತಿಗೆ ಆರಂಭವಾದುದೇ ತಡ ಬೇಗಂರವರಿಗೆ ಹೊಳೆದು ಬಿಟ್ಟಿತು – ಈ ಹೋರಾಟದಲ್ಲಿ ಜಯ ತಮ್ಮ ಪಕ್ಷದ್ದಲ್ಲ ಎಂದು. ಅದೇ ಚಿಂತೆಯಲ್ಲಿ ಅವರ ಆರೋಗ್ಯ ಕೆಟ್ಟಿತು. ಮುತ್ತಿಗೆ ಮುಂದುವರಿಯುತ್ತಿದ್ದಾಗಲೇ ಅವರ ಬಾಳೂ ಮುಗಿಯಿತು....

ಸುಲ್ತಾನರ ಕಣ್ಣಿನಲ್ಲಿ ನೀರೂರಿತು. ರೆಪ್ಪೆಯ ಕಟ್ಟೆ ಮೀರಿ ದಿಂಬಿನ ಮೇಲೆ ಉದುರಿತು. ಸುಲ್ತಾನರು ಹಾಸುಗೆಯಲ್ಲಿ ಹೊರಳಿ ಮುಖ ಮೇಲಾಗಿ ಮಲಗಿದರು. ತಮಗೆ ತುಂಬ ಪ್ರಿಯರಾಗಿದ್ದ ಪಟ್ಟದ ಬೇಗಂರವರ ಅಕಾಲ ಮರಣದ ನೆನಪು ಸುಲ್ತಾನರ ದುಃಖವನ್ನು ಕೆರಳಿಸಿತು. ಕ್ಷಣಕಾಲದಲ್ಲಿ ಆ ದುಃಖ ರೋಷದ ರೂಪವನ್ನು ತಾಳಿತು....

ಬೇಗಂ ಸಾಯುವುದಕ್ಕೆ ಮುಂಚೆ ಎಷ್ಟು ವ್ಯಥೆಪಟ್ಟರು. ಹೋರಾಟದಲ್ಲಿ ಸೋತರೆ ಅದರಿಂದ ಕೇಡು, ಅವಮಾನ; ಆದರೆ ಸೋಲದೆ ವಿಧಿಯಿಲ್ಲ ಎಂದು ಅವರು ಮರುಗಿದರು.

ಅವರ ಈ ಸಂಕಟಕ್ಕೆಲ್ಲ ಕಾರಣ – ಅವಳು – ಆ ಅರಮನೆಯ ಚಂಡಿ! ನಾನು ಕಂಡ ಹಾಗೆ, ನಮ್ಮ ನಾಶಕ್ಕಾಗಿ, ಒಂದರಮೇಲೊಂದು ಸಂಚು ನಡೆಸುತ್ತಲೇ ಇದ್ದಾಳೆ. ಆ ರಾಜವಂಶದ ಕೊನೆಯ ಕುಡಿ ಉಳಿದಿರುವವರೆಗೂ ಇಲ್ಲವೇ ಅವಳ ದೇಹದಲ್ಲಿ ಉಸಿರು ಇರುವವರೆಗೂ ಈ ಪಿತೂರಿ ತಪ್ಪಿದ್ದೇ ಅಲ್ಲ....,

ನಾನು ಹೇಳಿದ್ದೇ ಸರಿ – ಅಬ್ಬಾಜಾನ್, ಬುದ್ಧಿವಂತರಾದರೂ ಈ ಒಂದು ವಿಚಾರದಲ್ಲಿ ದೊಡ್ಡ ತಪ್ಪು ಮಾಡಿದರು : ಈ ಅರಸು ಮನೆತನವನ್ನು ಅವರೇ ಮುಕ್ತಾಯ ಮಾಡಬೇಕಾಗಿತ್ತು! ಮಾಡಲಿಲ್ಲ. ಅವರು ಮಾಡಿದ ತಪ್ಪು ನಾನು ಮಾಡುವುದಿಲ್ಲ ; – ಮಾಡಕೂಡದು....

ಗಟ್ಟಿಯಾಗಿ "ಉಹುಂ – ಮಾಡಕೂಡದು" ಎನ್ನುತ್ತಾ ಸುಲ್ತಾನರು ಹಾಸುಗೆಯಲ್ಲಿ ಹೊರಳಿದರು. ಅವರ ದೇಹ ಮನಸ್ಸುಗಳು ನಿದ್ರೆ ಎಚ್ಚರಗಳು ಬೆರೆತಿರುವ ಸ್ಥಿತಿಯನ್ನು ಮುಟ್ಟಿದುವು.

ಶಯ್ಯಾಗೃಹದ ಬಾಗಿಲಿನಲ್ಲಿದ್ದ ಹಬಸಿ ಖೋಜಾ, ಕೋಣೆಯೊಳಕ್ಕೆ ಇಣಿಕಿ ನೋಡಿ ಸುಲ್ತಾನರಿಗೆ ನಿದ್ರೆ ಹತ್ತಿತೆಂದು ತಿಳಿದು ಸದ್ದಿಲ್ಲದಂತೆ ಕದವನ್ನು ಮುಂದೆ ಮಾಡಿದನು. ಬಿಚ್ಚುಗತ್ತಿ ಹಿಡಿದು ಕಾವಲು ಕಾಯುತ್ತಾ ನಿಂತನು.

§

ಮಾತೃಶ್ರೀ ಸನ್ನಿಧಾನದವರು ಬೆಳಗಿನ ಪೂಜೆಯನ್ನು ಮುಗಿಸಿ ವಿಶ್ರಮಿಸಿ ಕೊಳ್ಳುತ್ತಿದ್ದಾಗ, ದಾಸಿ ಅವರ ಸನ್ನಿಧಿಗೆ ಬಂದು "ದಾಸರು ಬಂದಿದ್ದಾರೆ" ಎಂದು ಬಿನ್ನವಿಸಿಕೊಂಡಳು.

"ಯಾರು ?"

"ತಿಮ್ಮಪ್ಪಯ್ಯದಾಸರು ತಾಯಿ; ಸನ್ನಿಧಾನದ ದರ್ಶನಕ್ಕಾಗಿ ಕಾದಿದ್ದಾರೆ."

"ಚಿಕ್ಕನಾಯಕನಹಳ್ಳಿಯ ದಾಸರೆ ? ಅಂತಃಪುರದ ಒಳಓಲಗಶಾಲೆಗೆ ಕರೆದುಕೊಂಡು ಬಾ" ಎಂದು ಮಾತೃಶ್ರೀಯವರು ಆಜ್ಞೆಮಾಡಿ ತಾವೂ ಅಲ್ಲಿಗೆ ಹೊರಟರು.

ದಾಸರು ಓಲಗಶಾಲೆಗೆ ಬಂದೊಡನೆಯೇ ಮಾತೃಶ್ರೀಯವರನ್ನು ಆಶೀರ್ವಾದ ಮಾಡಿ, ದಾಸಿ ಅಲ್ಲಿ ತಂದಿಟ್ಟಿದ್ದ ಚಿನ್ನದ ಹರಿವಾಣದಲ್ಲಿ ತಾವು ತಂದಿದ್ದ ತೀರ್ಥ ಪ್ರಸಾದಗಳನ್ನಿಟ್ಟರು.

ಅನಂತರ ಮಾತೃಶ್ರೀಯವರೇ ಸಂಭಾಷಣೆಯನ್ನಾರಂಭಿಸಿದರು.

"ಕುಳಿತುಕೊಳ್ಳಿ ದಾಸರೆ, ತಮ್ಮ ಯಾತ್ರೆ ಸಾಂಗವಾಗಿ ನೆರವೇರಿತಷ್ಟೆ ?"

"ದೇವಿಯ ಆಶೀರ್ವಾದ ; ಸನ್ನಿಧಾನದ ಕೃಪೆ ; ಸಾಂಗವಾಗಿ ನೆರವೇರಿತು."

"ಸಂತೋಷ ; ತಾವು ಬಂದಿದ್ದು —"

"ಈರೋಡು, ಸತ್ಯಮಂಗಲ, ನಂಜನಗೂಡು ಮಾರ್ಗವಾಗಿ ಮೈಸೂರಿಗೆ

ಬಂದೆ. ಚಾಮುಂಡಿಯ ಸೇವೆ ಮಾಡಬೇಕೆನಿಸಿತು. ಅಷ್ಟಮಿಯ ದಿನ ಹಗಲು ರಾತ್ರಿ ಬೆಟ್ಟದ ಮೇಲೆಯೇ ಕಳೆದೆ. ನವಮಿಯ ದಿನ ಮಧ್ಯಾಹ್ನದ ಹೊತ್ತಿಗೆ ಇಲ್ಲಿಗೆ ಬಂದು ಸೇರಿದೆ."

"ಮೊನ್ನೆಯ ದಿವಸ ಊರಿಗೆ ಬಂದವರು, ಈಗ ಇಲ್ಲಿಗೆ ಬರುತ್ತಿದ್ದೀರಾ?"

"ಸನ್ನಿಧಾನ ಕ್ಷಮಿಸಬೇಕು. ಮಹಾನವಮಿ, ವಿಜಯದಶಮಿ ಉತ್ಸವಗಳ ಗಲಬಿಲಿಯಲ್ಲಿ ತಮ್ಮನ್ನು ಕಂಡರೂ, ಸಾವಧಾನವಾಗಿ ಮಾತನಾಡಲು ಸಾಧ್ಯವಾಗಲಾರದೆಂದು ಭಾವಿಸಿ, ತಮಗೆ ತೊಂದರೆ ಕೊಡಲಿಲ್ಲ – ಅಷ್ಟೇ."

ಸನ್ನಿಧಾನದವರು ದಾಸಿಯ ಕಡೆ ನೋಡಿದರು. ಅವಳು ಅಲ್ಲಿಂದ ಹೊರಟು ಹೋಗಿ, ಸದ್ದು ಮಾಡದೆ ಹೊರಬಾಗಿಲು ಹಾಕಿಕೊಂಡು ನಿಂತಳು. ಅನಂತರ ಸನ್ನಿಧಾನದವರು ಕೇಳಿದರು :

"ಮಹಾನವಮಿ ದರ್ಬಾರು, ವಿಜಯದಶಮಿ ಉತ್ಸವ ನೋಡಿದಿರಿ ತಾನೆ?"

"ಪಟ್ಟಣದಲ್ಲಿದ್ದೂ ಅವನ್ನು ನೋಡದೆ ಇರುತ್ತೇನೆಯೆ ತಾಯಿ!"

"ಹೇಗಿತ್ತು?"

"ಸನ್ನಿಧಾನಕ್ಕೆ ಉತ್ತರ ಗೊತ್ತಿದೆಯೆಂಬುದನ್ನು ಪ್ರಶ್ನೆಯೇ ಸೂಚಿಸುತ್ತಿದೆಯಲ್ಲ!"

"ಜ್ಯೋತಿಷ್ಕರ ಹಾಗೆ ಮಾತನಾಡಬೇಡಿ, ದಾಸರೆ!"

"ನಾನು ಜ್ಯೋತಿಷ ಅಭ್ಯಾಸ ಮಾಡಿದವನು. ಇನ್ನು ಹೇಗೆ ಮಾತನಾಡಲಿ!"

ಇಬ್ಬರೂ ಮೆದುವಾಗಿ ನಕ್ಕರು. ಅಸಹನೀಯವಾದ ವೇದನೆಯನ್ನು ಮುಚ್ಚಿಕೊಳ್ಳಲು ತಾವು ಸುಳ್ಳು ನಗೆಯ ಶರಣು ಹೋಗಿರುವುದು ಅವರಿಬ್ಬರಿಗೂ ಥಟ್ಟನೆ ಹೊಳೆದು ಅವರನ್ನು ತೀವ್ರವಾದ ದುಃಖಕ್ಕೆ ಈಡುಮಾಡಿತು. ಮಾತೃಶ್ರೀಯವರು ತಮ್ಮ ಹೃದಯವನ್ನು ತೋಡಿಕೊಳ್ಳುವ ಧ್ವನಿಯಲ್ಲಿ, "ಅಂತೂ ಈ ಸ್ಥಿತಿಗೆ ಬಂದಿದ್ದೇವೆ" ಎಂದು ದೀರ್ಘವಾಗಿ ಉಸಿರುಬಿಟ್ಟರು. ಅವರ ಕಣ್ಣಿನಲ್ಲಿ ನೀರಾಡಿತು. ದೃಷ್ಟಿ ಮಂಜಾಯಿತು. ಅವರಲ್ಲಾದ ಈ ಮಾರ್ಪಾಡನ್ನು ದಾಸರು ಲಕ್ಷ್ಯಿಸಿ ಸಂತೈಸುವ ಧ್ವನಿಯಲ್ಲಿ ತಮ್ಮ ಮಾತನ್ನಾರಂಭಿಸಿದರು.

"ದುಃಖಪಡಬೇಡಿ ತಾಯಿ. ಕೃಷ್ಣಪಕ್ಷ ಮುಗಿಯುತ್ತಾ ಬಂದಿದೆ."

"ಹಾಗೆಂದುಕೊಂಡು ಸಮಾಧಾನ ಮಾಡಿಕೊಳ್ಳಬೇಕು! – ದಾಸರೇ ನಿಮಗೆ ಗೊತ್ತು, ನಾನು ಈ ಮನೆಗೆ ಹೆಜ್ಜೆಯಿಟ್ಟು ಮೂವತ್ತೈದು ವರ್ಷ

ವಾಯಿತು. ಆವಾಗಿನಿಂದ ಈ ಸರ್ವಾಧಿಕಾರಿಗಳ ಪ್ರಾಬಲ್ಯ ದಿನದಿನಕ್ಕೆ ಹೆಚ್ಚಿ ಹೆಚ್ಚಿ ಈಗ ಇಂಥ ದುರ್ಭರ ಪ್ರಸಂಗ ಒದಗಿದೆ."

"ನಿಜ ತಾಯಿ, ನಿಜ. ನಾನೂ ಕಣ್ಣಾರೆ ಕಂಡೆನಲ್ಲ. ಅದು ಏನು ಆ ನವರಾತ್ರಿ ದರ್ಬಾರಿನ ಅವ್ಯವಸ್ಥೆ! – ಅರಮನೆಯ ಒಳಗೆ ಮಾಡಬೇಕಾದ ವ್ಯವಸ್ಥೆಯನ್ನೆಲ್ಲಾ ಚೆನ್ನಾಗಿ ಮಾಡಿದ್ದಿರಿ. ಆದರೆ, ಹೊರಗಿನ ವ್ಯವಸ್ಥೆ ಏನೇನೂ ಸಮರ್ಪಕವಾಗಿರಲಿಲ್ಲ. ಅರಮನೆಯ ಮುಂದಿನ ಚೌಕದ ಅಲಂಕಾರ ಸ್ವಲ್ಪವೂ ಚೆನ್ನಾಗಿರಲಿಲ್ಲ. ಜಟ್ಟಿಕಾಳಗಗಳ ವ್ಯವಸ್ಥೆ – ನಾಚಿಕೆಗೇಡು. ಸಂಗೀತ, ಲಾವಣಿ, ಯಕ್ಷಣಿ ಎಲ್ಲ ಕಳಪೆ. ಸುಲ್ತಾನ ನಜರೊಪ್ಪಿಸಲು ದರ್ಬಾರಿಗೆ ಬರಲೇಯಿಲ್ಲವಂತೆ. ಜನರ ಬಾಯಲ್ಲೆಲ್ಲಾ ಅದೇ ಮಾತು. ನನ್ನ ಮನಸ್ಸಿಗೂ ತುಂಬಾ ಬೇಸರ ವಾಯಿತು ತಾಯಿ."

"ಜನರ ಕಣ್ಣ ಮುಂದೆ ಅರಸರನ್ನು ಕೀಳು ಮಾಡಿ ತೋರಿಸಿ ತನ್ನ ಪ್ರತಿಷ್ಠೆ ಬೆಳೆಸಿಕೊಳ್ಳುವುದೇ ಅವನ ಉದ್ದೇಶವಾಗಿದೆ ದಾಸರೆ."

"ನನಗೂ ಹಾಗೆಯೇ ತೋರಿತು ತಾಯಿ. ಮೆರವಣಿಗೆಯ ವಿಚಾರದಲ್ಲಂತೂ ಇದು ತೀರಾ ಸ್ಪಷ್ಟವಾಯಿತಲ್ಲ. ಅದೇನು ಮೆರವಣಿಗೆ! ಹಾಳು ಹಾಳು ಸುರಿಯುತ್ತಿತ್ತು. ವಿಜಯದಶಮಿ ಮೆರವಣಿಗೆ ಎಂದರೆ, ದೊಡ್ಡ ನವಾಬರ ಕಾಲದಲ್ಲಿ; ಏನು ವಿಜೃಂಭಣೆ! ಎಷ್ಟು ಕುದುರೆ ಸೈನ್ಯ! ಒಂಟೆ ಸೈನ್ಯ, ಹಬಸಿ ಸವಾರರು, ಕೆಂಪು ಜನರ ಸವಾರರು. ದೊರೆಗಳಿದ್ದ ಅಂಬಾರಿ ಆನೆಯ ಹಿಂದೆ ಇನ್ನೊಂದು ಆನೆಯ ಮೇಲೆ ಸ್ವತಃ ನವಾಬರೇ ಮೈಗಾವಲಾಗಿ ಬರುತ್ತಿದ್ದರು—"

"ಸಾಕು ಬಿಡಿ ದಾಸರೇ, ಆ ವೈಭವವೆಲ್ಲಾ ಈಗ ಕನಸಾಗಿದೆ. ಈ ಸಲದ ಮೆರವಣಿಗೆಯನ್ನೂ ನೋಡಿದಿರಲ್ಲಾ!"

"ದರ್ಬಾರಿಗೆ ಬರಲಿಲ್ಲ ಹೋಗಲಿ ಅಂದರೆ, ಮೆರವಣಿಗೆಗೆ ಕೂಡ ಬರಲಿಲ್ಲವಲ್ಲ ಆ ಸುಲ್ತಾನ!"

"ಈ ವರ್ಷ ಮೊಮ್ಮಗನ ರೂಪದಲ್ಲಿ ಅರಮನೆ ಬೆಳಕು ಬಂದಿದೆ. ಈ ಬಾರಿ ನವರಾತ್ರಿ ಉತ್ಸವ ವಿಜೃಂಭಣೆಯಿಂದ ನಡೆಯಲಿ ಅಂತ ಇದ್ದೆ– ಹೀಗಾಯಿತು!"

"ಹೋಗಲಿ ಬಿಡಿ. ಇನ್ನು ಯಾಕೆ ಆ ಮಾತು. ಈಗೊಂದು ವಾರದ ಹಿಂದೆ ನಾನು ನಂಜನಗೂಡಿಗೆ ಬಂದಾಗ ಗೊತ್ತಾಯಿತು. ಸಂತೋಷದ ಸುದ್ದಿ."

"ಸಂತೋಷದ ಸುದ್ದಿ?"

"ದೊರೆಗಳಿಗೆ ಪುತ್ರೋತ್ಸವಾದದ್ದು."

"ಓ!"

"ಆ ಸುದ್ದಿ ಕೇಳಿದವನೆ, ಸನ್ನಿಧಾನದ ದರ್ಶನ ತೆಗೆದುಕೊಂಡು ಹೋಗೋಣ ವೆಂದು ಇಲ್ಲಿಗೇ ನೇರವಾಗಿ ಬಂದೆ."

"ತುಂಬ ಒಳ್ಳೆ ಕೆಲಸ ಮಾಡಿದಿರಿ. ನಿಮ್ಮ ಯಾತ್ರೆಯ ವಿವರ ಕೇಳುವ ಕುತೂಹಲ ನಮಗೂ ಇತ್ತು."

"ತಮಗೆ ವರದಿ ಒಪ್ಪಿಸಬೇಕೆಂಬ ಕುತೂಹಲ ನನಗೂ ಇತ್ತು. ಯಾತ್ರಾ ಕಾಲದಲ್ಲಿ ಸೇತುಸ್ನಾನಾದಿ ಸಕಲ ತೀರ್ಥ ಸ್ನಾನ, ರಾಮೇಶ್ವರಾದಿ ಸಕಲ ದೇವತಾ ದರ್ಶನ ಆಯಿತು."

"ದಾರಿಯಲ್ಲಿ ಇನ್ನೆಲ್ಲೆಲ್ಲಿಗೆ ಹೋಗಿದ್ದಿರಿ ದಾಸರೆ? ತಿರುಚಿರಪಲ್ಲಿ, ತಂಜಾವೂರು, ಚನ್ನಪುರಿ...."

"ಹೋಗಿದ್ದೆ ತಾಯಿ. ತಂಜಾವೂರಲ್ಲಿ ಕಾವೇರಿ ಸ್ನಾನವಾಯಿತು. ಸ್ವಾಮಿ ದರ್ಶನವೂ ಆಯಿತು."

ದಾಸರು ತಮ್ಮ ಪೀಠವನ್ನು ಇನ್ನಷ್ಟು ಹತ್ತಿರಕ್ಕೆ ಎಳೆದುಕೊಂಡು ತಗ್ಗಿದ ಧ್ವನಿಯಲ್ಲಿ ಮಾತನಾಡುವಂತೆ ಮಾತೃಶ್ರೀಯವರು ಸಂಜ್ಞೆ ಮಾಡಿದರು. ದಾಸರು ಆ ಸೂಚನೆಯನ್ನನುಸರಿಸಿದರು. ಸಂಭಾಷಣೆ ಪಿಸುಮಾತಿನಲ್ಲಿ ಮುಂದುವರಿಯಿತು.

"ಕಂಡಿದ್ದಿರಾ?"

"ಕಂಡಿದ್ದೆ ತಾಯಿ."

"ಏನಾದರೂ—"

"ಆಗಲೇ ಅರಿಕೆ ಮಾಡಿಕೊಂಡೆನಲ್ಲಾ ತಾಯಿ–ಕೃಷ್ಣಪಕ್ಷ ಮುಗಿಯುತ್ತಾ ಬಂದಿದೆ—"

"ರಾಯರು ಏನು ಹೇಳಿದರು, ವಿವರವಾಗಿ ಹೇಳಿ ದಾಸರೇ."

"ಈಗ್ಯೆ ಎರಡು ವರ್ಷದ ಹಿಂದೆ ಕೆಂಪು ಸೈನ್ಯ ಇಲ್ಲಿಯ ಕೋಟೆ ಬಾಗಿಲಿಗೆ ಬಂದಾಗಲೇ ಈ ರಾವಣಾಸುರನ ಅವತಾರ ಮುಗಿಯಿತು, ನಮ್ಮ ಹಟ ಗೆದ್ದಂತಾಯಿತು ಎಂದು ತಿರುಮಲರಾಯರು ತುಂಬಾ ಸಂತೋಷಪಟ್ಟಿದ್ದರು ತಾಯಿ. ಕೊನೆಗಳಿಗೆಯಲ್ಲಿ ಕಾರನ್‌ವಾಲಿಸ್ ಸಾಹೇಬರು ಇಳಿಮನಸ್ಸು ಮಾಡಿ ಕೆಲಸ ಕೆಡಿಸಿಬಿಟ್ಟರು ಅಂತ ರಾಯರು ತುಂಬಾ ವ್ಯಥೆಪಡುತ್ತಿದ್ದಾರೆ. ಆದರೂ ತಮ್ಮ ಪ್ರಯತ್ನ ಮಾತ್ರ ಬಿಡದೆ ನಡೆಸಿದಾರೆ. ತಮ್ಮ ಕಾಗದಗಳೂ ಅವರ ಕೈ ಸೇರುತ್ತಾ ಇವೆ. ಅವರೂ ಮೇಲಿಂದ ಮೇಲೆ ಇಂಗ್ಲಿಷ್ ಸರದಾರರನ್ನ ನೋಡಿ,

ಇಲ್ಲಿ ನಡೆಯುತ್ತಿರುವ ಅನ್ಯಾಯವನ್ನೆಲ್ಲಾ ವಿವರಿಸಿ ವಿವರಿಸಿ ಹೇಳತಾ ಇದಾರೆ. ಕೊಟ್ಟ ಮಾತು ನಡೆಸಿ ಕೊಡತೀರಿ ಅಂತ ಒಂದಲ್ಲ ಎರಡಲ್ಲ – ಹದಿನಾಲ್ಕು ವರ್ಷದಿಂದ ಕಾದಿದೀವಿ. ಕಷ್ಟ ನಷ್ಟ ಅನುಭವಿಸ್ತಾ ಇದೀವಿ. ಇನ್ನೆಷ್ಟು ದಿನ ಕಾಯೋದು ? ಈಗೆರಡು ವರ್ಷದ ಹಿಂದೆ ಕಾರ್ಯ ಕೈಗೂಡುವ ಹೊತ್ತಿನಲ್ಲಿ ವೈರಿ ಜೊತೆಯಲ್ಲಿ ಸಮಾಧಾನ ಮಾಡಿಕೊಂಡಿರಿ. ಅದು ದೊಡ್ಡ ತಪ್ಪು. ನಿಮ್ಮ ಔದಾರ್ಯ ನಿಮ್ಮ ಕೊರಳಿಗೇ ಉರುಲು ಆಗತ್ತೆ. ಶೀಘ್ರವಾಗಿ ಬಲವಾದ ಪ್ರಯತ್ನ ಮಾಡದಿದ್ದರೆ, ಪ್ರಯತ್ನಮಾಡಿ ಅವನನ್ನ ಮುಗಿಸದೆ ಇದ್ದರೆ, ನಿಮಗೂ ಉಳಿಬಾಳಿಲ್ಲ; ನಮಗೂ ಉಳಿಬಾಳಿಲ್ಲ–ಅಂತ ತುಂಬಾ ಒತ್ತಾಯ ಮಾಡತಾಯಿದಾರೆ ತಾಯಿ."

"ಪಾಪ ! ನಮಗಾಗಿ ಅವರು ತುಂಬ ಶ್ರಮಪಡತಾಯಿದಾರೆ; – ಕಾರ್ಯ ಫಲಿಸೀತು ಅಂತೀರ !"

"ದೇವಿಕೃಪೆಯಿಂದ, ಈ ಬಾರಿ ತಪ್ಪದೆ ಫಲಿಸತ್ತೆ ತಾಯಿ. ಹಿಂದಿನ ಯುದ್ಧದ ದಂಡದ ಹಣ ಕೊಡದಿದ್ದರೆ ಅದನ್ನೇ ಕಾರಣ ಮಾಡಿಕೊಂಡು—"

"ದಂಡ ತೆತ್ತು ಮಕ್ಕಳನ್ನ ಹಿಂದಕ್ಕೆ ಕರೆಸಿಕೊಂಡನಲ್ಲ ! ಅದು ಇನ್ನೊಂದು ದೊಡ್ಡ ಕತೆ ದಾಸರೇ – ಜನದ ಒಡವೆ ವಸ್ತು ಬಿಡಿ; ಒಂದು ದೇವಸ್ಥಾನದಲ್ಲಿ ಒಂದು ಒಡವೆ ಬಿಡದ ಹಾಗೆ ದೋಚಿದಾನೆ."

"ನಾನೇ ಕಣ್ಣಾರ ನೋಡಿಕೊಂಡು ಬಂದೆ ತಾಯಿ. ಹರದನಹಳ್ಳಿ–ಅದೇ ಅರಿಕುಠಾರದ ಹತ್ತಿರ – ಅಲ್ಲಿ ದಿವ್ಯಲಿಂಗೇಶ್ವರಸ್ವಾಮಿ ದೇವಸ್ಥಾನದ ಚಿನ್ನರನ್ನದ ಒಡವೆ, ಬೆಳ್ಳಿ ಹಿತ್ತಾಳೆ ಪಾತ್ರೆ, ದೀಪದ ಕಂಬ, ದೇವರ ಶಯನೋತ್ಸವದ ಹಾಸುಗೆ ದಿಂಬು ಆದಿಯಾಗಿ ಎಲ್ಲ ಸಾಮಾನೂ ದೋಚಿಕೊಂಡು ಬಂದಿದಾರೆ—"

"ಏನು ಹೇಳಿ ಏನು ಪ್ರಯೋಜನ – ಮೈಸೂರು ಕೋಟೆಯಲ್ಲಿ ಲಕ್ಷ್ಮೀರಮಣಸ್ವಾಮಿ, ತ್ರಿಣೇಶ್ವರಸ್ವಾಮಿ ಗುಡಿಗಳನ್ನ ದೋಚಲಿಲ್ಲವೆ; ಹೂಡ್ಯದ ನಾರಸೀದೇವರ ಗುಡಿ ನೆಲಸಮ ಮಾಡಲಿಲ್ಲವೆ ? ಬೇರೆ ಕಡೆ ಮಾತೇನು ? ಇಲ್ಲೇ ಕಣ್ಣೆದುರಿನಲ್ಲೇ ಏನಾಗಿದೆ ನೋಡಿ ರಣಧೀರ ಮಹಾರಾಜರು ಕಟ್ಟಿಸಿದ್ದ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನ !"

"ಸನ್ನಿಧಾನದವರು ಕಣ್ಣಿನಲ್ಲಿ ನೀರು ತಂದುಕೊಳ್ಳಬಾರದು. ಸ್ವಲ್ಪ ಸಹಿಸಿಕೊಳ್ಳಬೇಕು. ಇನ್ನು ಸುಲ್ತಾನ ಸುಮ್ಮನಿದ್ದರೂ ಅವನನ್ನ ಕೆಣಕಿ ಕಾಲು ಕೆರೆದಾದರೂ ಕಾದಾಟ ಆರಂಭಿಸಿ ಅವನನ್ನು ಮುಗಿಸಿಬಿಡತಾರೆ. ನೀವು ಚಿಂತೆ

ಮಾಡಬೇಡಿ. ನಾನು ರಾಯರನ್ನ ನೋಡಿದಾಗ ಯುವರಾಜರ ಜನನದ ಸುದ್ದಿ ಅವರಿಗಿನ್ನೂ ತಿಳಿದಿರಲಿಲ್ಲ—"

"ಇತ್ತೀಚಿಗೆ ತಿಳಿದಿದೆ. ಸುದ್ದಿ ಹೋಗಿದೆ."

"ಹಾಗಾದರೆ, ರಾಯರು, ಇನ್ನು ಹಗಲು ರಾತ್ರಿ ತಮ್ಮ ಪ್ರಯತ್ನ ಬಲ ಪಡಿಸತಾರೆ. ತಾವು ಹೆದರಬೇಡಿ."

"ಅಂದರೆ ?"

"ಸನ್ನಿಧಾನ ಕ್ಷಮಿಸಬೇಕು. ಈಗ್ಯೆ ಎರಡು ವರ್ಷದ ಹಿಂದೆ ನಡೆದ ಪ್ರಯತ್ನ ಕೊನೆಗಳಿಗೆಯಲ್ಲಿ ವಿಫಲವಾಗಿ, ಕೈಗೆ ಬಂದ ತುತ್ತು ಬಾಯಿಗಿಲ್ಲ ಅಂದ ಹಾಗೆ ಆದಾಗಿನಿಂದ, ರಾಯರು ಮನಸ್ಸಿಗೆ ಸ್ವಲ್ಪ ಬೇಸರ ಆಗಿತ್ತು – ಆಳುವ ಮಹಾಸ್ವಾಮಿಯವರಿಗೆ ಸ್ವತಂತ್ರ ಪ್ರಭುವಾಗುವ ಯೋಗ ಇಲ್ಲ ಅಂತ."

"ಅವರು ಹಾಗೇಕೆ ಭಾವಿಸಿಕೊಂಡರು ದಾಸರೆ ?"

"ದೊರೆಗಳ ಜಾತಕ ನೋಡಿದವರು ಯಾರೋ ಅವರಿಗೆ ಹಾಗೆ ಹೇಳಿದ ರಂತೆ."

"ಹಾಗೇನು ? ನೀವು ದೊರೆಗಳ ಜಾತಕ ನೋಡಲಿಲ್ಲವೆ ?"

"ನನಗೂ ತೋರಿಸಿದರು—"

"ನೀವೇನು ಅಭಿಪ್ರಾಯ ಕೊಟ್ಟಿರಿ ?"

"ಇದೆಲ್ಲಾ ಅಭಿಪ್ರಾಯದ ಮಾತಲ್ಲ ತಾಯಿ ; ಶಾಸ್ತ್ರದ ಆಧಾರದ ಮೇಲೆ ನಿರ್ಣಯ ಮಾಡತಕ್ಕ ವಿಚಾರ. ಮೊದಲು ದೊರೆಗಳ ಜಾತಕ ನೋಡಿದ್ದವರು ಶಾಸ್ತ್ರದಲ್ಲಿ ಒಳ್ಳೇ ನುರಿತ ಕಯ್ಯೇ."

"ಇದೇನು ದಾಸರೇ ಈ ಹೊಸ ಕುತ್ತು. ಅಂತು ನಮ್ಮ ಪ್ರಯತ್ನವೆಲ್ಲಾ ನೀರಲ್ಲಿ ಹೋಮ—"

"ಹಾಗಲ್ಲ ತಾಯಿ. ನಿಮ್ಮ ಪ್ರಯತ್ನ ವಿಫಲವಾಗುವುದಿಲ್ಲ. ನನ್ನ ಜೀವದ ಮೇಲೆ ಆಣೆಯಿಟ್ಟು ಹೇಳತೇನೆ. ನೀವು ಬೇಸರಪಟ್ಟುಕೊಳ್ಳಬಾರದು. ನಾನು ಮುಖ ನೋಡಿ ಮಾತನಾಡುವ ಮನುಷ್ಯ ಅಲ್ಲ. ನನಗೆ ಸರಿತೋರಿದ್ದನ್ನು ಹೇಳುವ ಮನುಷ್ಯ."

"ನಮಗೆ ಗೊತ್ತಿಲ್ಲವೆ ದಾಸರೇ, ನೀವು ನಿರ್ದಾಕ್ಷಿಣ್ಯವಾಗಿ ಮಾತನಾಡುವ ಹಿತೈಷಿಗಳು ಅಂತಲೇ ನಾವು—"

"ಆದ್ದರಿಂದಲೇ ನಾನು ಧೈರ್ಯಮಾಡಿದ್ದೇನೆ – ಈ ಮಾತು ಹೇಳಿಬಿಡ

ಬೇಕು ಅಂತ. ದೊರೆಗಳಿಗೆ ಸ್ವತಂತ್ರರಾಜ್ಯಾಧಿಕಾರದ ಯೋಗವಿಲ್ಲ ತಾಯಿ.... ಜೊತೆಗೆ ಅವರದು – ಪೂರ್ಣಾಯಸ್ಸಿನ ಜಾತಕ ಕೂಡ ಅಲ್ಲ."

ಮಾತೃಶ್ರೀಯವರು ದೊಡ್ಡದಾದ ನಿಟ್ಟುಸಿರುಬಿಟ್ಟರು. ದಾಸರ ಮುಖವನ್ನು ದಿಟ್ಟಿಸಿದರು.

"ನಾನು ಆಡಿದ ಮಾತಿನ ಪೂರ್ಣ ಹೊಣೆಗಾರಿಕೆ ಅರಿತು, ಕಪಟವಿಲ್ಲದೆ ಮಾತನಾಡಿದ್ದೇನೆ ತಾಯಿ. ಇದರಿಂದ ತಮ್ಮ ಮನಸ್ಸಿಗೆ ನೋವಾಗುವುದೆಂದು ತಿಳಿದೂ ತಿಳಿದೂ ಆಡಿದ್ದೇನೆ—"

"ಆ ಸುಲ್ತಾನನ ಜೋಯಿಸನೂ ಹೀಗೇ ಹೇಳಿದನಂತೆ!"

"ಓ! ಹಾಗಾದರೆ ಈ ವಿಚಾರ ಸುಲ್ತಾನನಿಗೂ ಗೊತ್ತಾಗಿದೆ!"

"ಗೊತ್ತಿದೆ. ಆದರೆ ನಾವು ಈ ಮಾತು ಈವರೆಗೆ ನಂಬಿರಲಿಲ್ಲ."

"ಈ ವಿಚಾರ ಅಲ್ಲೇಕೆ ಚರ್ಚೆಗೆ ಬಂತು ತಾಯಿ."

"ಯುವರಾಜರು ಹುಟ್ಟಿದ ಸುದ್ದಿ ಕೇಳಿದ ಮೇಲೆ ಸುಲ್ತಾನ ಜೋಯಿಸರನ್ನು ಕರೆಸಿಕೊಂಡು ಕುಮಾರರ ಜಾತಕ ಬಲ ಕೇಳಿದನಂತೆ—"

"ಹಾಗೇನು ?"

"ಹೀಗಾಗಬಹುದೆಂದು ನಾವು ನಿರೀಕ್ಷಿಸಿದ್ದೆವು. ಆದ್ದರಿಂದ ಕುಮಾರರ ಜನನಕಾಲದ ವಿವರ ಯಾರಿಗೂ ಸರಿಯಾಗಿ ತಿಳಿಯದಂತೆ ವ್ಯವಸ್ಥೆ ಮಾಡಿದ್ದೆವು."

"ತುಂಬ ಒಳ್ಳೆಯ ಕೆಲಸ ಮಾಡಿದಿರಿ."

"ಸುಲ್ತಾನನ ಪ್ರಶ್ನೆಗೆ ಜೋಯಿಸ ಹೇಳಿದನಂತೆ – 'ಬಾಲ್ಯ ಕಳೆಯುವವರೆವಿಗೂ ಯಾವ ಮಗುವಿನ ಜಾತಕದ ಮೇಲೂ ಫಲ ಹೇಳಬಾರದು; ಅವರು ಆ ಕಾಲದಲ್ಲಿ ಅಸ್ವತಂತ್ರರು. ಆ ಕಾಲಕ್ಕೆ ತಾಯಿತಂದೆಗಳ ಜಾತಕವೇ ಪ್ರಧಾನ' —ಎಂತ."

"ಆಮೇಲೆ ?"

"ದೊರೆಗಳ ಜಾತಕವನ್ನೇ ನೋಡಿ ಫಲ ಹೇಳಿ ಅಂತ ಆಜ್ಞೆ ಮಾಡಿದನಂತೆ ಸುಲ್ತಾನ."

"ಸರಿ."

"ಜೋಯಿಸ ಆ ಜಾತಕ ನೋಡಿ – 'ದೊರೆಗಳ ಆಯುಸ್ಸು ಹೆಚ್ಚೆಂದರೆ ಇನ್ನೆರಡು ವರ್ಷ. ರಾಣಿಯವರ ಆಯುಸ್ಸಂತೂ ಮುಗಿದೇ ಇದೆ. ಇನ್ನೊಂದು ತಿಂಗಳೂ ಬದುಕುವುದಿಲ್ಲ' ಅಂದನಂತೆ."

"ಶ್ರೀ!"

"ಎರಡನೆಯ ಮಾತಂತೂ ನಿಜವಾಯಿತಲ್ಲ."

"ಹೌದೇನು ತಾಯಿ—ಛೆ. ನಾನು ತಂಜಾವೂರಿನಲ್ಲಿ ದೊರೆಗಳ ಜಾತಕ ನೋಡಿದಾಗ ಈ ಅಂಶದ ಕಡೆಗೆ ನನ್ನ ಲಕ್ಷ್ಯ ಹೋಗಲಿಲ್ಲವಲ್ಲ."

"ಅಂತೂ ಕೆಂಪನಂಜಮ್ಮಣ್ಣಿ ಕಣ್ಣುಮುಚ್ಚಿಕೊಂಡಳು. ನಾನಿನ್ನೂ ಬದುಕಿದ್ದೇನೆ ಇದನ್ನೆಲ್ಲಾ ನೋಡುವುದಕ್ಕೆ. ಇನ್ನೂ—"

ಮಾತೃಶ್ರೀಯವರ ಕೊರಳು ಕಟ್ಟಿ ಬಂತು. ದಾಸರೂ ತಲೆ ಬಗ್ಗಿಸಿದರು. ಅವರ ಕಣ್ಣು ತೇವವಾಯಿತು. ಅರೆಕ್ಷಣ ಯಾರೂ ಮಾತನಾಡಲಿಲ್ಲ. ಮಾತೃಶ್ರೀಯವರ ಹೃದಯ ತುಂಬಾ ನೊಂದಿದೆಯೆಂಬುದನ್ನರಿತ ದಾಸರು ಅವರ ಮನಸ್ಸನ್ನು ಬೇರೆಯೆಡೆಗೆ ತಿರುಗಿಸಲು ಬಯಸಿ ತಾವೇ ಮಾತನ್ನಾರಂಭಿಸಿದರು :

"ಸನ್ನಿಧಾನದಲ್ಲಿ ನನ್ನದೊಂದು ಬಿನ್ನಹ – ತಾಯಿಯವರು ತಪ್ಪದೆ ನಡೆಸಿಕೊಡಬೇಕು."

ಮಾತೃಶ್ರೀಯವರ ಕಣ್ಣಿನಲ್ಲಿ ನೀರು ತುಂಬಿತ್ತು. ಮಾತನಾಡಲು ಅವರಿಗೆ ಮನಸ್ಸಿರಲಿಲ್ಲ.

"ಯುವರಾಜ ಕುಮಾರರ ಜನ್ಮಕಾಲ ಅಪ್ಪಣೆಯಾಗಬೇಕು. ಜನ್ಮಪತ್ರಿಕೆ ಸಿದ್ಧಮಾಡಿ—"

"ನಿಮಗೆ ವೃಥಾ ತೊಂದರೆ, ಬಿಡಿ ದಾಸರೇ."

"ಹಾಗೇನಿಲ್ಲ ತಾಯಿ."

"ದಾಸರೇ, ಮುಖ್ಯ ನನ್ನ ಅದೃಷ್ಟ ಚೆನ್ನಾಗಿಲ್ಲ. ನಾನು ಮುಟ್ಟಿದೆಲ್ಲಾ ಮಣ್ಣಾಗುತ್ತಿದೆ. ಹಿಂದೆ ಆ ನವಾಬನನ್ನ, ಈಚೆಗೆ ಈ ಸುಲ್ತಾನನ್ನ ಸಗ್ಗು ಬಡೆಯಬೇಕೆಂದು ಪ್ರಯತ್ನ ಮಾಡಿದ್ದು ಎಷ್ಟು ಸಾರಿ. ಒಂದಲ್ಲ ನಾಲ್ಕು ಪ್ರಯತ್ನವಾಯಿತು ಈ ಹದಿನೈದು ವರ್ಷದಲ್ಲಿ. ಒಂದೂ ಫಲಿಸಲಿಲ್ಲ. ಈ ಯದುವಂಶದ ರಾಜಶಕ್ತಿಯ ಪುನರುಜ್ಜೀವನ ನನ್ನ ಜನ್ಮದಲ್ಲಿ ಆಗದ ಕೆಲಸ. ಹೋಗಲಿ ಬಿಡಿ. ಆದದ್ದಾಗಲಿ ಎಂದು ಸುಮ್ಮನೆ ಇದ್ದುಬಿಟ್ಟರಾಯಿತು."

"ತಾವೇ ಹೀಗೆ ಸೋತು ಕೂತರೆ ಹೇಗೆ ತಾಯಿ?"

"ನನ್ನ ಅದೃಷ್ಟ ಹೀನವಾದ ಮೇಲೆ ಇನ್ನೇನು ಮಾಡುವುದು ಹೇಳಿ."

"ಸನ್ನಿಧಾನ ಸಮಾಧಾನ ತೆಗೆದುಕೊಳ್ಳಬೇಕು. ನಿಮ್ಮ ಯಜಮಾನರಿಗೆ,

ನಿಮ್ಮ ಅತ್ತೆ ದೇವಾಜಮ್ಮಣ್ಣಿಯವರಿಗೆ ನೀವು ಕೊಟ್ಟ ಮಾತು ಉಳಿಸಿಕೊಳ್ಳಬೇಕು."

"ನಿಜ ದಾಸರೆ, ನಾನೂ ನನ್ನ ಕೈಲಾದ ಪ್ರಯತ್ನವನ್ನೆಲ್ಲಾ ಮಾಡಿ ಮುಗಿಸಿದ್ದಾಯಿತಲ್ಲ."

"ಇನ್ನೂ ಮುಗಿದಿಲ್ಲ ತಾಯಿ. ಸಂಕಲ್ಪ ಸಿದ್ಧಿಯಾಗುತ್ತದೆ. ಅಲ್ಲಿಯವರೆಗೂ ಸಾವಧಾನದಿಂದ ಪ್ರಯತ್ನಿಸಬೇಕು. ತಾವು ಚಿಂತಿಸಬೇಡಿ. ಯುವರಾಜ ಕುಮಾರರ ಜನನದ ವಿವರ ಅಪ್ಪಣೆಯಾಗಲಿ. ಸನ್ನಿಧಾನಕ್ಕೆ ಅನಾನುಕೂಲವಾಗದಿದ್ದರೆ ನಾಳೆ ಮಧ್ಯಾಹ್ನ ಮತ್ತೆ ದರ್ಶನಕ್ಕೆ—"

"ಆಗಲಿ; ಬನ್ನಿ–ನನ್ನ ಬುದ್ಧಿಗೆ ಚೆನ್ನಾಗಿ ಮಂಕು ಹಿಡಿದಿದೆ!–ಎಲ್ಲಿ ಬಿಡಾರ ಮಾಡಿದ್ದೀರಿ; ಅದನ್ನೇ ಕೇಳಲಿಲ್ಲವಲ್ಲ."

"ಇಲ್ಲೇ ನನ್ನ ಪರಿಚಯಸ್ಥರೊಬ್ಬರ ಮನೆಯಲ್ಲಿ."

"ನಿಮ್ಮ ಪರಿಚಯಸ್ಥರ ಮನಸ್ಸು ನೋಯಿಸುವುದು ಸರಿಯಲ್ಲ. ಇವತ್ತು ಮಧ್ಯಾಹ್ನದ ಪ್ರಸಾದ ಅಲ್ಲಿಯೇ ಆಗಲಿ. ಕಾಶಿ ರಾಮೇಶ್ವರ ಯಾತ್ರೆ ಮಾಡಿಕೊಂಡು ಬಂದಿರುವ ಪುಣ್ಯಾತ್ಮರ ಸೇವಾ ಲಾಭ ಅವರಿಗೂ ಸಿಗಲಿ. ಮಧ್ಯಾಹ್ನದ ವಿಶ್ರಾಂತಿ ಮುಗಿಸಿಕೊಂಡು ಸೂರ್ಯಾಸ್ತದ ಹೊತ್ತಿಗೆ ನಮ್ಮ ಅತಿಥಿ ಶಾಲೆಗೆ ದಯಮಾಡಿಸಿ ಅಲ್ಲೇ ಬಿಡಾರಮಾಡಿ. ರಾತ್ರಿ ಪೂಜೆ ನಮ್ಮ ತೊಟ್ಟಿಯಲ್ಲೇ ಆಗಲಿ. ಮಂಗಳಾರತಿ ನೋಡುವ ಪುಣ್ಯ ನಮಗಿರಲಿ."

"ಸನ್ನಿಧಾನದ ಅಪ್ಪಣೆಯಾದಂತೆ."

"ದೇವೀರೀ—"

ಓಲಗಶಾಲೆಯ ಬಾಗಿಲು ಸದ್ದಿಲ್ಲದೆ ತೆರೆಯಿತು. ದಾಸಿ ಬಂದು ದೂರದಲ್ಲೇ ನಿಂತು ನಮಸ್ಕರಿಸಿದಳು.

"ದೇವೀರೀ, ಬೈಗಾಗುವ ಹೊತ್ತಿಗೆ ದಾಸರು ಬ್ರಾಹ್ಮಣರ ಬಿಡದಿಗೆ ಬರುತ್ತಾರೆ. ರಾತ್ರಿ ನಮ್ಮ ತೊಟ್ಟಿಯಲ್ಲಿ ಪೂಜೆ ಮಾಡುತ್ತಾರೆ. ಬಿಡದಿಯ ಗುರಿಕಾರರಿಗೆ ತಿಳಿಸು."

ದಾಸಿ ನಮಸ್ಕರಿಸಿ ಹೊರಟುಹೋದಳು. ಮಾತೃಶ್ರೀಯವರು ಭದ್ರಾಸನದಿಂದೆದ್ದರು. ದಾಸರೂ ಎದ್ದು ಸನ್ನಿಧಾನಕ್ಕೆ ನಮಸ್ಕರಿಸಿದರು. ಇನ್ನೊಬ್ಬಳು ದಾಸಿ ಬಂದು ದಾಸರನ್ನು ಕರೆದುಕೊಂಡು ಹೋದಳು.

§

"ಭಲೆ, ಜೋಯಿಸರೆ, ನಿಮ್ಮ ಶಕ್ತಿ ತಾರೀಫ್ ಮಾಡಬೇಕಾದದ್ದೇ! ನೀವು ಹೇಳಿದ ಎರಡು ಭವಿಷ್ಯಗಳೂ ಸರಿಹೋದುವಲ್ಲ;–ಚಾಮರಾಜನ ಹೆಂಡತಿ ಸತ್ತಾಗ ಏನೋ ಕಾಕತಾಳನ್ಯಾಯ ಇದ್ದೀತು ಎಂದಿದ್ದೆವು; ಈಚೆಗೆ ಚಾಮರಾಜನೂ ಸತ್ತಮೇಲೆ, ನಿಮಗೆ ಜ್ಯೋತಿಷ ಚೆನ್ನಾಗಿ ಗೊತ್ತು ಎಂಬ ವಿಚಾರದಲ್ಲಿ ನಮಗೆ ನಂಬಿಕೆ ಹುಟ್ಟಿತು."

"ಸ್ವಯಂ ಪಾದ್‌ಷಾರವರ ಮುಖದಿಂದ ಈ ಹೊಗಳಿಕೆ ಕೇಳಿದ್ದರಿಂದ ನನ್ನ ಜನ್ಮ ಸಾರ್ಥಕವಾಯಿತು."

"ಇದೇನು, ಹೀಗೆ ಹೇಳುತ್ತಾ ಇದ್ದೀರಿ ಜೋಯಿಸರೆ!"

"ವಿಶೇಷವಿದೆ ಪಾದ್‌ಷಾರವರೆ; ತಾವು, ಸ್ವತಃ ಜ್ಯೋತಿಷಬಲ್ಲವರು; ಜ್ಯೋತಿಷ ಬಲ್ಲವರ ಬಾಯಿಂದ ಈ ಮಾತು ಬಂದಿದ್ದು ಮನಸ್ಸಿಗೆ ಎಷ್ಟೋ ತೃಪ್ತಿ."

"ಒಬ್ಬ ಜ್ಯೋತಿಷಿ ಇನ್ನೊಬ್ಬ ಜ್ಯೋತಿಷಿಯನ್ನ ಮೆಚ್ಚೋದಿಲ್ಲ. ಮೆಚ್ಚೋದೇನು, ತನಗೆ ಯೋಗ್ಯತೆಯಿರಲಿ ಇಲ್ಲದೆ ಇರಲಿ ಇನ್ನೊಬ್ಬನಂತೂ ಅಲ್ಲ ಗಳಿಯತಾನೆ– ಅಂತ ತಾನೆ ನಿಮ್ಮ ಅಭಿಪ್ರಾಯ. ನಮ್ಮನ್ನೂ ಆ ಗುಂಪಿಗೆ ಸೇರಿಸಿದಿರಾ ಜೋಯಿಸರೆ?"

"ಶಾಂತಂ ಪಾಪಂ! ಸಾಮಾನ್ಯವಾಗಿ ಈರ್ಷೆ ಮಾನವನ ಸ್ವಭಾವ ಎಂಬ ಮಾತಿಗೆ ಹೇಳಿದೆ. ಅಲ್ಪರ ಸ್ವಭಾವವೆಲ್ಲಿ– ಮಹನೀಯರ ಸ್ವಭಾವವೆಲ್ಲಿ?"

"ನಾವು ಯಾವಾಗಲೂ ಯೋಗ್ಯತೆಗೆ ಗೌರವ ಕೊಡುತ್ತೇವೆ."

"ಜಗತ್ತಿಗೇ ತಿಳಿದ ವಿಚಾರ ಅದು."

"ಹಾಗೆಯೇ ಯೋಗ್ಯತೆಯಿಲ್ಲದವರನ್ನು ನಿರಾಕರಿಸುತ್ತೇವೆ."

"ಪ್ರಭು ಚಿತ್ತ."

"ಡಾಂಭಿಕರಾದವರನ್ನು ಶಿಕ್ಷಿಸುತ್ತೇವೆ."

"ಪ್ರಭುಗಳ ನಿಗ್ರಹಾನುಗ್ರಹಶಕ್ತಿ ಸುಪ್ರಸಿದ್ಧವಾದದ್ದು."

"ಈ ಅಂಶಗಳನ್ನೆಲ್ಲಾ ನೆನಪಿನಲ್ಲಿಟ್ಟುಕೊಂಡು ನೀವು ನಡೆಯಬೇಕು."

"ಅಪ್ಪಣೆ."

"ನಿಮಗೆ ಗೊತ್ತಿರಬೇಕಲ್ಲ ಜೋಯಿಸರೆ—"

"ಯಾವುದು ಮಹಾಪ್ರಭು?"

"ಈಗ್ಗೆ ಐದು ವರ್ಷದ ಹಿಂದೆ ನಾವು ಕೋಟೆಯ ದಕ್ಷಿಣದ ಕಡೆ ಹೊಸದಾಗಿ ಆನೆಬಾಗಿಲು ಕಟ್ಟಿಸಿದ್ದು."

"ನೋಡಿದ್ದೇನೆ ಪ್ರಭು."

"ಆ ಕೆಲಸ ಆರಂಭಿಸುವುದಕ್ಕೆ ಮುಹೂರ್ತ ಕಟ್ಟಿದವ—"

"ನಾನಲ್ಲ ಪ್ರಭು."

"ನೀವಾಗಿದ್ದರೆ, ನೀವು ಈಗ ನಮ್ಮ ಮುಂದೆಯಿರುತ್ತಿರಲಿಲ್ಲ. ಆ ಮುಹೂರ್ತ ಕಟ್ಟಿಕೊಟ್ಟ ಕೀಳುನಾಯಿ ನಮ್ಮೊಡನೆ ಏನು ಬೊಗಳಿದ್ದ ಗೊತ್ತೆ?—ಆ ಮುಹೂರ್ತ ಪ್ರಭಾವದಿಂದ ನಮ್ಮ ಈ ಕೋಟೆಗೆ ಯಾರಿಂದಲೂ ಯಾವ ವಿಪತ್ತೂ ಸಂಭವಿಸುವುದಿಲ್ಲವೆಂದು ಬೊಗಳಿದ್ದ. ಪಾಪಿ! ಒಂದು ವರ್ಷ ಕಳೆಯುವುದರೊಳಗಾಗಿ ಅವನ ಮಾತು ಸುಳ್ಳಾಯಿತು! ಅವನ ಗತಿ ಏನಾಯಿತು ಗೊತ್ತೆ ಜೋಯಿಸರೆ? ಅವನ ಹೆಣ ನಾಯಿನರಿಗಳ ಪಾಲಾಯಿತು!"

ಈ ಮಾತುಗಳನ್ನಾಡುತ್ತಿದ್ದಂತೆ ಸುಲ್ತಾನರ ಮುಖ ಕೆಂಪೇರುತ್ತಿತ್ತು. ಕಣ್ಣಿನಲ್ಲಿ ಕೋಪ ಕುದಿಕುದಿದು ದೃಷ್ಟಿ ವ್ಯಗ್ರವಾಗುತ್ತಿತ್ತು. ಕ್ರೌರ್ಯ ಉಕ್ಕುತ್ತಿತ್ತು.

ಜೋಯಿಸರು ಗಟ್ಟಿಯೆದೆಯ ಸಾಹಸಿಗಳಾದರೂ ಸುಲ್ತಾನರ ಆಗಿನ ಮುಖಚರ್ಯೆ ಜೋಯಿಸರ ಎದೆಬಡಿತವನ್ನು ಅಸ್ತವ್ಯಸ್ತಮಾಡಿತು. ಅವರ ಮುಖದ ಮೇಲೆ ಬೆವರಿನ ಮಣಿಗಳನ್ನು ಮೂಡಿಸಿತು; ಅವರ ಮೈ ಅವರ ಅಂಕೆ ಮೀರಿ ನಡುಗಿತು.

ಆದರೆ ಇವೊಂದೂ ಸುಲ್ತಾನರ ದೃಷ್ಟಿಗೆ ಗೋಚರವಾಗಲಿಲ್ಲ. ಕಹಿ ನೆನಪು ಅವರನ್ನು ಅತಿಯಾಗಿ ಕೆರಳಿಸಿತ್ತು. ಆ ತಾಪ ಅವರ ಮುಖದಲ್ಲಿ ಕೊಳ್ಳಿಯ ದೆವ್ವದಂತೆ ಕುಣಿಯುತ್ತಿತ್ತು!—

ಹತ್ತು ಎಣಿಸುವುದರೊಳಗಾಗಿ ಜೋಯಿಸರು ತಮ್ಮ ಸಂಕಲ್ಪ ಶಕ್ತಿಯಿಂದ ಎದೆಯ ಬಡಿತವನ್ನು ವ್ಯವಸ್ಥೆಗೊಳಿಸಿಕೊಂಡರು. ಮೈ ನಡುಕವನ್ನು ನಿಲ್ಲಿಸಿದರು. ಹೊದೆದಿದ್ದ ಧೋತ್ರವನ್ನು ಸರಿಪಡಿಸಿಕೊಳ್ಳುವ ಸೋಗಿನಲ್ಲಿ ಮುಖದ ಮೇಲಿದ್ದ ಬೆವರನ್ನು ಒರೆಸಿಕೊಂಡರು. ಶಾಂತ ಮುಖಮುದ್ರೆಯನ್ನು ರಚಿಸಿಕೊಂಡು ಸುಮ್ಮನೆ ಕುಳಿತರು – ಸುಲ್ತಾನರು ತಾವಾಗಿ ಸಮಸ್ಥಿತಿಗೆ ಬಂದು ಮಾತನ್ನಾರಂಭಿಸಲಿ ಎಂದು.

ಸುಲ್ತಾನರ ಬುದ್ಧಿ ತಿಳಿಗೊಳ್ಳಲು ಸ್ವಲ್ಪ ಹೊತ್ತು ಹಿಡಿಯಿತು. ಅವರು ಎಚ್ಚೆತ್ತು ನೋಡಿದಾಗ ಜೋಯಿಸರು ಕಲ್ಲಿನಲ್ಲಿ ಕಡೆದ ವಿಗ್ರಹದಂತೆ ಕುಳಿತಿದ್ದರು.

ಅದನ್ನು ಕಂಡ ಸುಲ್ತಾನರು ತಮ್ಮ ಕೋಪಾಟೋಪದಿಂದಾಗಿ ಜೋಯಿಸರು ಬೆದರಿ ಬೆಪ್ಪಾಗಿ ಕುಳಿತಿರಬೇಕೆಂದು ಭಾವಿಸಿದರು. ಆ ಆಲೋಚನೆ ಅವರ ಮನಸ್ಸಿಗೆ ಎಷ್ಟೋ ಆಪ್ಯಾಯಮಾನವಾಗಿ ಕಂಡಿತು. ಆದರಿಂದಾಗಿ ಅವರ ದೃಷ್ಟಿಯ ಉಗ್ರವ್ಯಗ್ರತೆ ಬಹುಮಟ್ಟಿಗೆ ಕಳೆಯಿತು. ಸುಲ್ತಾನರು ಸಲಿಗೆಯ ಧ್ವನಿಯಲ್ಲಿ ಕೇಳಿದರು :

"ಇದೇನು ಜೋಯಿಸರೆ, ಇಷ್ಟೊಂದು ಗಾಬರಿಯಾಗಿದ್ದೀರಿ ?–ನೀವೇನೂ ತಪ್ಪು ಮಾಡಿಲ್ಲವಷ್ಟೆ ?"

"ತಪ್ಪೇನೂ ಆಗಿಲ್ಲ. ಆದರೂ ಪ್ರಭುಗಳು ಕೋಪಗೊಂಡರೆ ಕಿಂಕರರಾದ ನಾವು—"

"ನೀವೇನೂ ಹೆದರಬೇಕಾಗಿಲ್ಲ. ನಿಮ್ಮ ಜೋತಿಷ ಜ್ಞಾನ ತುಂಬ ಉತ್ತಮವಾಗಿದೆಯೆಂದು ನಾವೇ ತಾರೀಫ್ ಮಾಡಿದ್ದೇವಲ್ಲ.–ನೀವು ಇನ್ನು ಮುಂದೆಯೂ ನಮ್ಮಲ್ಲಿ ಸರಿಯಾಗಿ ನಡೆದುಕೊಂಡರಾಯಿತು–ನಿಮ್ಮ ವಿಚಾರದಲ್ಲಿ ನಮ್ಮ ಪ್ರೀತಿ ಇನ್ನೂ ಹೆಚ್ಚಾಗುತ್ತದೆ."

"ಕೃತಾರ್ಥನಾದೆ ಪ್ರಭು."

"ಅಷ್ಟ ಜ್ಞಾನದಲ್ಲಿ ಕೇಳಬೇಕಾದುದನ್ನೆ ಕೇಳದೆ ಮರೆತಿದ್ದೆ–ನಮ್ಮ ಜಾತಕ ಗುಣಿಸಿ ನೋಡಿದಿರಾ ?"

"ನೋಡಿದ್ದೇನೆ ಪ್ರಭು."

"ಆ ಚಾಮರಾಜನ ಮಗನ ಜಾತಕ ?"

"ಇನ್ನೂ ಆ ಜಾತಕ ನೋಡಬೇಕೆ ! ಅಂಗೈ ಹುಣ್ಣಿಗೆ ಕನ್ನಡಿ ಬೇಕೆ ?–ಹುಟ್ಟಿದ ತಿಂಗಳೊಳಗಾಗಿ ತಾಯಿಯನ್ನು ತಿಂದುಕೊಂಡಿದ್ದಾಯಿತು ; ಎರಡು ವರ್ಷ ಮುಗಿಯುವ ಹೊತ್ತಿಗೆ ಅಪ್ಪ ಸತ್ತ. – ಆಯಿತು ಬಿಡಿ ಇನ್ನು ಆ ದರಿದ್ರ ಜಾತಕದ ಮಾತು."

"ಹಾಗೇನು ನಿಮ್ಮ ಅಭಿಪ್ರಾಯ !" – ಸುಲ್ತಾನರು ನಕ್ಕರು. ಮನಸ್ಸಿನ ಅಂತರಾಳದಲ್ಲಿ ಅಡಗಿದ್ದ ಯಾವುದೋ ಆಸೆ ಥಟ್ಟನೆ ಪುಟಿದು ಚಿಮ್ಮಿಸಿದಂತಿತ್ತು–ಆ ನಗೆ.

"ಸರಿ, ಹೋಗಲಿ ಬಿಡಿ ಹಾಗಾದರೆ– ಅ್ಹಾ ! ನಮ್ಮ ಜಾತಕ ?"

"ಎಲ್ಲ ಕಣ್ಣೆದುರಿಗೇ ಕಾಣುತ್ತಿರುವಾಗ ಇನ್ನು ಹೇಳಬೇಕಾದ್ದೇನಿದೆ ಪ್ರಭು. ತಮಗೆ ಇದ್ದುದು ಒಂದೇ ಒಂದು ಕಾಲ್ತೊಡಕು. ತಾವು ಸಿಪಾರಿಸಿ

ಕೊಳ್ಳಬೇಕಾಗಿದ್ದ ಆ ಕಾಲ್ತೊಡಕನ್ನು ಯಮರಾಯನೇ ನಿವಾರಿಸಿದ. ಅಲ್ಲಿಗೆ ಮುಗಿಯಿತು."

"ಹೂಂ – ಹಾಗೆನ್ನುತ್ತೀರೇನು ?"

"ಅಷ್ಟೇಯೆ ಪ್ರಭು."

"ಸರಿ ಜೋಯಿಸರೆ."—ಸುಲ್ತಾನರು ತಮ್ಮ ಭದ್ರಾಸನದ ಪಕ್ಕದ ಕಾಲುಮಣೆಯ ಮೇಲಿದ್ದ ನವರತ್ನಖಚಿತವಾದ ಸಂದೂಕದ ಮುಚ್ಚಳವನ್ನು ತೆಗೆದರು. ಕೆಂಪುರೇಷ್ಮೆಯ ಚೀಲವೊಂದನ್ನು ಪ್ರಯತ್ನಪೂರ್ವಕವಾಗಿ ಎತ್ತಿ ಹಿಡಿದುಕೊಂಡು, ತಮ್ಮ ಹತ್ತಿರಕ್ಕೆ ಬರುವಂತೆ ಜೋಯಿಸರಿಗೆ ಸಂಜ್ಞೆ ಮಾಡಿದರು ಮರುಕ್ಷಣದಲ್ಲಿ ಐದುನೂರು ಬಹಾದ್ದುರಿ ವರಹಗಳ ಥೈಲಿ ಝಣ್ಣೆಂದು ಬಿತ್ತು ಜೋಯಿಸರ ಬೊಗಸೆಗೆ.

§

"ಬನ್ನಿ ಮೀರ್‌ಸಾದಕ್ ಸಾಹೇಬರೆ, ಕುಳಿತುಕೊಳ್ಳಿ" ಎಂದು ಹೇಳುತ್ತಾ ಸಮ್ಮುಖದ ನಂಜರಾಜಯ್ಯನವರು ಟಿಪ್ಪೂ ಸುಲ್ತಾನರ ದಿವಾನರನ್ನು ಅರಮನೆಯ ಮಂತಣ ಶಾಲೆಯಲ್ಲಿ ಕುಳ್ಳಿರಿಸಿ, ಪಕ್ಕದಲ್ಲಿದ್ದ ಪೀಠದಲ್ಲಿ ತಾವೂ ಕುಳಿತುಕೊಂಡರು.

ಒಂದೆರಡು ಕ್ಷಣ ಕಳೆಯುವುದರೊಳಗಾಗಿ ಒಳತೊಟ್ಟಿಯಿಂದ ಪರಾಕಿನ ಧ್ವನಿ ಕೇಳಿಸಿತು. ನಂಜರಾಜಯ್ಯನವರು ಅದನ್ನು ಕೇಳಿದೊಡನೆಯೇ ಥಟ್ಟನೆ ಎದ್ದು ನಿಂತರು. ಮೀರ್‌ಸಾದಕ್‌ರವರು ಏಳದೆ ಇನ್ನೂ ತಮ್ಮ ಪೀಠದಲ್ಲಿಯೇ ಕುಳಿತಿದ್ದರು. ಅದನ್ನು ಗಮನಿಸಿ ನಂಜರಾಜಯ್ಯನವರು ಗಂಭೀರ ಧ್ವನಿಯಲ್ಲಿ "ಮಹಾಮಾತೃಶ್ರೀ ಸನ್ನಿಧಾನದವರು ಬಿಜಯ ಮಾಡಿಸುತ್ತಿದ್ದಾರೆ" ಎಂದು ಸೂಚಿಸಿದರು. ಈ ಮಾತು ಮೀರ್‌ಸಾದಕ್‌ರವರಿಗೆ ರುಚಿಸಲಿಲ್ಲ. ಅವರು ತಮ್ಮ ಮುಖವನ್ನು ಮುದುಡಿಕೊಂಡರು. ಆದರೂ ಪರಾಕಿನ ಧ್ವನಿ ತೀರ ಹತ್ತಿರಕ್ಕೆ ಬಂದ ಮೇಲೆ ಅರೆಮನಸ್ಸಿನಿಂದ ಎದ್ದು ನಿಂತರು.

ಮಹಾಮಾತೃಶ್ರೀ ಸನ್ನಿಧಾನದವರು ತೆರೆಯ ಹಿಂಬದಿಯ ಪೀಠದಲ್ಲಿ ಮಂಡಿಸಿದ ಮೇಲೆ, ದಾಸಿಯ ಆಜ್ಞೆಯನ್ನನುಸರಿಸಿ ಅವರಿಬ್ಬರೂ ತೆರೆಯ ಹತ್ತಿರಕ್ಕೆ

ಬಂದು ಕೈಕಟ್ಟಿ ನಿಂತರು. ಒಡನೆಯೇ ನಂಜರಾಜಯ್ಯ ಸನ್ನಿಧಾನದಲ್ಲಿ ಅರಿಕೆ ಮಾಡಿಕೊಂಡರು.

"ಮೀರ್‌ಸಾದಕ್ ಸಾಹೇಬರು ಸನ್ನಿಧಾನದ ದರ್ಶನಕ್ಕಾಗಿ ಬಂದಿದ್ದಾರೆ."

"ನಾವು ಸರ್ವಾಧಿಕಾರಿಗಳೊಡನೆ ಮಾತನಾಡುವುದು ಅತ್ಯಗತ್ಯವಾಗಿದೆಯಾಗಿ ಅವರು ನಮ್ಮ ದರ್ಶನಕ್ಕೆ ಬರಬೇಕೆಂದು ಅವರಿಗೆ ತಿಳಿಸಲಾಯಿತೆ, ನಂಜರಾಜಯ್ಯ ?"

ನಂಜರಾಜಯ್ಯನವರು ಮೀರ್ ಸಾದಕ್‌ರವರ ಕಡೆ ನೋಡಿದರು. ಅವರು ಸಂದರ್ಭವನ್ನರಿತು :

"ಸರ್ವಾಧಿಕಾರಿಗಳು ಬೇರೆ ಅನೇಕ ಮುಖ್ಯ ಕಾರ್ಯಗಳಿಗೆ ಮನಸ್ಸು ಕೊಡಬೇಕಾಗಿದೆಯಾಗಿ ಅವರು ಯಾರನ್ನೂ ನೋಡುತ್ತಿಲ್ಲ. ಆದ್ದರಿಂದ ನಾನು ಅವರನ್ನು ಕಂಡು ಮಾತನಾಡಲಾಗಲಿಲ್ಲ—"

"ಸರ್ವಾಧಿಕಾರಿಗಳೆಂದ ಮೇಲೆ ಅವರು ಅನೇಕ ವಿಚಾರಗಳಿಗೆ ಗಮನ ಕೊಡಬೇಕಾದದ್ದು ಅನಿವಾರ್ಯ. ಆ ಅಂಶ ನಾವು ಬಲ್ಲೆವು. ಆದರೂ, ಅರಸರಾಗಲೀ, ಅರಸರು ಬಾಲಕರಾದರೆ ಅವರ ರಕ್ಷಕರಾಗಲೀ ಅಪೇಕ್ಷಿಸಿದಾಗ ಒಡನೆಯೇ ಬಂದು, ಅವರ ದರ್ಶನ ತೆಗೆದುಕೊಳ್ಳಬೇಕಾದದ್ದು ಸರ್ವಾಧಿಕಾರಿಗಳ ಆದ್ಯಕರ್ತವ್ಯ.—ಈ ವಿಚಾರವನ್ನು ನೀವು ಸ್ಪಷ್ಟಪಡಿಸಲಿಲ್ಲವೆ, ನಂಜರಾಜಯ್ಯ ?"

"ತಿಳಿಸಿದೆ."

"ತಿಳಿಸಿದರು, ರಾಣೀಸಾಹಿಬಾ. ಸರ್ವಾಧಿಕಾರಿಗಳನ್ನು ಕಂಡು ಈ ವಿಚಾರ ತಿಳಿಸಬೇಕೆಂದು ನಾನೂ ತುಂಬ ಪ್ರಯತ್ನಪಟ್ಟೆ. ಆದರೂ ಸಾಧ್ಯವಾಗಲಿಲ್ಲ."

"ಇವರ ಮಾತು ವಿಚಿತ್ರವಾಗಿದೆ, ಅಲ್ಲವೆ ನಂಜರಾಜಯ್ಯ. ಇವರು ಸರ್ವಾಧಿಕಾರಿಗಳ ಸಮ್ಮುಖದ ದಿವಾನರು. ಅರಮನೆಯಿಂದ ಅತ್ಯಗತ್ಯವಾದ ಕರೆ ಬಂದಿದೆಯೆಂಬ ಸುದ್ದಿಯನ್ನು ಸರ್ವಾಧಿಕಾರಿಗಳಿಗೆ ತಿಳಿಸಲು ಇವರಿಗೇ ಸಾಧ್ಯವಾಗಲಿಲ್ಲವಂತೆ! ತಮ್ಮ ಸಮ್ಮುಖದ ದಿವಾನರನ್ನು ನೋಡಲು ಕೂಡ ಸಾಧ್ಯವಿಲ್ಲದಷ್ಟು ಕೆಲಸ ಅದೇನೋ – ನಮ್ಮ ಸರ್ವಾಧಿಕಾರಿಗಳಿಗೆ !"

"ನನಗದು ತಿಳಿಯದು ರಾಣೀಸಾಹಿಬಾ."

"ಸರಿ – ನಾವು ಏತಕ್ಕಾಗಿ ಸರ್ವಾಧಿಕಾರಿಗಳನ್ನು ಇಲ್ಲಿಗೆ ಬರಮಾಡಿಕೊಳ್ಳಲು ಅಪೇಕ್ಷಿಸಿದೆವು ಎನ್ನುವ ವಿಚಾರ ಇವರಿಗೆ ಶ್ರುತಪಡಿಸಿ

ನಂಜರಾಜಯ್ಯ. ಇವರು ಆ ಅಂಶವನ್ನು ಸರ್ವಾಧಿಕಾರಿಗಳಿಗೆ ತಿಳಿಸಿ, ಆ ಬಗ್ಗೆ ಅವರು ಏನು ವ್ಯವಸ್ಥೆ ಮಾಡಲಿದ್ದಾರೆಂಬುದನ್ನು ತಿಳಿದು, ನಮ್ಮಲ್ಲದನ್ನು ಬಿನ್ನವಿಸಿಕೊಳ್ಳಲಿ."

"ಅಪ್ಪಣೆ. ಸನ್ನಿಧಾನದವರ ಅಪ್ಪಣೆ ಈ ರೀತಿ ಇದೆ ಮೀರ್‌ಸಾದಕ್ ಸಾಹೇಬರೆ: ಆಳಿದ ಮಹಾರಾಜರು ಖಾಸಾ ಚಾಮರಾಜ ಒಡೆಯರವರು ಸ್ವರ್ಗಸ್ಥರಾಗಿ ಬರುವ ಶ್ರಾವಣ ಶುದ್ಧ ದಶಮಿಗೆ ನಾಲ್ಕು ತಿಂಗಳು ತುಂಬುತ್ತದೆ. ಕಳೆದ ವೈಶಾಖ, ಜ್ಯೇಷ್ಠ ಮಾಸಗಳಲ್ಲಿ ಪಟ್ಟಾಭಿಷೇಕಕ್ಕೆ ಒಳ್ಳೆ ಮುಹೂರ್ತಗಳು ಇದ್ದುವು. ಆ ವಿಚಾರ ಸರ್ವಾಧಿಕಾರಿಗಳಿಗೆ ತಿಳಿಸಿ ಯುವರಾಜ ಕುಮಾರರಿಗೆ ಪಟ್ಟಾಭಿಷೇಕ ಮಹೋತ್ಸವ ನಡೆಸುವಂತೆ ಸೂಚಿಸಿದ್ದಾಯಿತು. ಅವರು ಆ ಸೂಚನೆಗೆ ಮನಗೊಟ್ಟಂತೆ ಕಾಣುವುದಿಲ್ಲ. ನವರಾತ್ರೆ ಹಬ್ಬಕ್ಕೆ ಮೊದಲೇ ಈ ಪಟ್ಟಾಭಿಷೇಕ ಮಹೋತ್ಸವ ನಡೆಯಬೇಕಾದದ್ದು ಅತ್ಯಾವಶ್ಯಕ. ಶ್ರಾವಣದಲ್ಲಿ ದಿನಶುದ್ಧಿ ಚೆನ್ನಾಗಿದೆ. ಆದ್ದರಿಂದ ಸರ್ವಾಧಿಕಾರಿಗಳು ಸ್ವಲ್ಪವೂ ವಿಳಂಬ ಮಾಡದೆ ಪಟ್ಟಾಭಿಷೇಕದ ಏರ್ಪಾಡುಗಳನ್ನೆಲ್ಲಾ ಒಡನೆಯೇ ಕೈಗೊಳ್ಳಬೇಕು—ಇದು ಸನ್ನಿಧಾನದ ಆಜ್ಞೆ. ಇದನ್ನು ನೀವು ಇಂದೇ ಸರ್ವಾಧಿಕಾರಿಗಳಿಗೆ ತಿಳಿಸಬೇಕು. ಈ ಬಗ್ಗೆ ಸರ್ವಾಧಿಕಾರಿಗಳು ಏನು ವ್ಯವಸ್ಥೆ ಮಾಡಲಿದ್ದಾರೆಂಬುದನ್ನು ತಿಳಿದು, ಅದನ್ನು ನಾಳೆ ಬೆಳಗ್ಗೆ ಸನ್ನಿಧಾನಕ್ಕೆ ವರದಿ ಮಾಡಬೇಕು."

"ರಾಣೀಸಾಹಿಬಾರವರ ಆಜ್ಞೆಯನ್ನು ಈ ದಿನವೇ ಸರ್ವಾಧಿಕಾರಿಗಳಿಗೆ ತಿಳಿಸಲು ಪ್ರಯತ್ನಿಸುತ್ತೇನೆ."

"ಈ ವಿಚಾರದಲ್ಲಿ ಯಾರೂ ಯಾವ ವಿಧವಾದ ಆಲಸ್ಯಕ್ಕೂ ಎಡೆ ಕೊಡ ಕೂಡದೆಂಬುದು ಸನ್ನಿಧಾನದ ಕಟ್ಟಪ್ಪಣೆ."

"ತಿಳಿಯಿತು."

ಮಹಾಮಾತೃಶ್ರೀಯವರು ಭದ್ರಾಸನದಿಂದೆದ್ದರು. ಚೇಟಿಯ ಸಂಜ್ಞೆ ಯಿಂದದನ್ನರಿತ ನಂಜರಾಜಯ್ಯನವರು ಕೈಮುಗಿದು ತಲೆಬಾಗಿ ನಮಸ್ಕರಿಸಿದರು. ಮೀರ್‌ಸಾದಕ್‌ರವರೂ ಸೊಂಟ ಬಗ್ಗಿಸಿ ಹಣೆ ಮುಟ್ಟಿ ಮುಟ್ಟಿ ಮೂರು ಬಾರಿ ಸಲಾಂ ಮಾಡಿದರು.

§

ದಿವಾನ್ ಮೀರ್‌ಸಾದಕ್‌ರವರೊಡನೆ ನಡೆದ ಮಾತುಕತೆಗಳಿಂದ ಮಹಾಮಾತೃಶ್ರೀಯವರಿಗೆ ಏನೇನೂ ಸಮಾಧಾನವಾಗಲಿಲ್ಲ.

ಇದಿರು ಪಕ್ಷದವರು ತಮಗೆ ಕೊಡದ ಗೌರವವನ್ನು ಆರೋಪಿಸಿಕೊಂಡು ಗಂಭೀರವಾಗಿ ಮಾತನಾಡಿದ್ದೇನೋ ಆಯಿತು – ಆದರೆ ಅದರಿಂದಾಗಬಹುದಾದ ಪ್ರಯೋಜನವಾದರೂ ಏನು? ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ಈ ವಿಚಾರವನ್ನು ಕುರಿತು ತೀವ್ರವಾಗಿ ಆಲೋಚಿಸಲಾರಂಭಿಸಿದರು.

ಹೈದರ್ ನಾಯಕ ಎಷ್ಟೇ ಪ್ರಬಲನಾಗಿದ್ದರೂ, ಹೆಸರಿಗಾದರೂ ರಾಜರನ್ನುಳಿಸಿಕೊಂಡಿದ್ದ. ಅವನ ಮಗನಿಗೆ ಅದೂ ಸಮ್ಮತವಿಲ್ಲವೆಂದು ತೋರುತ್ತದೆ; ರಾಜವಂಶವನ್ನು ಪೂರ್ಣವಾಗಿ ನಿರಾಕರಿಸಿ ತಾನೇ ರಾಜನಾಗಲು ಅವನು ನಿರ್ಧರಿಸಿದ್ದಾನೆಂಬುದರಲ್ಲಿ ಸಂಶಯವೇಯಿಲ್ಲ....ಅವನು ವ್ಯಾಘ್ರಾಸನ ಮಾಡಿಸಿದಾಗಲೇ ನಮಗೆ ಅದು ಅರ್ಥವಾಗಬೇಕಾಗಿತ್ತು. ಕಳೆದ ನವರಾತ್ರಿಯಲ್ಲಿ ಅವನು ತೋರಿದ ನಡವಳಿಕೆಯಿಂದಲಂತೂ ಈ ವಿಚಾರ ಅತ್ಯಂತ ಸ್ಪಷ್ಟವೇ ಆಯಿತಲ್ಲ.

ಮೀರ್‌ಸಾದಕ್ ನಾಳೆ ಇಲ್ಲಿಗೆ ಬರುವುದಂತೂ ತೀರಾ ಅಸಂಭವ. ನಾವು ಒತ್ತಾಯಮಾಡಿ ಕರೆಸಿದರೂ ಏನಾದರೊಂದು ಸುಳ್ಳಿನ ಕಂತೆ ಬಿಚ್ಚುತ್ತಾನೆ....

ಮುಂದಕ್ಕೆ....

ಎಷ್ಟು ಯೋಚಿಸಿದರೂ, ರಾಜವಂಶದ ಭವಿಷ್ಯದ ಮೇಲೆ ಕಗ್ಗತ್ತಲು ಕವಿದಿರುವಂತೆ ತೋರಿತೇ ವಿನಾ ಅಭ್ಯುದಯದ ಮಾರ್ಗ ತೋರಲಿಲ್ಲ – ಮಹಾಮಾತೃಶ್ರೀಯವರಿಗೆ ಅಪಾರ ದುಃಖವಾಯಿತು.

ಯಾರಲ್ಲಿ ತೋಡಿಕೊಳ್ಳುವುದು ಈ ದುಃಖವನ್ನು! ಒಂದೆಡೆ ಅಸಹಾಯಕತೆ. ಇನ್ನೊಂದೆಡೆ ವಿಫಲತೆ. ಇವೆರಡರ ಜಂಜಡಕ್ಕೆ ಸಿಕ್ಕಿ ಅವರ ಮನಸ್ಸು ಜರ್ಜರಿತವಾಯಿತು. ದೇಹ ದಣಿಯಿತು....

ಮಹಾಮಾತೃಶ್ರೀಯವರು ಪ್ರಯತ್ನಪೂರ್ವಕವಾಗಿ ಕಣ್ಣರಳಿಸಿ ಎಚ್ಚರ ಮಾಡಿಕೊಂಡು ಹಾಸುಗೆಯಲ್ಲಿ ಹೊರಳಿದರು – ಆ ಮಗ್ಗುಲಿಂದ ಈ ಮಗ್ಗುಲಿಗೆ.

ಅರಮನೆಯ ಆಕಾಶಮಾಳಿಗೆಯಲ್ಲಿದ್ದ ಅವರ ಶಯನಗೃಹದ ಕಿಟಕಿಯ ಜಾಲಂಧ್ರದಿಂದ ಚಂದ್ರನ ಕಿರಣಗಳು ಒಳನುಗ್ಗಿ ನೆಲದ ಮೇಲೆ ಸುಂದರವಾದ ಹಸೆಯನ್ನು ಬರೆದಿದ್ದುವು. ಆ ಹಸೆಯ ನಡುವೆ ಮಹಿಷಾಸುರಮರ್ದಿನಿಯ ಛಾಯಾಬಿಂಬ.

ಆ ಬಿಂಬದ ಕಡೆಗೆ ದೃಷ್ಟಿ ಹರಿದೊಡನೆಯೇ ಮಹಾಮಾತೃಶ್ರೀಯವರು

ಎದ್ದು ಕುಳಿತರು. ಯದುವಂಶದ ಕುಲದೇವತೆಯಾದ ಆ ಆದಿಶಕ್ತಿಯನ್ನು ಕ್ಷಣ ಕಾಲ ಮನಸ್ಸಿನಲ್ಲಿ ಸ್ಮರಿಸಿದರು. ಕ್ಷುಬ್ಧವಾಗಿದ್ದ ಮನಸ್ಸು ಶಾಂತವಾಯಿತು. ಹಗೇವಿನಲ್ಲಿ ಬಿದ್ದು ಉಸಿರು ಕಟ್ಟಿದ್ದವನು ನೆಲಮಟ್ಟದ ಮೇಲೆ ತಲೆಯಿಟ್ಟ ಅನುಭವವಾಯಿತು ಅವರಿಗೆ. ಅವರ ಮೈ ಮನಸ್ಸುಗಳಲ್ಲಿ ಹೊಸ ಶಕ್ತಿಯ ಸಂಚಾಲನವಾಯಿತು.

ಸ್ತಬ್ಧವಾಗಿದ್ದ ಮನಸ್ಸು ಮತ್ತೆ ಜಾಗ್ರತವಾಯಿತು. ಹೊಸ ಜಾಡಿನಲ್ಲಿ ಹರಿಯಿತು....ಹೌದಲ್ಲ! ಮಹಿಷಾಸುರ ಪ್ರಬಲನಾಗಿದ್ದಾಗ ಅವನನ್ನು ಇದಿರಿಸುವ ಧೈರ್ಯ ಯಾರಿಗಿತ್ತು ? ಅವನ ಕಾಟದಿಂದ ಪಾ ರಾ ಗ ಬ ಹು ದೆಂ ಬ ನಂಬಿಕೆ ಯಾರಿಗಿತ್ತು ?—ದೇವಿಯ ಅವತಾರವಾಯಿತು. ಪರ್ವತದಂತೆ ತಳವೂರಿ ನಿಂತಿದ್ದುದು ಮಣ್ಣುಹುಡಿಯಂತೆ ಹಾರಿಹೋಯಿತು !....

ಅಪ್ರಯತ್ನವಾಗಿ ಅವರ ಮುಖದಲ್ಲಿ ಕಿರುನಗೆ ಮೂಡಿತು. ಯುವರಾಜ ಕುಮಾರರು ಆವಿರ್ಭವಿಸಿದ್ದು ಆ ಮಹಾತಾಯಿಯ ಪುಣ್ಯನಾಮ ಪುನಶ್ಚರಣೆ ಯಿಂದಲೇ ಅಲ್ಲವೆ !–ಆ ಸಾಧನಾ ವಿಧಾನವನ್ನು ಸೂಚಿಸಿದವರಾದರೂ ಯಾರು ? ಕೋಟಿ ಪಂಚಾಕ್ಷರಿ ಜಪದಿಂದ ಪ್ರಸನ್ನನಾದ ಪರಶಿವನೇ ಅಲ್ಲವೆ ! ಶಿವಶಿವೆಯರ ಪ್ರಸಾದ ಬಲದಿಂದ ಹುಟ್ಟಿದ ಕುಮಾರನು ಅಧರ್ಮಿಗಳನ್ನು ನಾಶಮಾಡಿ ನಮ್ಮ ವಂಶವನ್ನು ಉದ್ಧಾರಮಾಡಲಾರನೆ ? – ಹಿಂದೆ ಕುಮಾರಸ್ವಾಮಿ ದೇವಕುಲವನ್ನು ಉದ್ಧರಿಸಿದಂತೆ !

ದಾಸರೂ ಅಂದು ಇಂಥದೇ ಮಾತನಾಡಿದರು : " ಯುವರಾಜ ಕುಮಾರರು ಸಾಮಾನ್ಯರಲ್ಲ ತಾಯಿ. ಪರಮಭಾಗವತ ಚಂದ್ರಹಾಸ ಮಹಾರಾಜರಂತೆ ಅಜರಾಮರ ಕೀರ್ತಿ ಸಂಪಾದಿಸುತ್ತಾರೆ. – ಅವರ ಮೇಲೆ ದೇವಿಯ ಕೃಪೆ ಪೂರ್ಣ ವಾಗಿದೆ. ನೀವು ಚಿಂತಿಸಬೇಡಿ." ಲಲಿತಾ ಸಹಸ್ರ ನಾಮಾರ್ಚನೆ ಮಾಡಿ ಪ್ರಸಾದ ಕೊಡುತ್ತಾ ಈ ಮಾತು ಹೇಳಿದಾಗ ದಾಸರ ಧ್ವನಿಯಲ್ಲಿ ಪ್ರವಾದಿಯ ಧೋರಣೆಯಿತ್ತು.–ಅವರ ಮುಖ ಯಜ್ಞೇಶ್ವರನಂತೆ ಹೊಳೆಯುತ್ತಿತ್ತು; ನಮಗೇನು ಗೊತ್ತು ಅವರಿಗಾದ ದರ್ಶನ. ಅಂತೂ ಆ ಪುಣ್ಯಾತ್ಮನ ಮಾತು ನಿಜವಾದರೆ !

ಮಹಾಮಾತೃಶ್ರೀಯವರು ದೊಡ್ಡದೊಂದು ನಿಟ್ಟುಸಿರುಬಿಟ್ಟು ಮತ್ತೆ ಹಾಸುಗೆಯ ಮೇಲೆ ಉರುಳಿಕೊಂಡು, ಹೊದಿಕೆಯನ್ನೆಳೆದುಕೊಂಡರು.

§

ಚನ್ನವ್ವ ಅರಮನೆಯ ಆನೆಬಾಗಿಲಿಗೆ ಬಂದಾಗ ರಾತ್ರಿ ಮೂರನೆಯ ಜಾವದ ಗಂಟೆ ಹೊಡೆಯಿತು. ಅಲ್ಲಿ ಕಾವಲಿದ್ದ ದೊಡ್ಡಯ್ಯ, ಚಿಕ್ಕಣ್ಣ ಅವಳನ್ನು ತಡೆದರು. ಇನ್ನು ಅರ್ಧ ಜಾವವಾದರೂ ಕಳೆದಲ್ಲದೆ ಅವಳನ್ನು ಅರಮನೆಯ ಒಳಕ್ಕೆ ಬಿಡುವುದು ಸಾಧ್ಯವಿಲ್ಲವೆಂದರು.

ಅವರು ನಿರೋಧಿಸಿದರೆಂದು ಚನ್ನವ್ವ ಸುಮ್ಮನಾಗಲಿಲ್ಲ. ದೊಡ್ಡಯ್ಯನಿಗೆ ಹೇಳಿದಳು :

"ನಿನಗೆ ಗೊತ್ತಿಲ್ಲವೆ ದೊಡ್ಡಯ್ಯ ? – 'ಮೂಡಲು ಕೆಂಪಾಗುವ ಹೊತ್ತಿಗೆ ದೊಡ್ಡ ಪೂಜೆ ಆರಂಭಿಸಬೇಕು. ಬೆಳ್ಳಿ ಮೂಡುವ ಹೊತ್ತಿಗೆ ವೀಣ ಮುಗಿದಿರ ಬೇಕು' ಅಂತ ದೊಡ್ಡ ರಾಣಿಯವರ ಆಗ್ನೆ ಆಗಿರೋದು. ಬೆಳ್ಳಿ ಮೂಡೋದಕ್ಕೆ ಮುಂಚೆ ಪರಾಕಿನೋರನ್ನ ಎಬ್ಬಿಸಿ ಪರಾಕು ಹೇಳಿಸಬೇಕು. ನಾನು ಇಲ್ಲಿ ಇನ್ನು ಅರ್ಧ ಜಾವ ಕೂತರೆ, ನನ್ನ ಕತ್ತಿನ ಮ್ಯಾಗೂ ತಲೆ ಉಳಿಯುವ ಹಾಗಿಲ್ಲ; ನಿನ್ನ ಕತ್ತಿನ ಮ್ಯಾಗೂ ತಲೆ ಉಳಿಯುವ ಹಾಗಿಲ್ಲ – ಮರೆತು ಬಿಟ್ಟೆಯೇನು ?"

ದೊಡ್ಡಯ್ಯ ಮರೆತಿದ್ದನ್ನು ನೆನಪಿಗೆ ತಂದುಕೊಂಡವನಂತೆ ಹೇಳಿದ :

"ಹೌದಲ್ಲ ! – ನೀನು ಗ್ನಪ್ತಿ ಮಾಡಿದ್ದು ಒಳ್ಳೇದಾಯಿತು ಚನ್ನವ್ವ; ಅವಳು ಒಳಗೆ ಹೋಗಲಿ ಬಿಡು ಚಿಕ್ಕಣ್ಣ."

ಚನ್ನವ್ವ ಮಹಾದ್ವಾರವನ್ನು ದಾಟಿ ಹೋಗುತ್ತಾ "ದೊಡ್ಡಯ್ಯ ಬಲೇ ಚೂಟಿ. ಚಿಕ್ಕಯ್ಯ ಸುಮ್ಮನೆ ಬಡಬಡಿಸುತಾನೆ – ಪಾಪ, ಬುದ್ಧಿ ಅಷ್ಟಕ್ಕಷ್ಟೆ" ಎಂದು ತನ್ನಲ್ಲಿ ತಾನೇ ಗೊಣಗಿಕೊಂಡು ಅಂತಃಪುರದ ಕಡೆಗೆ ನಡೆದಳು. ಅವಳು ಮಹಾಮಾತೃಶ್ರೀಯವರ ಸಜ್ಜೆಯ ಬಾಗಿಲು ಸೇರಿದೊಡನೆಯೇ ಚಾಮುಂಡಿ ಮಲಗಿದ್ದೆಡೆಯಿಂದಲೇ "ಯಾರು ?" ಎಂದು ಪ್ರಶ್ನಿಸಿದಳು. ಹಾಸುಗೆಯ ಕೆಳಗೆ ಇಟ್ಟಿದ್ದ ಕತ್ತಿಯ ಕಡೆಗೆ ಅವಳ ಕೈ ತಾನಾಗಿ ಸರಿಯಿತು.

"ನಾನು, ಚಾಮುಂಡಿ."

"ಚನ್ನವ್ವನಾ ! ಏಳೋ ಹೊತ್ತಾಯ್ತು ಆಗಲೆ ? – ಈಗತಾನೆ ಮೂರನೆ ಜಾಮದ ಗಂಟೆ ಬಡಿದರಲ್ಲ !"

"ಹೌದವ್ವಾ ಇನ್ನೂ ಏಳೋ ಹೊತ್ತಾಗಿಲ್ಲ." – ಎನ್ನುತ್ತ ಚನ್ನವ್ವ ಚಾಮುಂಡಿಯ ಹಾಸುಗೆಯ ಹತ್ತಿರ ಬಂದು ಕುಳಿತಳು.

"ಮತ್ಯಾಕೆ ಬಂದೆ ಇಷ್ಟು ಬಿರುವರೀಲಿ ?"

ಚನ್ನವ್ವ ಕೀಳ್ದನಿಯಲ್ಲಿ ಗೊಣಗಿದಳು : "ಸುಮ್ಮಸುಮ್ಮನೆ ಬರ್ತಾರ ಹೇಳು ?"

ಏನೋ ವಿಶೇಷವಿರಬೇಕೆಂದು ಗ್ರಹಿಸಿ ಚಾಮುಂಡಿ, ಚನ್ನವ್ವನ ಹತ್ತಿರ ಸರಿದು ಕುಳಿತಳು. ಚನ್ನವ್ವ ಅವಳ ಕಿವಿಯಲ್ಲಿ ಸ್ವಲ್ಪ ಹೊತ್ತು ಪಿಸುಗುಟ್ಟಿ ಆಮೇಲೆ ಹೇಳಿದಳು :

"ಇದೆಲ್ಲಾ ದೊಡ್ಡ ರಾಣಿಯವರಿಗೆ ತಿಳಿಸಬೇಡ್ವ ಹೇಳು ? – ಅದಕ್ಕೇ ಈ ಬಿರುವರೀಲಿ ಬಂದೆ, ಈ ಹೊತ್ತಿನಲ್ಲಿ."

ಚಾಮುಂಡಿ "ಸರಿ" ಎಂದು ತಲೆದೂಗಿ, ಎದ್ದು ಸಜ್ಜೆಯ ಬಾಗಿಲ ಬಳಿಗೆ ಹೋಗಿ ಕದಕ್ಕೆ ತಗುಲಿಸಿದ್ದ ಬೆಳ್ಳಿಯ ಬಳೆಯನ್ನು ಕದದ ಮೇಲೆ ನಾಲ್ಕು ಬಾರಿ ಮೃದುವಾಗಿ ಕುಟ್ಟಿದಳು.

ಅರೆಕ್ಷಣ ಸುಮ್ಮನಿದ್ದು ಮತ್ತೆ ಎರಡು ಬಾರಿ ಕುಟ್ಟಿ, ಕದದ ನಡುವಣ ಗಂಧವಟಿಕೆಯ ಬಲಕೊನೆಯ ಬೆಳ್ಳಿಯ ಮೊಗ್ಗನ್ನು ಬಲವಾಗಿ ಹಿಡಿದು ತಿರುಗಿಸಿದಳು. ತಿರುಪು ಕಳಚಿ ಮೊಗ್ಗು ಕೈಗೆ ಬಂತು. ಕಿಂಡಿಗೆ ಕಿವಿಯಿಟ್ಟು ಕೇಳಿದಳು. ರಾಣಿಯವರು ಎಚ್ಚೆತ್ತಿದ್ದಾರೆಂಬುದು ದೃಢವಾದ ಮೇಲೆ ಕಿಂಡಿಗೆ ಬಾಯಿಟ್ಟು "ಶ್ರೀರಂಗ ಶರಣು, ಶ್ರೀರಂಗ ಶರಣು" ಎಂದು ಹೇಳಿ ಮತ್ತೆ ಕಿವಿಯಿಟ್ಟು ಕೇಳಿದಳು. ಒಂದೆರಡು ಕ್ಷಣಗಳ ಅನಂತರ ತನ್ನ ಸೊಂಟದಲ್ಲಿದ್ದ ಬೀಗದ ಕೈಯಿಂದ ಸಜ್ಜೆಯ ಬಾಗಿಲ ಬೀಗವನ್ನು ತೆಗೆದು, ಚನ್ನವ್ವನಿಗೆ "ನೀನಿಲ್ಲೇಯಿರು. ನಾನು ಒಳಕ್ಕೆ ಹೋಗಿ ರಾಣಿಯವರ ಸಮಯ ತಿಳಿದು ಬರುತ್ತೇನೆ" ಎಂದು ರಾಣಿಯವರ ಆಜ್ಞೆಗಾಗಿ ಕಾಯುತ್ತಾ ನಿಂತಳು.

ಒಳಗಿನಿಂದ ಬಾಗಿಲ ಒತ್ತುಪಟ್ಟಿಗಳನ್ನು ತೆಗೆದ ಸದ್ದಾಯಿತು. ಅನಂತರ "ಬಾ ಚಾಮುಂಡಿ" ಎಂಬ ಮಾತು ಕೇಳಿಸಿತು.

ಚಾಮುಂಡಿ, ಬಾಗಿಲನ್ನು ಸ್ವಲ್ಪಮಾತ್ರ ಸರಿಸಿ ಸಜ್ಜೆಯೊಳಕ್ಕೆ ತೂರಿಕೊಂಡಳು. ಕದವನ್ನು ಮುಚ್ಚಿ ಅದನ್ನು ಒಳಗಿನಿಂದ ಭದ್ರಪಡಿಸಿಕೊಂಡಳು.

ಚನ್ನವ್ವ ಬಾಗಿಲು ಕಾಯುತ್ತ ನಿಂತಳು. ಅರೆಗಳಿಗೆ ಕಳೆಯಿತು. ಚಾಮುಂಡಿ ಕದ ತೆರೆದು ಇಣುಕಿ, ಒಳಗೆ ಬರುವಂತೆ ಚನ್ನವ್ವನಿಗೆ ಸಂಜ್ಞೆ ಮಾಡಿದಳು. ಅವಳನ್ನು ಒಳಕ್ಕೆ ಬರಗೊಟ್ಟು ಮತ್ತೆ ಕದವನ್ನು ಮುಚ್ಚಿ ಭದ್ರ ಪಡಿಸಿದಳು.

ಚಾಮುಂಡಿ, ಚನ್ನವ್ವ ದೊಡ್ಡ ರಾಣಿಯವರ ಸಮ್ಮುಖಕ್ಕೆ ಹೋಗಿ ನಿಂತು

ನಮಸ್ಕಾರ ಮಾಡಿದರು. ಮಹಾಮಾತೃಶ್ರೀಯವರು ಚಾಮುಂಡಿಯ ಮುಖ ನೋಡಿ, "ಇವಳು ಅರಿಕೆ ಮಾಡಿಕೊಂಡಿದ್ದೆಲ್ಲಾ ನಿಜವೋ" ಎಂದು ಚನ್ನವ್ವನನ್ನು ಪ್ರಶ್ನಿಸಿದರು.

"ಇವಳು ನನಗೆ ಏನು ಹೇಳಿದಳೋ ಅದಷ್ಟನ್ನೇ ನಾನು ಪಾದದಲ್ಲಿ ಬಿನ್ನವಿಸಿಕೊಂಡಿದ್ದು. ಒಂದು ಮಾತು ಕೂಡ ಹೆಚ್ಚಾಗಿ ಹೇಳಲಿಲ್ಲ ಸನ್ನಿಧಾನ ದಲ್ಲಿ." – ಎಂದಳು ಚಾಮುಂಡಿ.

ಮಹಾಮಾತೃಶ್ರೀಯವರು ಚನ್ನವ್ವನ ಕಡೆ ತಿರುಗಿ ಗಂಭೀರ ಧ್ವನಿಯಲ್ಲಿ ಕೇಳಿದರು :

"ನಿನಗೆ ಈ ಸುದ್ದಿ ಹೇಳಿದ್ದು ಯಾರು ?"

"ಅವಳೇ – ಗಂಗೀ."

"ಅದೇ – ಈಗ ಚಾಂದ್‌ಬೀಬಿ."–ಎಂದು ದನಿಗೂಡಿಸಿದಳು ಚಾಮುಂಡಿ.

"ಗಂಗಿ ತುಂಬ ಒಳ್ಳೆ ಹುಡುಗಿ. ಪಾಪ ಕೆಟ್ಟ ಗ್ರಹಚಾರಕ್ಕೆ ಸಿಕ್ಕಿ ನರಳು ತ್ತಿದಾಳೆ. ಅವಳನ್ನು ರಕ್ಷಿಸಿಕೊಳ್ಳುವುದು ನಮ್ಮಿಂದಾಗಲಿಲ್ಲ." ಮಹಾಮಾತೃಶ್ರೀ ಯವರ ಧ್ವನಿ ಭಾರವಾಯಿತು. ಅವರು ಒಂದರೆಕ್ಷಣ ಸುಮ್ಮನಿದ್ದು ಅನಂತರ ಆ ದಾಸಿಯರ ಕಡೆಗೆ ತಿರುಗಿ ಹೇಳಿದರು :

"ಚನ್ನಿ, – ಆ ಗಂಗಿ ತನ್ನ ಪ್ರಾಣದ ಹಂಗಿಲ್ಲದೆ ನಮ್ಮ ಸೇವೆ ಮಾಡು ತ್ತಿದ್ದಾಳೆ. ಅವಳು ಆ ಸುಲ್ತಾನನ ಮಹಲ ಕಡೆಯಿಂದ ಕೊಡುವ ಸುದ್ದಿಯೆಲ್ಲಾ ಸರಿಯಾಗಿಯೇ ಇರುತ್ತದೆ – ಅಲ್ಲವೆ ?"

"ಈವರೆಗೆ ಅವಳು ಸನ್ನಿಧಾನಕ್ಕೆ ತಲುಪಿಸಿದ ಸುದ್ದಿ ಯಾವುದೂ ಸುಳ್ಳಾಗಿಲ್ಲವಲ್ಲ !"

"ಅಂದಮೇಲೆ ನಾವು ಈ ಸುದ್ದಿಯನ್ನೂ ನಂಬಲೇಬೇಕು. – ಈ ಹಾಳು ಚಾಳಿ ಅವರಿಗೇನು ಹೊಸದಲ್ಲ. ಹೈದರ್ ನಾಯಕ ತನ್ನ ಕಾಲದಲ್ಲೂ ಹೀಗೇ ಅರಮನೆ ದೋಚಿದ. ಇನ್ನು ಅವನ ಮಗ ಇವನನ್ನು ಕೇಳಬೇಕಾಗಿಯೇ ಇಲ್ಲ. ಈಗಂತೂ ಇವನ ಧನದಾಹ ಮಿತಿಮೀರಿದೆ."

ಮಹಾಮಾತೃಶ್ರೀಯವರು ಮಾತು ನಿಲ್ಲಿಸಿ ಕ್ಷಣಕಾಲ ಕಣ್ಣುಮುಚ್ಚಿ ಕೊಂಡು ಆಲೋಚನಾಮಗ್ನರಾದರು. ಅನಂತರ ಚಾಮುಂಡಿಯ ಕಡೆ ನೋಡಿ, ತಮ್ಮ ಹತ್ತಿರಕ್ಕೆ ಬರುವಂತೆ ಅವಳಿಗೆ ಸಂಜ್ಞೆ ಮಾಡಿದರು. ಸ್ವಲ್ಪ ಹೊತ್ತು ಅವಳೊಡನೆ ಪಿಸುಮಾತನ್ನಾಡುತ್ತಿದ್ದು ಆಮೇಲೆ ಹೇಳಿದರು.

" ಚೂರು ಪಾರು ಆಭರಣಗಳು, ಭಾರಿ ಭಾರಿ ನಿರಾಜಿ ಬಟ್ಟೆಬರೆಗಳು ಇವನ್ನೆಲ್ಲಾ ಅಲ್ಲೇ ಬಿಟ್ಟುಬಿಡು. ಅವರು ಯಾವ ಪೆಠಾರಿ ತೆಗೆಸಿ ನೋಡಲಿ ಅದು ಕೆದರಿ ಗೂರಾಡಿರಬಾರದು. ನಮಗೆ ಬೇಕಾಯುದನ್ನು ತೆಗೆದುಕೊಂಡು ಉಳಿದಿದ್ದನ್ನೆಲ್ಲಾ ಪೆಠಾರಿಯಲ್ಲಿ ಓರಣವಾಗಿಟ್ಟುಬಿಡಬೇಕು. ಹಾಗಿಲ್ಲದೆ ಗೂರಾಡಿದ್ದರೆ ಅವರಿಗೆ ಅನುಮಾನವುಂಟಾಗುತ್ತದೆ. ಹಾಗೆ ಅನುಮಾನ ಬಂದಿತೋ ಅವರು ಎಲ್ಲರನ್ನೂ ಹಿಂಸೆಪಡಿಸುತ್ತಾರೆ. ಹಾಗಾಗಕೂಡದು. ಎಲ್ಲ ಉಳಿಸಿಕೊಳ್ಳುವ ದುರಾಸೆ ಬೇಡ. ಅಮೂಲ್ಯವಾದ ಆರು ಭಾಗ ಉಳಿಸಿಕೊಳ್ಳೋಣ. ಚಿಲ್ಲರೆ ನಾಲ್ಕು ಭಾಗ ಅವರ ಕೈ ಸೇರಿದರೆ ಸೇರಲಿ.–ನಾವು ಹೇಳಿದ ಎರಡು ಚಿಕ್ಕ ಪೆಟ್ಟಿಗೆಗಳನ್ನು ಬಿಟ್ಟು ಉಳಿದ ಹಣದ ಪೆಟ್ಟಿಗೆಗಳನ್ನೆಲ್ಲಾ ತಪ್ಪದೆ ಸಾಗಿಸಿಬಿಡು. ಇದು ಮಾತ್ರ ತಪ್ಪಕೂಡದು."

" ಸನ್ನಿಧಾನದ ಅಪ್ಪಣೆ ಆದ ಹಾಗೆ ಮಾಡತೀವಿ."

" ಸರಿ – ನಿನ್ನ ಜೊತೆಗೆ ?"

" —ಭೈರಿ, ಮಂಗಳಿ ಆದರೆ ಸಾಕು ಅಂತ ಕಾಣುತ್ತೆ."

" ಈಗ ಅವರಿಗೆ ಹೇಳಿ ಕಳಿಸಬೇಕೇನು ?"

" ಇಲ್ಲ. ರಾತ್ರಿ ಪಾಳಿ. ಇಲ್ಲೇ ಇದಾರೆ."

" ದೇವಿಯ ಅನುಗ್ರಹ. ಬೆಳಕು ಹರಿಯುವುದಕ್ಕೆ ಮೊದಲೇ ಈ ಕೆಲಸ ಮುಗಿಯಬೇಕು ; ಯಾರಿಗೂ ಯಾವ ಅನುಮಾನಕ್ಕೂ ಆಸ್ಪದವಾಗದ ಹಾಗೆ ಕೆಲಸ ನಡೆಯಬೇಕು."

" ಅಪ್ಪಣೆ."

" ಚನ್ನಿ – ನೀನು ಹೋಗಿ ಆ ಭೈರಿ, ಮಂಗಳಿಯರನ್ನು ಸದ್ದಿಲ್ಲದಂತೆ ಎಬ್ಬಿಸಿ, ಸಣ್ಣ ಗಿಡ್ಡಂಗಿಯ ಒಳಬಾಗಿಲ ಹತ್ತಿರ ಕಾದಿರುವಂತೆ ಹೇಳು. ಇನ್ನು ಸ್ವಲ್ಪ ಹೊತ್ತಿನಲ್ಲಿ ಚಾಮುಂಡಿ ಅಲ್ಲಿಗೆ ಬರುತ್ತಾಳೆ. ಅವರಿಗೆ ಸುದ್ದಿ ಕೊಟ್ಟ ಮೇಲೆ ನಮ್ಮ ತೊಟ್ಟಿಗೆ ಬಂದು ಸ್ನಾನಕ್ಕೆ ಸಿದ್ಧಮಾಡು. ಕೆಂಪು ಮೂಡುವ ಹೊತ್ತಿಗೆ ನಾವು ಪೂಜೆಗೆ ಕೂರಬೇಕು."

ಚನ್ನಿ ಮಹಾಮಾತೃಶ್ರೀಯವರಿಗೆ ನಮಸ್ಕರಿಸಿ ಬಾಗಿಲ ಕಡೆಗೆ ನಡೆದಳು. ಚಾಮುಂಡಿ ಮುಂದಾಗಿ ಹೋಗಿ, ಬಾಗಿಲು ತೆಗೆದು ಅವಳನ್ನು ಹೊರಕ್ಕೆ ಬಿಟ್ಟು ಮತ್ತೆ ಅದನ್ನು ಭದ್ರಪಡಿಸಿ ಮಹಾರಾಣಿಯವರ ಮುಂದೆ ಬಂದು ನಿಂತಳು.

"ನಾವು ಹೇಳಿದ್ದೆಲ್ಲಾ ಗೊತ್ತಾಯಿತೆ ?"

"ಗೊತ್ತಾಯಿತು. ನೆನಪಿನಲ್ಲಿಟ್ಟಿದ್ದೇನೆ."

"ದುರಾಸೆ ಬೇಡ. ಅಮೂಲ್ಯವಾದದ್ದನ್ನು ಉಳಿಸಿಕೊಂಡರೆ ಸಾಕು. ಅನುಮಾನಕ್ಕೆ ಆಸ್ಪದವಾಗಬಾರದು ; – ತಿಳಿಯಿತೆ ?"

"ತಿಳಿಯಿತು ತಾಯಿ."

"ಹೊರಕ್ಕೆ ಸಾಗಿಸಬೇಕಾದ್ದನ್ನೆಲ್ಲ ಬೇರೆಯಾಗಿ ತೆಗೆದಿಟ್ಟುಕೊಂಡು, ಅವನ್ನು ಬಾಯಿ ಮುಚ್ಚಳ, ಗುಟ್ಟುಬೀಗ ಇರುವ ತಾಮ್ರದ ಹಂಡೆಗಳಲ್ಲಿ ತುಂಬ ಬೇಕು. ಬಾಯಿ ಭದ್ರಮಾಡಿ ಮೇಲೊಂದು ಬೀಗ ಹಾಕಬೇಕು. ಆಮೇಲೆ ಅವನ್ನು ಆಯಾ ಜಾಗಗಳಿಗೆ ಸಾಗಿಸಬೇಕು.–ಇನ್ನು ಹೊತ್ತಾಯಿತು. ಹೊರಡು. ಮಬ್ಬು ಕಳೆಯುವುದಕ್ಕೆ ಮೊದಲೇ ಈ ಕೆಲಸ ಮುಗಿದಿರಬೇಕು."

"ತಪ್ಪದೆ ಮುಗಿಸುತ್ತೇನೆ, ತಾಯಿ."

"ಈ ಬೀಗದ ಕೈಗೊಂಚಲು ತೆಗೆದುಕೋ. ಇದು ಭಂಡಾರದ ಮುದ್ರೆ. ಯಾವ ಪೆಟ್ಟಿಗೆಯ ಮುದ್ರೆ ಒಡೆದರೂ ಮತ್ತೆ ಅದಕ್ಕೆ ಹೊಸ ಮುದ್ರೆ ಒತ್ತಬೇಕು. ಮರೆಯಕೂಡದು."

"ಮರೆತೇನೆ ?"

"ಯಾವ ಯಾವ ಮಾರ್ಗ ಅನುಸರಿಸಿ ಹೋಗಬೇಕು. ನೆನಪಿದೆ ತಾನೆ ?"

"ನೆನಪಿದೆ."

"ಕೆಲಸ ಮುಗಿದ ಮೇಲೆ ನನ್ನನ್ನು ನೋಡಬೇಕು....ಜೊತೆಯಲ್ಲಿ ಅವರಿಬ್ಬರನ್ನೂ ಕರೆದುಕೊಂಡು ಬಾ."

"ಅಪ್ಪಣೆ."

"ಆ ಆದಿಶಕ್ತಿ ನಿಮ್ಮನ್ನು ರಕ್ಷಿಸಲಿ. ಹೋಗಿಬಾ."

ಚಾಮುಂಡಿ ಮಹಾಮಾತೃಶ್ರೀಯವರಿಗೆ ನಮಸ್ಕರಿಸಿ, ತನ್ನ ಹಿಂಬಾಗಿಲು ಮುಚ್ಚಿ ಅದನ್ನು ಭದ್ರಪಡಿಸಿಕೊಂಡು ಹೊರಟುಹೋದಳು.

ಮಹಾಮಾತೃಶ್ರೀಯವರು ಮತ್ತೆ ಆಲೋಚನಾಮಗ್ನರಾದರು.

ಅರಮನೆಯ ಐಶ್ವರ್ಯ ಪೂರ್ಣವಾಗಿ ಸೂರೆಹೋಗದಂತೆ ವ್ಯವಸ್ಥೆ ಮಾಡಿದ್ದಾಯಿತು. ಆದರೆ ಅದಕ್ಕಿಂತ ಹಿರಿದಾದ ಹೊಣೆಗಾರಿಕೆ ಇನ್ನೂ ಉಳಿದಿದೆಯಲ್ಲ. ವಂಶದ ಸಂತಾನ ಸಂಪತ್ತನ್ನುಳಿಸಿಕೊಳ್ಳುವುದು....

ಅರಮನೆಯನ್ನು ದೋಚಬೇಕೆಂದು ಸುಲ್ತಾನ ನಿರ್ಧರಿಸಿದ್ದರೆ ಅದರಲ್ಲಿ ಆಶ್ಚರ್ಯವೇನಿಲ್ಲ; ಅವನ ಉದ್ದೇಶವೂ ಸ್ಪಷ್ಟ – ಅವನಿಗೀಗ ದುಡ್ಡು ಬೇಕಾಗಿದೆ. ಎಷ್ಟು ದುಡ್ಡಾದರೂ ಸಾಲದು.

ಇದಲ್ಲದೆ ಇನ್ನೇನಾದರೂ ಉದ್ದೇಶ ?....

ಇತ್ತ ಮೀರ್‌ಸಾದಕ್ ಮಾತನಾಡಿಕೊಂಡು ಹೋದೊಡನೆಯೇ ಅತ್ತ ಸುಲ್ತಾನ ಈ ನಿರ್ಧಾರ ಮಾಡಿದ್ದಾನೆ....

ಯುವರಾಜರ ಪಟ್ಟಾಭಿಷೇಕಕ್ಕೆ ಒಡನೆಯೇ ವ್ಯವಸ್ಥೆ ಮಾಡಬೇಕೆಂದು ಹೇಳಿ ಕಳುಹಿಸಿದ್ದಕ್ಕೆ ಅವನ ಪ್ರತಿಕ್ರಿಯೆ – ಅರಮನೆಯ ಲೂಟಿ !....

ಸರಿ, ಇನ್ನೊಂದು ಅಂಶವೂ ಸ್ಪಷ್ಟವಾದಂತೆ ಆಯಿತಲ್ಲ – ಯುವರಾಜ ಕುಮಾರರನ್ನು ಪಟ್ಟಕ್ಕೆ ತರುವುದು ಅವನಿಗೆ ಸರ್ವಥಾ ಇಷ್ಟವಿಲ್ಲ....

ಅವನ ದುರುದ್ದೇಶ ಇಷ್ಟೇ ಆದರೆ ಚಿಂತೆಯಿಲ್ಲ. ಆದರೆ ಅದಷ್ಟಕ್ಕೇ ನಿಂತೀತೆ ?

ಯುವರಾಜ ಕುಮಾರರ ಮುದ್ದುಮುಖ ಮಹಾಮಾತೃಶ್ರೀಯವರ ಬಗೆ ಗಣ್ಣಿನ ಮುಂದೆ ಎದ್ದು ನಿಂತಿತು. ಸುಲ್ತಾನನ ಕ್ರೂರದೃಷ್ಟಿ ಅದರ ಮೇಲೆ ಬೀಳುತ್ತಿರುವಂತೆ ಭಾಸವಾಯಿತು....

ಮಹಾಮಾತೃಶ್ರೀಯವರ ಮೈ 'ಝುಂ' ಎಂದಿತು. ಮುಖ ಬೆವರಿತು. ತಲೆ ತಿರುಗಿದಂತಾಯಿತು. ತಮ್ಮೆರಡು ಕೈಗಳಿಂದಲೂ ಥಟ್ಟನೆ ಮುಖವನ್ನು ಮುಚ್ಚಿಕೊಂಡರು. ಸ್ವಲ್ಪ ಹೊತ್ತು ಮನಸ್ಸು ಸ್ತಬ್ಧವಾಯಿತು....

ರಾಜವಂಶದಲ್ಲಿ ಈಗ ಉಳಿದಿರುವುದು ಒಂದೇ ಕುಡಿ. ಅದನ್ನುಳಿಸಿಕೊಳ್ಳದೆ ಮತ್ತಿನ್ನಾವುದನ್ನುಳಿಸಿಕೊಂಡೇನು ಪ್ರಯೋಜನ ?....

ಕುಮಾರರನ್ನು ಸುರಕ್ಷಿತವಾದ ಯಾವುದಾದರೂ ಸ್ಥಳಕ್ಕೆ – ? --

ತಪ್ಪಾದೀತೇನೋ ?–ಒಂದು ವೇಳೆ ಅಂಥ ದುರಭಿಪ್ರಾಯ ಸುಲ್ತಾನನಿಗಿಲ್ಲದಿದ್ದರೆ ನಾವೇ ಅವನಿಗೆ ಕೆಟ್ಟ ಸೂಚನೆ ಕೊಟ್ಟಂತಾಗುವುದಲ್ಲ ?

ಆ ಆಲೋಚನೆ ಕೈಬಿಟ್ಟದ್ದಾಯಿತು. ಮುಂದೆ ?

ಮುಂದಿನ ಮಾರ್ಗ ಅವರಿಗೆ ಹೊಳೆಯಲಿಲ್ಲ. ಚುರುಕಾದ ತಮ್ಮ ಬುದ್ಧಿ ಮರಗಟ್ಟಿ ಹೋಯಿತೇನೋ ಎನಿಸಿತು ಮಹಾಮಾತೃಶ್ರೀಯವರಿಗೆ. ಅವರು ಒಂದರೆಕ್ಷಣ ಸುಮ್ಮನೆ ಕುಳಿತುಬಿಟ್ಟರು....

ಇದ್ದಕ್ಕಿದ್ದಂತೆಯೇ ಸ್ನಾನಕ್ಕೆ ಹೊತ್ತಾಯಿತು. ಚನ್ನಿ ಸ್ನಾನದ ಮನೆಯಲ್ಲಿ ಕಾದುಕೊಂಡಿರುತ್ತಾಳೆ – ಎಂಬ ನೆನಪಾಯಿತು. ಎದ್ದು ಸ್ನಾನಗೃಹದ ಕಡೆಗೆ ಹೊರಟರು.

§

ಮಹಾಮಾತೃಶ್ರೀಯವರ ಮಜ್ಜನ ಮುಗಿದಿತ್ತು. ಅವರು ಪಟ್ಟೆ ಮಡಿಯುಡುತ್ತಾ ಚನ್ನಿಯನ್ನು ಕೇಳಿದರು :

" ಕುಮಾರರ ತೊಟ್ಟಿಯಲ್ಲಿ ಖಾಸಾ ದಾದಿಯ ಸರದಿ ಯಾರದ್ದು, ಈಗ ?"

" ರುದ್ರೀದು ಇದ್ದೀತು—"

" ಕುಮಾರರಿಗೆ ಎಣ್ಣೆಮಜ್ಜನ ಮಾಡಿಸಿ ನಮ್ಮ ಪೂಜೆಯ ತೊಟ್ಟಿಗೆ ಕರೆದು ಕೊಂಡು ಬರಬೇಕು. ರುದ್ರಿಯೂ ಮಿಂದು ಬರಲಿ."

" ಅಪ್ಪಣೆ."

ದಾಸಿಯರು ಕುಮಾರರಿಗೆ ಎಣ್ಣೆಮಜ್ಜನ ಮಾಡಿಸಿ, ಅವರನ್ನು ಪೂಜೆಯ ತೊಟ್ಟಿಗೆ ಕರೆತಂದಾಗ ಮಹಾಮಾತೃಶ್ರೀಯವರ ದೇವತಾರ್ಚನೆ ನಡೆದಿತ್ತು. ಅವರ ಸೂಚನೆಯನ್ನನುಸರಿಸಿ, ಅವರ ಪೀಠದ ಪಕ್ಕದಲ್ಲಿ ತಂದಿರಿಸಿದ್ದ ತೊಟ್ಟಿಲಿನಲ್ಲಿ ಕುಮಾರರನ್ನು ಮಲಗಿಸಿ, ಶಾಲು ಹೊದಿಸಿ ದೂರದಲ್ಲಿ ನಿಂತಳು – ರುದ್ರಿ. ಮಜ್ಜನದ ಪ್ರಭಾವದಿಂದ ಕುಮಾರರಿಗೆ ಬಲವಾದ ನಿದ್ರೆ ಹತ್ತಿತು.

ಮಹಾಮಾತೃಶ್ರೀಯವರು ದೇವಿಯ ಪೂಜೆ ಮಾಡುತ್ತ ಮಾಡುತ್ತ ಕುಮಾರರ ಭವಿಷ್ಯದ ಕನಸು ಕಾಣುತ್ತಿದ್ದರೆ, ಕುಮಾರರು ಗಾಢನಿದ್ರೆಯಲ್ಲಿ ಸುಖ ಸ್ವಪ್ನ ಕಾಣುತ್ತಿದ್ದರು. ಮಹಾರಾಣಿಯವರು ಉತ್ತರ ಪೂಜೆಯನ್ನು ಮುಗಿಸುವ ಹೊತ್ತಿಗೆ ಸರಿಯಾಗಿ ಕುಮಾರರು ಕನಸಿನಲ್ಲಿಯೇ ಕಿಲಕಿಲನೆ ನಕ್ಕರು. ಅದನ್ನು ಕೇಳಿ ರಾಣಿಯವರು ಥಟ್ಟನೆ ತೊಟ್ಟಿಲ ಕಡೆಗೆ ತಿರುಗಿದರು. ಕುಮಾರರು ಸ್ವಸ್ಥ ನಿದ್ರೆಯಲ್ಲಿ ಮುಳುಗಿದ್ದರು. ಅವರ ಮುದ್ದುಮುಖದಲ್ಲಿ ನಗೆಮಲ್ಲಿಗೆ ಅರಳಿತ್ತು. ಆ ಜೊಂಪೆ ಕುರುಳು, ವಿಶಾಲವಾದ ಹಣೆ, ತಿದ್ದಿದ ಹುಬ್ಬು, ಮಾಟವಾದ ಮೂಗು, ತೊಂಡೆಯ ಹಣ್ಣಿನಂಥ ತುಟಿ, ತುಂಬಿದ ಗಲ್ಲ....

ಕುಮಾರರಿಗೆ ಕೆಟ್ಟದೃಷ್ಟಿಯಾದೀತೆಂದು ತಮ್ಮೆರಡು ಕೈಗಳನ್ನೂ ಮುಷ್ಟಿ ಹಿಡಿದು ಕೆನ್ನೆಗೆ ಒತ್ತಿಕೊಂಡು ನಟಿಕೆ ಮುರಿದರು – ರಾಣಿಯವರು.

ಕುಮಾರರಿಗೆ ಎಚ್ಚರವಾಯಿತು. ಅವರು ದೊಡ್ಡದಾಗಿ ಕಣ್ಣು ಬಿಟ್ಟು ಸುತ್ತ ನೋಡಿದರು. ಮುಖದಲ್ಲಿ ಪ್ರಸನ್ನತೆಯಿತ್ತು; ಮಾಧುರ್ಯವಿತ್ತು. ಮೋಹಕವಾದ ಆ ಮುಖಕಮಲವನ್ನು ಕಂಡು ಮಹಾಮಾತೃಶ್ರೀಯವರಿಗೆ ತುಂಬ ಆನಂದವಾಯಿತು. ದೇವಿಯವರ ಸಹಸ್ರ ನಾಮಾರ್ಚನೆಯ ಕುಂಕುಮವನ್ನವರ ಹಣೆಗೆ ಹಚ್ಚಿದರು. ದಾಸರು ವಿಶೇಷ ಜಪತಪಾದಿಗಳನ್ನು ಸಾಧಿಸಿ ಮಂತ್ರ ಪ್ರತಿಷ್ಠೆ ಮಾಡಿದ್ದ 'ದುರ್ಗಿಕೋಲ'ನ್ನು ತೆಗೆದುಕೊಂಡು ಕುಮಾರರ ಸುತ್ತ ಮೂರು ಬಾರಿ ಸುತ್ತಿ, ಹಣೆಗೆ ಮುಟ್ಟಿಸಿ, ಕಣ್ಣಿಗೊತ್ತಿಕೊಂಡು ದೇವಿಯ ಪೀಠದ ಹತ್ತಿರ ಇಟ್ಟರು. ಅನಂತರ ಕುಮಾರರನ್ನೆತ್ತಿಕೊಂಡು ತಮ್ಮ ತೊಡೆಯ ಮೇಲೆ ಕೂರಿಸಿಕೊಂಡರು. ದಾಸರು ಈಗ್ಯೆ ಎರಡು ವರ್ಷಗಳ ಹಿಂದೆ ರಚಿಸಿಕೊಟ್ಟಿದ್ದು ತಾವು ಅಂದಿನಿಂದ ಪ್ರತಿದಿನವೂ ಪೂಜಿಸಿಕೊಂಡು ಬಂದಿದ್ದ 'ದುರ್ಗಾಯಂತ್ರ'ವಿದ್ದ ಚಿನ್ನದ ತಾಯಿತವನ್ನು ಕುಮಾರರ ಕೊರಳಿಗೆ ಕಟ್ಟಿದರು. ಅಭಿಷೇಕದ ತೀರ್ಥ ಕುಡಿಸಿದರು. ಪ್ರಸಾದದ ಹೂ ಮುಡಿಸಿದರು. ರುದ್ರಿಯನ್ನು ಕರೆದು ಕುಮಾರ ರನ್ನವಳ ಕೈಗೆ ಕೊಟ್ಟರು. "ಎಣ್ಣೆ ಮಜ್ಜನಕ್ಕೆಂದು ತೆಗೆದ ಯಾವ ಆಭರಣಗಳನ್ನೂ ಕುಮಾರರಿಗೆ ಇಡಬೇಡ. ಇವತ್ತು ಅವರಿಗೆ ರಕ್ಷೆ ಕಟ್ಟಿದ್ದೇವೆ" ಎಂದು ಆಜ್ಞೆ ಮಾಡಿದರು.

ರುದ್ರಿ ಮಹಾರಾಣಿಯವರಿಗೆ ನಮಸ್ಕರಿಸಿ ಕುಮಾರರನ್ನೆತ್ತಿಕೊಂಡು ಹೊರಟುಹೋದಳು. ಮಹಾಮಾತೃಶ್ರೀಯವರು ಅವಳು ಹೋದ ಕಡೆಗೇ ನೋಡುತ್ತಿದ್ದರು. ಅವಳು ಬಾಗಿಲು ದಾಟಿ ಕಣ್ಮರೆಯಾದೊಡನೆಯೇ ಅವರ ದೃಷ್ಟಿ ಅವರು ಪೂಜಿಸಿದ್ದ ಮಹಿಷಾಸುರ ಮರ್ದಿನಿಯ ವಿಗ್ರಹದ ಕಡೆಗೆ ತಿರುಗಿತು. ಅದನ್ನೇ ದಿಟ್ಟಿಸಿ ನೋಡುತ್ತ ನಿಂತರು.

ದೊಡ್ಡ ದೊಡ್ಡ ದೀವಿಗೆಗಳ, ತೂಗು ದೀಪಗಳ ಪ್ರಕಾಶ ದೇವಿಯ ವಿಗ್ರಹವನ್ನು ಬೆಳಗುತ್ತಿತ್ತು. ದೇವಿ ಪ್ರಸನ್ನಮುಖಿಯಾಗಿ "ನಾಸಿರುವಾಗ ನಿನಗೇಕೆ ಚಿಂತೆ" ಎಂದಂತಾಯಿತು.

ರಾಣಿಯವರ ಮನಸ್ಸಿಗೆ ತೃಪ್ತಿಯಾಯಿತು. ಕೃತಜ್ಞತೆಯಿಂದ ಕಣ್ಣಿನಲ್ಲಿ ನೀರು ತುಂಬಿತು. ಅವರದನ್ನು ತಮ್ಮ ಮೇಲು ಹೊದಿಕೆಯಿಂದ ಒರೆಸಿಕೊಂಡು ದೇವಿಗೆ ನಮಸ್ಕರಿಸಿ, ಅಲ್ಲಿಂದ ಹೊರಟರು.

§

ರಾತ್ರಿ ಮೊದಲನೆಯ ಜಾಮದ ಗಂಟೆ ಆಗತಾನೆ ಹೊಡೆದಿತ್ತು. ಮಹಾಮಾತೃಶ್ರೀಯವರು ತಮ್ಮ ಆರೋಗಣೆಯನ್ನು ಒಪ್ಪಿಸಿಕೊಂಡು ಕೆಳ ತೊಟ್ಟಿಯ ಪಕ್ಕದ ಸಜ್ಜೆಗೆ ಬಂದು ಕುಳಿತಿದ್ದರು. ದೇವರನಾಮಗಳ ಹಾಡುಗಾರಿಕೆ ನಡೆದಿತ್ತು.

ಚಾಮುಂಡಿ ಆತುರಾತುರವಾಗಿ ನಡೆದು ಬಂದು ಮಹಾಮಾತೃಶ್ರೀಯವರ ಹತ್ತಿರ ನಿಂತು ನಮಸ್ಕರಿಸಿದಳು. ಸನ್ನಿಧಾನದ ದೃಷ್ಟಿ ಅವಳ ಕಡೆ ತಿರುಗಿತು. ಚಾಮುಂಡಿ ಕಿಳ್ದನಿಯಲ್ಲಿ ಬಿನ್ನವಿಸಿಕೊಂಡಳು : "ಸವಾರಿ ಆಕಾಶಮಾಳಿಗೆಗೆ ದಯಮಾಡಿಸಬೇಕು."

ರಾಣಿಯವರು "ಸಂಗೀತ ನಡೆಯುತ್ತಿರಲಿ" ಎಂದು ಆಜ್ಞೆಮಾಡಿ ಎದ್ದರು. ಚಾಮುಂಡಿ ದಾರಿ ತೋರಿದಳು. ರಾಣಿಯವರು ಆಕಾಶಮಾಳಿಗೆಯಲ್ಲಿದ್ದ ತಮ್ಮ ಶಯ್ಯಾಗೃಹಕ್ಕೆ ಬಂದು ಜಾಲಂಧ್ರಗಳ ಮೂಲಕ ಅರಮನೆಯ ಸುತ್ತ ನೋಡಿದರು. ಸುಲ್ತಾನನ ಖಾಸಾ ತಬೇಲಿಯ ಸವಾರರು ಸಣ್ಣ ಸಣ್ಣ ತಂಡಗಳಲ್ಲಿ ಬಂದು ರಂಗನಾಥಸ್ವಾಮಿಯ ದೇವಾಲಯವೂ ಸೇರಿ ಅರಮನೆಯನ್ನು ಸುತ್ತುಗಟ್ಟು ತ್ತಿದ್ದಾರೆಂಬುದು ಗೋಚರಿಸಿತು. ಮಾತೃಶ್ರೀಯವರು ಒಂದು ಕ್ಷಣ ಆಲೋಚಿಸಿ ಚಾಮುಂಡಿಯ ಕಡೆಗೆ ತಿರುಗಿ :

"ನಾವು ಕೆಳಸಜ್ಜೆಯಲ್ಲಿ ಸಂಗೀತ ಕೇಳುತ್ತಿರುತ್ತೇವೆ. ನೀನು ಕುಮಾರರನ್ನು ಅಲ್ಲಿಗೆ ಕರೆದುಕೊಂಡು ಬಾ. ಸುಲ್ತಾನನ ಕಡೆಯವರು ಯಾರಾದರೂ ಬಂದು ಅರಮನೆಯನ್ನು ಪ್ರವೇಶಿಸಲು ಅಪೇಕ್ಷಿಸಿದರೆ ಅವರ ನಾಯಕನನ್ನು ಒಡನೆಯೇ ನಮ್ಮ ಸನ್ನಿಧಾನಕ್ಕೆ ಕರೆತರಬೇಕೆಂದು ಕಾವಲಿನವರಿಗೆ ತಿಳಿಸು. ನೀನು, ಭೈರಿ, ಮಂಗಳಿ ಸಶಸ್ತ್ರರಾಗಿ ನಮ್ಮ ಹಿಂದೆ ನಿಂತಿರಬೇಕು. ನಮ್ಮ ಆಜ್ಞೆಯಿಲ್ಲದೆ ನೀವು ಮೈ ಕೈ ಕೂಡ ಅಲುಗಿಸಕೂಡದು. ಕುಮಾರರ ಜೊತೆಯಲ್ಲಿ ರುದ್ರಿಯೂ ಬರಲಿ" ಎಂದು ಆಜ್ಞೆಮಾಡಿ, ಚಾಮುಂಡಿ ತಮ್ಮೆದುರಿನಲ್ಲಿಯೇ ತಮ್ಮ ಶಯ್ಯಾಗೃಹದ ಬಾಗಿಲು ಭದ್ರಪಡಿಸಿದ್ದನ್ನು ನೋಡಿ ಕೆಳಸಜ್ಜೆಗೆ ಇಳಿದು ಬಂದರು.

ದೇವರನಾಮಗಳ ಹಾಡುಗಾರಿಕೆ ನಡೆದಿತ್ತು. ಮಹಾಮಾತೃಶ್ರೀಯವರು, ಎರಡು ವರ್ಷ ವಯಸ್ಸಿನ ತಮ್ಮ ಮೊಮ್ಮಗ ನಂಜರಾಜರನ್ನು ತೊಡೆಯ ಮೇಲೆ ಕೂಡಿಸಿಕೊಂಡು ಸಂಗೀತ ಕೇಳುತ್ತಿದ್ದರು. ಅವರ ಮುಖಮುದ್ರೆ ತುಂಬಾ ಗಂಭೀರವಾಗಿತ್ತು. ರುದ್ರಿ ಅಲ್ಲೇ ಎರಡು ಮಾರು ದೂರದಲ್ಲಿ ನಿಂತಿದ್ದಳು.

ಚಾಮುಂಡಿ, ಭೈರಿ, ಮಂಗಳಿ ರಾಣಿಯವರ ಭದ್ರಾಸನದ ಹಿಂಬದಿಯಲ್ಲಿ ಅವರ ಮೈಗಾವಲಾಗಿ ನಿಂತಿದ್ದರು.

ಹಾಡುತ್ತಿದ್ದ ದೇವರನಾಮ ಮುಗಿಯಿತು. ತಂಬೂರಿಯ ನಿನಾದ ಮಾತ್ರ ಸಜ್ಜೆಯನ್ನು ತುಂಬಿತ್ತು.

"ಕಾಳಿಂಗ ಮರ್ದನನ ಮೇಲೆ ಒಂದು ಕೀರ್ತನೆ ಆಗಲಿ" – ಎಂದು ಮಹಾಮಾತೃಶ್ರೀಯವರು ಆಜ್ಞೆಮಾಡಿದರು.

ಸಂಗೀತಗಾರ ತಂಬೂರಿಯ ಶ್ರುತಿಗೆ ತನ್ನ ಕಂಠವನ್ನು ಹೊಂದಿಸಿಕೊಂಡು ಹಾಡಲು ಮೊದಲು ಮಾಡಿದ: "ಆಡಿದನೋ ರಂಗ ಅದ್ಭುತದಿಂದಲಿ ಆಡಿದನೋ ಕಾಳಿಂಗನ ಫಣೆಯಲಿ ಆಡಿದನೋ...."

ಸಂಗೀತ ನಿರಾತಂಕವಾಗಿ ಮುಂದುವರಿಯಿತು. ಸ್ವಲ್ಪ ಹೊತ್ತು ಕಳೆದ ಮೇಲೆ ಅರಮನೆಯ ಕಾವಲು ಮುಖ್ಯಸ್ಥ ದೊಡ್ಡಯ್ಯ, ತರುಣ ಮುಸ್ಲಿಂ ಅಧಿಕಾರಿಯೊಬ್ಬನನ್ನು ತನ್ನೊಡನೆ ಕರೆದುಕೊಂಡು ಬಂದು ಕೆಳ ಸಜ್ಜೆಯ ತಲೆ ಬಾಗಿಲಲ್ಲಿ ನಿಂತ. ತೆರೆಯ ಹಿಂದೆ ಕುಳಿತು ಸಂಗೀತ ಕೇಳುತ್ತಿದ್ದ ಮಹಾ ಮಾತೃಶ್ರೀಯವರು ಅವರನ್ನು ಬಾಗಿಲಲ್ಲಿ ಕಂಡೊಡನೆಯೇ ಚಾಮುಂಡಿಯ ಕಡೆಗೆ ತಿರುಗಿ, "ಅದೇನು ವಿಚಾರಿಸು" ಎಂದು ಆಜ್ಞೆಮಾಡಿದರು.

ಚಾಮುಂಡಿ ವಿಚಾರಿಸಿಕೊಂಡು ಬಂದು ಬಿನ್ನವಿಸಿಕೊಂಡಳು:

"ಬಂದಿರುವವನ ಹೆಸರು ಮೀರ್ ನಾದಿರ್ ಅಂತೆ; ಸರ್ವಾಧಿಕಾರಿಗಳ ಆಪ್ತ ಅಧಿಕಾರಿವರ್ಗದವನಂತೆ. ಒಡನೆಯೇ ತಮ್ಮ ದರ್ಶನಮಾಡಬೇಕೆಂದು ಅಪೇಕ್ಷಿಸುತ್ತಿದ್ದಾನೆ."

"ಅವನನ್ನು ಕರೆದುಕೊಂಡು ಬಾ. ದೊಡ್ಡಯ್ಯನೂ ಜೊತೆಯಲ್ಲಿರಲಿ."

ಚಾಮುಂಡಿ ಅವರಿಬ್ಬರನ್ನೂ ಕರೆತಂದು ರಾಣಿಯವರ ಸಮ್ಮುಖದಲ್ಲಿ ನಿಲ್ಲಿಸಿದಳು. ದೊಡ್ಡಯ್ಯ ರಾಣಿಯವರಿಗೆ ಕೈಮುಗಿದು ತಲೆಬಾಗಿ ವಂದಿಸಿದನು. ಮೀರ್ ನಾದಿರ್ ಸೊಂಟ ಬಗ್ಗಿಸಿ ಮೂರು ಬಾರಿ ಸಲಾಂ ಮಾಡಿದ. ದೊಡ್ಡಯ್ಯ ಬಿನ್ನವಿಸಿಕೊಂಡ:

"ಸರ್ವಾಧಿಕಾರಿಗಳು ಅರಮನೆಯ ಭಂಡಾರ ಪರೀಕ್ಷೆಗೆಂದು ಮೀರ್ ನಾದಿರ್ ಸಾಹೇಬರನ್ನು ಕಳುಹಿಸಿದ್ದಾರೆ."

ನಾದಿರ್ ಮಾತು ಮುಂದುವರಿಸಿದ:

"ದೊರೆಗಳ ಮರಣಾನಂತರ ಅರಮನೆಯ ಭಂಡಾರ ಇಲ್ಲಿರುವುದು ಒಳಿತಲ್ಲವೆಂದೂ, ಅದನ್ನು ಹೆಚ್ಚು ಸುರಕ್ಷಿತವಾದ ಸ್ಥಳಕ್ಕೆ ವರ್ಗಾಯಿಸುವುದು ಅವಶ್ಯಕವೆಂದೂ ಸುಲ್ತಾನರು ನಿರ್ಧರಿಸಿದ್ದಾರೆ; ಆ ನಿರ್ಧಾರಕ್ಕೆ ಅನುಸಾರವಾಗಿ ಅರಮನೆಯ ಸಮಸ್ತ ವಸ್ತುಗಳನ್ನೂ ಒಡನೆಯೇ ನನ್ನ ವಶಕ್ಕೆ ತೆಗೆದುಕೊಳ್ಳಬೇಕೆಂದು ಸೂಚಿಸಿದ್ದಾರೆ. ಈ ಸಂದರ್ಭದಲ್ಲಿ ಯಾವ ವಿಧವಾದ ಗಲಭೆಗೂ ಅವಕಾಶವಿಲ್ಲದಿರಲೆಂದು ಅರಮನೆಯ ಸುತ್ತ ಹೆಚ್ಚಿಗೆ ಪಹರೆಯಿರತಕ್ಕದ್ದೆಂದೂ ಅಜ್ಞೆಮಾಡಿದ್ದಾರೆ."

"ಅರಮನೆಯ ಸ್ವತ್ತುಗಳ ವಿಚಾರವಾಗಿ ಸರ್ವಾಧಿಕಾರಿಗಳು ಇಷ್ಟೊಂಬು ಆಸಕ್ತಿವಹಿಸಿದ್ದು ತುಂಬ ಸಂತೋಷ. ಅರಮನೆಯ ರಕ್ಷಣೆಗೆಂದು ಹೆಚ್ಚಿನ ಪಹರೆಯ ವ್ಯವಸ್ಥೆಯಾದ ಮೇಲೆ ಭಂಡಾರ ಇಲ್ಲೇ ಇರಬಹುದಲ್ಲ ? ಸರ್ವಾಧಿಕಾರಿಗಳಿಗೆ ನಮ್ಮ ಈ ಸೂಚನೆ ತಿಳಿಸಿ. ಇದಕ್ಕೆ ಅವರ ವಿರೋಧವೇನೂ ಇರಲಾರದು."

"ಅವರ ಅಭಿಪ್ರಾಯ ನನಗೆ ತಿಳಿಯದು. ನನಗೆ ಅವರ ಅಜ್ಞೆ ಮುಖ್ಯ. ಅದನ್ನು ನೆರವೇರಿಸುವುದು ನನ್ನ ಕರ್ತವ್ಯ."

"ಒಳ್ಳೆಯದು. ನಾವೇ ಅವರಿಗೆ ಹೇಳಿಕಳುಹಿಸುತ್ತೇವೆ. ಅವರ ಅಪೇಕ್ಷೆಯೇನೆಂಬುದನ್ನು ತಿಳಿದು ಮುಂದಿನ ಕಾರ್ಯಾಲೋಚನೆ ಮಾಡೋಣ. – ನೀವು ಹೊರಡಿ."

"ಅದಕ್ಕೆ ಅವಕಾಶವಿಲ್ಲ ರಾಣೀಸಾಹಿಬಾ. ಅರಮನೆಯ ಭಂಡಾರ ಮೊದಲ್ಗೊಂಡು ಇಲ್ಲಿರುವ ಸಮಸ್ತ ಚರವಸ್ತುಗಳನ್ನೂ ಒಡನೆಯೇ ವಶಪಡಿಸಿಕೊಳ್ಳಬೇಕೆಂಬುದು, ಸುಲ್ತಾನರು ನನಗೆ ಮಾಡಿರುವ ಆಜ್ಞೆ. ನಾನು ಅವರ ಆಜ್ಞಾಧಾರಕ."

"ನಿಮ್ಮ ಕರ್ತವ್ಯನಿಷ್ಠೆ ನಮಗೆ ಮೆಚ್ಚುಗೆಯಾಯಿತು. – ಚಾಮುಂಡಿ, ಒಡನೆಯೇ ಸಮ್ಮುಖದ ನಂಜರಾಜಯ್ಯನವರಿಗೆ ಹೇಳಿಕಳುಹಿಸು. ಜೊತೆಯಲ್ಲಿ ಇಬ್ಬರು ಕರಣಿಕರನ್ನೂ ಕರೆದುಕೊಂಡು ಬರಲಿ."

"ನನ್ನೊಡನೆ ಕರಣಿಕರೂ ಬಂದಿದ್ದಾರೆ ರಾಣೀಸಾಹಿಬಾ."

"ಸಂತೋಷ. ಹೆಚ್ಚು ಜನರಿದ್ದರೆ, ಕೆಲಸ ಬೇಗ ಮುಗಿಯುತ್ತದೆ."

"ತೆಗೆದುಕೋ ಚಾಮುಂಡಿ–ಭಂಡಾರದ ಬೀಗದ ಕೈಗಳು. ನಂಜರಾಜಯ್ಯನವರೂ ನಮ್ಮ ಕರಣಿಕರೂ ಬಂದಮೇಲೆ, ಭಂಡಾರದ ಬೀಗ ತೆಗೆದುಬಿಡು.

ನಮ್ಮ ಕರಣಿಕರು ಎಣಿಕೆ ಆರಂಭಿಸಿದ ಮೇಲೆ ನಂಜರಾಜಯ್ಯನವರು ನಮ್ಮನ್ನು ಬಂದು ನೋಡಲಿ. – ನಾವು ಒಳತೊಟ್ಟಿಯಲ್ಲಿರುತ್ತೇವೆ. ರುದ್ರಿ– ಕುಮಾರರ ನ್ನೆತ್ತಿಕೋ."

ಮಹಾಮಾತೃಶ್ರೀಯವರು ಪೀಠದಿಂದೆದ್ದು ಹೊರಟುಹೋದರು.

§

ರಾಣಿಯವರು ಒಳತೊಟ್ಟಿಯಲ್ಲಿ ಭದ್ರಾಸನವೊಂದರ ಮೇಲೆ ವಿಶ್ರಮಿಸಿ ಕೊಳ್ಳುತ್ತಿದ್ದರು. ಪಕ್ಕದಲ್ಲಿದ್ದ ತೊಟ್ಟಿಲಿನಲ್ಲಿ ಕುಮಾರರು ಮಲಗಿದ್ದರು. ರುದ್ರಿ ಅಲ್ಲೇ ಹತ್ತಿರದಲ್ಲಿ ನಿಂತಿದ್ದಳು. ಭೈರಿ, ಮಂಗಳಿ ತೊಟ್ಟಿಯ ಹೊರ ಬಾಗಿಲ ಹತ್ತಿರ ನಿಂತಿದ್ದರು. ಎಲ್ಲರೂ ಮೌನವಾಗಿದ್ದರು. ಅವರ ದೇಹಗಳು ಅಲ್ಲಿದ್ದುವಾದರೂ ಮನಸ್ಸು ಮಾತ್ರ ಎಲ್ಲೋ ಅಲೆಯುತ್ತಿದೆಯೆಂಬುದು ಅವರ ಮುಖಭಾವದಿಂದ ಸ್ಪಷ್ಟವಾಗುತ್ತಿತ್ತು.

ನಂಜರಾಜಯ್ಯನವರೂ ಚಾಮುಂಡಿಯೂ ಗಾಬರಿಯಿಂದ ತೊಟ್ಟಿಯೊಳಕ್ಕೆ ಓಡಿಬಂದು, ನಿಂತು, ಒಮ್ಮೆ ಸುತ್ತಲೂ ನೋಡಿದರು. ನಂಜರಾಜಯ್ಯನವರು ಚಾಮುಂಡಿಗಿಂತ ಹೆಚ್ಚು ಕಂಗಾರಾಗಿದ್ದರು. ರಾಣಿಯವರು ಭದ್ರಾಸನದಲ್ಲಿ ವಿಶ್ರಮಿಸಿಕೊಳ್ಳುತ್ತಿರುವುದನ್ನು ಗುರುತಿಸಿದೊಡನೆಯೇ ಅವರು ಥಟ್ಟನೆ ಆ ಕಡೆಗೆ ಓಡಿದರು. ಮಹಾಮಾತೃಶ್ರೀಯವರ ಸಮೀಪದಲ್ಲಿ ನಿಂತು, ಕುಗ್ಗಿದ ಧ್ವನಿಯಲ್ಲಿ ಕೂಗಿಕೊಂಡರು.

"ತಾಯಿ, ನಾಶವಾಯಿತು, ಸರ್ವನಾಶವಾಯಿತು; ದ್ರೋಹವಾಯಿತು, ಮಹಾದ್ರೋಹವಾಯಿತು ತಾಯಿ."

"ಸುಮ್ಮನೆ ಕಂಗಾರಾಗಿ ಕೂಗಿಕೊಳ್ಳಬೇಡಿ. ಸಮಾಧಾನ ಮಾಡಿಕೊಳ್ಳಿ. ಏನಾಯಿತು? – ಏನಾಯಿತು ಹೇಳಿ."

"ಸರ್ವನಾಶವಾಯಿತು ತಾಯಿ. ಲೆಕ್ಕವಿಲ್ಲ, ಲೇಖವಿಲ್ಲ. ಅರಮನೆಯ ಭಂಡಾರದಲ್ಲಿದ್ದ ಪೆಠಾರಿಗಳನ್ನೆಲ್ಲಾ ಹಾಗೆ ಹಾಗೆಯೇ ಎಲ್ಲಿಗೋ ಸಾಗಿಸುತ್ತಿದ್ದಾರೆ. ಅಷ್ಟುಮಾತ್ರವಲ್ಲ ತಾಯಿ. ಅರಮನೆಯ ಇತರ ಭಾಗಗಳಿಗೂ ನುಗ್ಗಿ ಕೈಗೆ ಏನು ಸಿಕ್ಕಿದರೆ ಅದನ್ನು ಸ್ವಾಧೀನಪಡಿಸಿಕೊಳ್ಳುತ್ತಿದ್ದಾರೆ – ಖಾಸಾ ಸ್ನಾನಗೃಹದಲ್ಲಿದ್ದ ಬೆಳ್ಳಿಯ ಕಡಾಯಿಗಳು, ಚೊಂಬುಗಳನ್ನು ಕೂಡ ಹೊತ್ತು

ಕೊಂಡು ಹೋದರು.– ಆ ಹುಡುಗ ಮೀರ್ ನಾದಿಮ್ ಯಾರ ಮಾತನ್ನೂ ಲಕ್ಷ್ಯಿಸುತ್ತಿಲ್ಲ. ಇನ್ನೊಂದು ಗಂಟೆಯೊಳಗಾಗಿ ಅರಮನೆಯನ್ನೆಲ್ಲಾ ಪೂರ್ತಿಯಾಗಿ ದೋಚಿಬಿಡುವಂತೆ ತೋರುತ್ತದೆ ತಾಯಿ!– ಅಪ್ಪಣೆಯಾದರೆ—"

"ವೃಥಾ ಕೋಪಮಾಡಿಕೊಳ್ಳಬೇಡಿ ನಂಜರಾಜಯ್ಯ. ಆಗಲಿ, ಏನು ಮಾಡುತ್ತಾರೋ ಮಾಡಲಿ."

"ಹಾಗೆಂದು ಸುಮ್ಮನೆ ಕೈಕಟ್ಟಿ ಕುಳಿತಿರುವುದೆ!"

"ಕೈಯಲ್ಲಿ ಕಸುವಿಲ್ಲದಾಗ ಕೈಕಟ್ಟಿ ಕುಳಿತಿರುವುದೇ ಮರ್ಯಾದೆ. ಕೈ ಎತ್ತಿದರೆ ಅಪಹಾಸ್ಯಕ್ಕೀಡಾಗುತ್ತೇವೆ."

"ಈ ದರೋಡೆ ನೋಡಿಕೊಂಡು ಸುಮ್ಮನಿರುವುದು ನನ್ನಿಂದ ಸಾಧ್ಯವಿಲ್ಲ ತಾಯಿ. ಸನ್ನಿಧಾನದ ಅಪ್ಪಣೆಯಾದರೆ ಸಾಕು—"

"ದರೋಡೆಕಾರರನ್ನು ಇದಿರಿಸಿ—"

"ಹೋರಾಡುತ್ತೇನೆ."

"ಹೋರಾಡಿ ಸಾಯುತ್ತೀರಿ ?"

"ಅದರಲ್ಲಿ ಅನುಮಾನವೇ ಇಲ್ಲ ತಾಯಿ."

"ಆಯಿತು ಆಮೇಲೆ ?"

ನಂಜರಾಜಯ್ಯನವರ ಬಾಯಿ ಕಟ್ಟಿತು. ಅದನ್ನರಿತು ಮಾತೃಶ್ರೀಯವರೇ ಮಾತು ಮುಂದುವರಿಸಿದರು :

"ನಿಮ್ಮ ರಾಜಭಕ್ತಿ, ನಿಷ್ಠೆ ನಮಗೆ ಮೆಚ್ಚು. ಆದರೆ, ನಮಗೆ ಈಗ ಬೇಕಾದದ್ದು ನಿಮ್ಮ ಕತ್ತಿಯ ಬಲದ, ನಿಮ್ಮ ಶೌರ್ಯದ ಪ್ರದರ್ಶನವಲ್ಲ. ನಿಮ್ಮ ಶಾಂತ ವರ್ತನೆ. ನಡೆಯುವುದೆಲ್ಲಾ ನಡೆಯಲಿ. ನೀವು ಇಲ್ಲಿ ಸುಮ್ಮನೆ ಇದ್ದುಬಿಡಿ."

"ಅದು ಹೇಗೆ ಸಾಧ್ಯ ತಾಯಿ – ಈ ಸುಲಿಗೆಯನ್ನು ನೋಡಿಕೊಂಡು!"

"ನಮ್ಮ ಮಾತು ಕೇಳಿ ನಂಜರಾಜಯ್ಯ – ನಮ್ಮ ವಿಚಾರದಲ್ಲಿ ನಿಮಗೆ ಭಕ್ತಿ ಗೌರವಗಳಿದ್ದರೆ ನೀವೊಂದು ಕೆಲಸಮಾಡಿ : ನಮ್ಮ ಸೂಚನೆಯಂತೆ ನಡೆದು ಕೊಳ್ಳಿ. ಅದು ಸಾಧ್ಯವಿಲ್ಲದಿದ್ದರೆ, ನೀವಿಲ್ಲಿ ಇರಬೇಕಾಗಿಲ್ಲ. ಎಲ್ಲ ವಿಚಾರ ನಾವು ನೋಡಿಕೊಳ್ಳುತ್ತೇವೆ."

"ನನ್ನ ವರ್ತನೆ ಸನ್ನಿಧಾನಕ್ಕೆ ಬೇಸರ—"

"ಹಾಗಲ್ಲ ನಂಜರಾಜಯ್ಯ. ಈ ಸರಿಸ್ಥಿತಿಯಲ್ಲಿ ನಿಮ್ಮ ಬುದ್ಧಿ ನಿಮ್ಮ

ಹತ್ತೋಟಿಯಲ್ಲಿರಲಾರದು. ಹಾಗಾಗಿ ಆದರಿಂದ ನಮಗೆ, ನಮ್ಮ ಕಾರ್ಯಕ್ರಮಕ್ಕೆ ಅಪಾಯವಾಯಿತೆಂಬ ಕೊರಗು ನಿಮ್ಮಲ್ಲಿ ಉಳಿಯುವಂತೆ ಆಗಬಾರದು."

"ಈ ಸ್ಥಿತಿಯಲ್ಲಿ ನನ್ನ ಸೇವೆ ಸನ್ನಿಧಾನದ ಮನಸ್ಸಿಗೆ ಬರಲಿಲ್ಲ. ಅದು ನನ್ನ ದುರದೃಷ್ಟ ಎಂದುಕೊಳ್ಳುತ್ತೇನೆ. ನನ್ನಿಂದ ಸೇವೆ ಆಗದಿದ್ದರೆ ಹೋಯಿತು. ಸನ್ನಿಧಾನಕ್ಕೆ ತೊಂದರೆಯಾಗುವುದು ಬೇಡ. ಅಪ್ಪಣೆಯಾದರೆ—"

"ಹೋಗಿಬನ್ನಿ ನಂಜರಾಜಯ್ಯ."

ನಂಜರಾಜಯ್ಯನವರ ಮುಖ ಚಿಕ್ಕದಾಯಿತು. ಅಂದಿನ ಪರಿಸ್ಥಿತಿಯಲ್ಲಿ ಮಹಾಮಾತೃಶ್ರೀಯವರ ನಡವಳಿಕೆ ನಂಜರಾಜಯ್ಯನವರಿಗೆ ತೀರಾ ಹೀನವಾಗಿ ಕಾಣಿಸಿತು. ಅದು ಖಂಡಿತವಾಗಿಯೂ ಕ್ಷತ್ರಿಯೋಚಿತವಾದುದಲ್ಲವೆಂದೂ ಕತ್ತಿ ಗೋಪಾಲರಾಜೇ ಅರಸಿನವರ ಮಗಳ ಯೋಗ್ಯತೆಗೆ ತಕ್ಕುದಲ್ಲವೆಂದೂ ನಿರ್ಣಯಿಸಿದರು. ಆದರೂ ಪದ್ಧತಿಯಂತೆ ಮಹಾಮಾತೃಶ್ರೀಯವರಿಗೆ ನಮಸ್ಕರಿಸಿ ಅಲ್ಲಿಂದ ಹೊರಟರು. ಹೋಗುತ್ತ ಹೋಗುತ್ತ ಅವರ ಮನಸ್ಸು ಅಂದಿನ ಘಟನೆಗಳ ಪುನರಾವರ್ತನೆಯಲ್ಲಿ ತೊಡಗಿತು. ಕೊನೆಗೆ ಹೀಗೆಂದುಕೊಂಡಿತು : "ಅರಮನೆಯ ಭಂಡಾರ ನನ್ನ ಸ್ವತ್ತೇನೂ ಅಲ್ಲವಲ್ಲ ! ಮೇಲಿನವರ ಆಜ್ಞೆಯನ್ನು ನೆರವೇರಿಸುವುದು ನನ್ನ ಕರ್ತವ್ಯ. ಅಮೂಲ್ಯವಾದ ಆಸ್ತಿಯ ರಕ್ಷಣೆ ಅದರ ಒಡೆಯರಿಗೇ ಬೇಡದಿರುವಾಗ – ಅದನ್ನು ಅವರಿಗೆ ಉಳಿಸಿ ಕೊಡುವ ಹವ್ಯಾಸ ನನಗೇಕೆ ! – ಇಷ್ಟು ದಿನ ಅವರ ಉಪ್ಪು ತಿಂದೆ. ಕೃತಜ್ಞತೆಯಿಂದ ರಾಜಭಕ್ತಿ ತೋರಲು ಪ್ರಯತ್ನಿಸಿದೆ. ನನ್ನ ರಾಜಭಕ್ತಿ ಅವರಿಗೆ ಬೇಡವಾಯ್ತು. 'ಇಷ್ಟು ದಿನ ನಮ್ಮ ಉಪ್ಪು ತಿಂದು ಬೆಳೆದೆಯಲ್ಲ – ಎಲ್ಲಿ ಈಗ ನೋಡೋಣ ನಿನ್ನ ರಾಜಭಕ್ತಿ' ಎಂದು ಅವರು ಹೇಳಬೇಕಿತ್ತು. ಆಗ ತೋರಿಸುತ್ತಿದ್ದೆ ಈ ಸಮ್ಮುಖದ ನಂಜರಾಜಯ್ಯನ ಕೈಚಳಕ– ಹೊಂ, ಈಗ ಸುಮ್ಮನೆ ನಾನು ಮಾತನಾಡಿಕೊಂಡು ಏನು ಪ್ರಯೋಜನ !...."

ನಂಜರಾಜಯ್ಯನವರು ಹೊರಟುಹೋದ ಸ್ವಲ್ಪ ಹೊತ್ತಿನ ಮೇಲೆ ಮೀರ್ ನಾದಿರ್ ಮಹಾಮಾತೃಶ್ರೀಯವರ ಸನ್ನಿಧಾನಕ್ಕೆ ಬಂದ. ಅವನ ಹಿಂದೆ ಮೂರು ನಾಲ್ಕು ಮಂದಿ ಮುಸ್ಲಿಂ ಕಟ್ಟಾಳುಗಳೂ ಇದ್ದರು. ತೆರೆಯ ಹಿಂದೆ ಕುಳಿತಿದ್ದ ಮಹಾಮಾತೃಶ್ರೀಯವರಿಗೆ ನಾದಿರ್ ಹೇಳಿದ :

"ರಾಣೀಸಾಹಿಬಾ, ರಾಜರ ಜನಾನದಲ್ಲಿರುವ ಎಲ್ಲ ರಾಣಿಯರ ಒಡವೆ ವಸ್ತುಗಳನ್ನೂ ನಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಪಾದ್‌ಷಾರವರ ಅಪ್ಪಣೆಯಾಗಿದೆ."

"ಯಾರು ? – ಪಾದ್‌ಷಾ ?"

"ಟಿಪ್ಪೂ ಸುಲ್ತಾನ್ ಪಾದ್‌ಷಾರವರು."

"ಅವರು, ನಾವು ನಿಯಮಿಸಿಕೊಂಡಿರುವ ಸರ್ವಾಧಿಕಾರಿಗಳು."

"ಅದೆಲ್ಲಾ ಹಿಂದಿನ ಮಾತಾಯಿತು. ಈಗ ನೀವು, ರಾಣೀವಾಸದವರು, ಈ ಮಗು ಎಲ್ಲರೂ ಪಾದ್‌ಷಾರವರ ಬಂದಿಗಳಾಗಿದ್ದೀರಿ. ನಿಮಗೆ ಉಡಲು ಎರಡೆರಡು ಬಟ್ಟೆ ಬಿಟ್ಟು ಮಿಕ್ಕ ಎಲ್ಲ ವಸ್ತುಗಳನ್ನೂ ನಮ್ಮ ವಶಕ್ಕೆ ತೆಗೆದುಕೊಳ್ಳ ಬೇಕಾಗಿದೆ."

"ಆಯಿತು. ಆಮೇಲೆ ?"

"ನಿಮ್ಮೆಲ್ಲರನ್ನೂ ಈ ಅರಮನೆಯಿಂದ ಬೇರೆಯೆಡೆಗೆ ವರ್ಗಾಯಿಸ ಲಾಗುತ್ತದೆ."

"ಎಲ್ಲಿಗೆ ?"

"ಕಾಂತರಾಯರ ಮನೆಗೆ."

"ನಮಗೆ, ನಮ್ಮ ಪರಿವಾರಕ್ಕೆ ಆ ಸ್ಥಳ ಸಾಲದು."

"ನಿಮ್ಮ ಪರಿವಾರ ಯಾವುದೂ ಅಲ್ಲಿಗೆ ಬರುವುದಿಲ್ಲ. ನಾಲ್ಕಾರು ಮಂದಿ ರಾಣಿಯರಿಗೆ ಒಂದು ಮಗುವಿಗೆ ಆ ಮನೆ ಸಾಕು ಎಂದು ಪಾದ್‌ಷಾರವರು ನಿರ್ಣಯಿಸಿದ್ದಾರೆ."

"ಆಯಿತು. ನಮ್ಮ ಸ್ವಂತ ಉಪಯೋಗಕ್ಕೆ ಬೇಕಾದ ವಸ್ತುಗಳನ್ನೆಲ್ಲಾ ಸೇರಿಸಿ ಇಡಿಸಿಕೊಂಡು ನಾಳೆ ಬೆಳಗ್ಗೆ ಅಲ್ಲಿಗೆ ಹೊರಡುತ್ತೇವೆ."

"ಅದು ಸಾಧ್ಯವಿಲ್ಲ. ನಿಮ್ಮ ಸ್ವಂತ ಉಪಯೋಗಕ್ಕೆ ಯಾವ ಯಾವ ವಸ್ತುಗಳು ಅವಶ್ಯಕವೆಂದು ಪಾದ್‌ಷಾರವರು ಭಾವಿಸಿದ್ದಾರೋ ಅವನ್ನೆಲ್ಲಾ ಅಲ್ಲಿ ಸಜ್ಜುಗೊಳಿಸಲಾಗಿದೆ. ಉಟ್ಟ ಬಟ್ಟೆ, ಮೇಲಿನ್ನೊಂದು ವಿನಾ ಇನ್ನೇನನ್ನೂ ಇಲ್ಲಿಂದ ತೆಗೆದುಕೊಂಡು ಹೋಗಕೂಡದು ; – ಜೊತೆಯಲ್ಲಿ ಒಬ್ಬಳು ದಾಸಿಯನ್ನು ಮಾತ್ರ ಕರೆದುಕೊಂಡು ಹೋಗಬಹುದು."

"ಉಳಿದವರ ವ್ಯವಸ್ಥೆ ?"

"ಅದು ಪಾದ್‌ಷಾರವರಿಗೆ ಸೇರಿದ್ದು."

ಮಹಾಮಾತೃಶ್ರೀಯವರು ಮಾತನಾಡಲಿಲ್ಲ. ಒಂದರೆಕ್ಷಣ ಸುಮ್ಮನಿದ್ದು ನಾದಿಮ್ ತಾನೇ ಮಾತು ಆರಂಭಿಸಿದ :

"ನೀವು, ದೊರೆಗಳ ಐದು ಮಂದಿ ರಾಣಿಯರು, ಈ ಕುಮಾರರು, ಏಳು

ಮಂದಿಯೂ ಈಗಲೇ ನಿಮ್ಮ ಬಿಡಾರಕ್ಕೆ ಹೊರಡಬೇಕು. ಹೊರಡುವ ಮುಂಚೆ ನಿಮ್ಮ ನಿಮ್ಮ ವಶದಲ್ಲಿರುವ ಎಲ್ಲ ಆಭರಣಗಳನ್ನೂ ಇಲ್ಲಿ ತೆಗೆದಿಡಬೇಕು. – ಸ್ವಲ್ಪ ಅನುಮಾನಕ್ಕೆ ಅವಕಾಶವಾದರೂ ಎಲ್ಲರನ್ನೂ ಪರೀಕ್ಷೆಗೆ ಒಳಗು ಮಾಡಬೇಕಾಗುತ್ತದೆ."

"ಚಾಮುಂಡಿ, ರಾಣಿಯರನ್ನು ಇಲ್ಲಿಗೆ ಬರಹೇಳು.–ಇವರೆಲ್ಲಾ ಸ್ವಲ್ಪ ಹೊತ್ತು ಹೊರಗೆ ಕಾದಿರಲಿ. ನಾವು ಹೊರಡುವುದಕ್ಕೆ ಸಿದ್ಧರಾದ ಮೇಲೆ ತಿಳಿಸೋಣ."

ಮೀರ್ ಸಾದಿಮ್ ತನ್ನೊಡನೆ ಬಂದಿದ್ದವರಿಗೆ ಸಂಜ್ಞೆ ಮಾಡಿ ತಾನು ಮುಂದೆ ಹೊರಟ. ಅವನ ಜನ ಅವನನ್ನು ಹಿಂಬಾಲಿಸಿದರು. ಅವರೆಲ್ಲರೂ ತೊಟ್ಟಿಯಿಂದ ಹೊರಗೆ ಹೋದೊಡನೆಯೇ, ಬಾಗಿಲೆಡೆಯಲ್ಲಿ ನಿಂತಿದ್ದ ಭೈರಿ, ಮಂಗಳಿ ಬಾಗಿಲು ಮುಚ್ಚಿ ಅದನ್ನು ಭದ್ರಪಡಿಸಿದರು. ಚಾಮುಂಡಿ ರಾಣಿಯರನ್ನು ಕರೆತರಲು ಅಂತಃಪುರದ ಕಡೆಗೆ ಹೊರಟಳು.

ಶ್ರೀರಂಗಪಟ್ಟಣದ ಅರಮನೆಯ ಆ ಒಳತೊಟ್ಟಿಯನ್ನು ಮಸಣದ ಮೌನ ಆವರಿಸಿತು.

§

ಮಹಾಮಾತೃಶ್ರೀಯವರು ಗಹನವಾದ ಆಲೋಚನೆಯಲ್ಲಿ ತೊಡಗಿದ್ದರು. ಅವರ ಮುಖ ಕ್ಷಣಕ್ಷಣಕ್ಕೆ ಗಂಭೀರವಾಗುತ್ತಿತ್ತು. ಕೆಲವು ಕ್ಷಣಗಳು ಕಳೆದುವು. ಆದರೆ ಅವು ರುದ್ರಿ, ಭೈರಿ, ಮಂಗಳಿಯರಿಗೆ ನುಂಗಲಾರದ ತುತ್ತಾಗಿದ್ದುವು. ಕೊನೆಗೆ ಮಹಾಮಾತೃಶ್ರೀಯವರೇ ಆ ರುದ್ರಮೌನವನ್ನೊಡೆದು ಮಾತನಾಡಿದರು....

"ಭೈರಿ, ಮಂಗಳಿ, ನಿಮ್ಮ ಶಸ್ತ್ರಗಳನ್ನಿಲ್ಲಿಟ್ಟು ನಿಮ್ಮ ನಿಮ್ಮ ಮನೆಗೆ ಹೊರಡಿ; – ಕಾವಲಿನವರು ನಿಮ್ಮನ್ನು ಶೋಧನೆ ಮಾಡಬಯಸಿದರೆ ವಿರೋಧ ಮಾಡಬೇಡಿ. ನಿಮ್ಮ ಮೈಮೇಲಿನ ಸಣ್ಣಪುಟ್ಟ ನಗಗಳನ್ನು ಕಸಿದುಕೊಂಡರೂ ಸುಮ್ಮನಿದ್ದು ಬಿಡಿ; – ಯಾರ ಕಣ್ಣಿಗೂ ಬೀಳದಂತೆ ಪಟ್ಟಣದಲ್ಲೇ ಇರುವುದು ಸಾಧ್ಯವಾದರೆ, ಇರಿ. ಇಲ್ಲದಿದ್ದರೆ, ಇನ್ನೆಲ್ಲಾದರೂ ಒಳಪ್ರದೇಶಕ್ಕೆ ಹೊರಟು ಹೋಗಿ. ನೀವು ಎಲ್ಲಿದ್ದರೂ ಸರಿ, ಎಲ್ಲಿದ್ದೀರೆಂಬುದನ್ನು ಚಾಮುಂಡಿಗೆ ತಿಳಿಸುತ್ತಿರಿ; – ನಮ್ಮ ವಿಚಾರದಲ್ಲಿ ನೀವು ಪೂರ್ಣ ನಂಬಿಕೆಯಿಂದ ನಡೆದು

ಕೊಳ್ಳಬೇಕು ; – ಆ ದೇವಿಯ ಕೃಪೆಯಿಂದ ನಮಗೆ ಒಳ್ಳೆಯ ಕಾಲ ಬಂದಾಗ, ನಿಮಗೂ ಒಳ್ಳೆಯದಾಗುತ್ತದೆ. ಆ ನಂಬಿಕೆಯಿಟ್ಟುಕೊಂಡು ಒಳ್ಳೆಯವರಾಗಿ ಬಾಳಿ."

ಭೈರಿ, ಮಂಗಳಿಯರ ಕಣ್ಣಿನಲ್ಲಿ ನೀರು ತೊಟ್ಟಿಡುತ್ತಿತ್ತು. ಕತ್ತು ಉಬ್ಬಿತ್ತು. ಮುಖ ಬಾತಂತೆ ಆಗಿತ್ತು. ಗೊಳೋ ಎಂದು ಅತ್ತುಬಿಡುವಂತಾಗುತ್ತಿತ್ತು. ರಾಣಿಯವರ ಸಮ್ಮುಖದಲ್ಲಿ ಅದೂ ಆ ಸನ್ನಿವೇಶದಲ್ಲಿ ಹಾಗೆ ಅಳುವುದು ತಪ್ಪೆಂದು ಅವರಿಬ್ಬರೂ ಒತ್ತಿ ಬರುತ್ತಿದ್ದ ಅಳುವನ್ನು ಒಳತಳ್ಳುತ್ತಿದ್ದರು. ಒಂದೆರಡು ಕ್ಷಣ ಕಳೆಯುವುದರಲ್ಲಿ ಭೈರಿ ತನ್ನ ದುಃಖವನ್ನು ಹಿಡಿತಕ್ಕೆ ತಂದುಕೊಂಡು ಮಾತನಾಡುವ ಧೈರ್ಯ ಮಾಡಿದಳು :

"ಅವ್ವ, ನಮ್ಮ ಪ್ರಾಣ ಹೋಗಲಿ, ಮಾನ ಹೋಗಲಿ ನಾವು ಸನ್ನಿಧಾನಕ್ಕೆ ದ್ರೋಹ ಮಾಡುವುದಿಲ್ಲ. ಅಂಥ ಯೋಚನೆ ನಮ್ಮ ಮನಸ್ಸಿಗೆ ಬಂದರೂ ನಮ್ಮ ವಂಶ ನಿರ್ವಂಶವಾಗಿ ಹೋಗಲಿ.–ಆ ಬೆಟ್ಟದ ವ್ಯಾಗಲ ಚಾಮುಂಡಿ ಹೊಳೆದಂಡೆ ನಂಜುಂಡೇಶ್ವರ ಸನ್ನಿಧಾನವನ್ನ ಕುಮಾರನ್ನ ಕಾದುಕೋಬೇಕು. ನಾವೇನು ಮಾಡೇವು ಹುಲು ಪ್ರಾಣಿಗಳು !" – ಭೈರಿಯ ಕೊರಳು ಕಟ್ಟಿಬಂತು. ತಡೆಯಲಾರದೆ ಬಿಕ್ಕಿದಳು. ಬಿಕ್ಕುತ್ತಲೇ ತನ್ನ ಸೊಂಟದಲ್ಲಿದ್ದ ಕಠಾರಿಯನ್ನು ತೆಗೆದು ಮಹಾಮಾತೃಶ್ರೀಯವರ ಮುಂದೆ ಇಟ್ಟಳು. ಅವರ ಪಾದಗಳ ಮೇಲೆ ಮುಖವಿಟ್ಟು ಕಣ್ಣೀರು ಕರೆದಳು. ಅವಳ ಈ ಸರಳ ಭಕ್ತಿ ವಿಶ್ವಾಸಗಳು ರಾಣಿಯವರ ಕರುಳನ್ನು ಕುಕ್ಕಿದುವು. ಅವರ ಧೀರ ಗಾಂಭೀರ್ಯದ ಕೋಟೆಯನ್ನು ಭೇದಿಸಿದುವು. ಅವರ ಕಣ್ಣಿನಲ್ಲೂ ಎರಡು ಹನಿ ನೀರು ಉದುರಿತು. ಕಂಠ ಗದ್ಗದವಾಯಿತು.

"ಏಳು ಭೈರಿ ಚಿಂತಿಸಬೇಡ. ಚಾಮುಂಡಿ, ನಂಜುಂಡೇಶ್ವರ ಒಳ್ಳೆಯದೇ ಮಾಡುತ್ತಾರೆ." ಎಂದರು.

ಭೈರಿ ಎದ್ದು ನಿಂತಳು. ನಿಂತಾಗಲೂ ಕೈಮುಗಿದೇಯಿದ್ದಳು. ಕಣ್ಣಿನಲ್ಲಿ ನೀರಾಡುತ್ತಲೇಯಿತ್ತು. ಆ ದೃಶ್ಯವನ್ನೆಲ್ಲಾ ನೋಡಿದ ಮಂಗಳಿ ಕೂಡ ಅದರ ಪ್ರಬಲ ಪ್ರಭಾವಕ್ಕೆ ಒಳಗಾಗಿದ್ದಳು. ಅವಳೂ ಅಳುವನ್ನು ತಡೆದುಕೊಂಡು ಬಿಕ್ಕುತ್ತಾ :

"ಹೇಳುವುದನ್ನೆಲ್ಲಾ ಭೈರಿ ಹೇಳಿದ್ದಾಳೆ. ನಾನೇನು ಹೇಳಲಿ ತಾಯಿ. ನಾವು ಎಲ್ಲಿರಲಿ ಹೇಗಿರಲಿ ನಿಮ್ಮ ದಾಸಿಯರು—" ಎನ್ನುವಷ್ಟರಲ್ಲಿ ಅವಳ

ಸ್ಥೈರ್ಯದ ಕಟ್ಟೆ ಒಡೆದುಹೋಯಿತು. ಆಯ ತಪ್ಪಿದವಳಂತೆ ಥಟ್ಟನೆ ನೆಲಕ್ಕೆರಗಿ, ಮಹಾಮಾತೃಶ್ರೀಯವರ ಪಾದಗಳನ್ನು ಹಿಡಿದುಕೊಂಡು ಬಿಕ್ಕಿಬಿಕ್ಕಿ ಅತ್ತಳು.

"ಚಿಕ್ಕಂದಿನಿಂದ ನಾವು ಸಾಕಿದ ಕೂಸು ಈ ಮಂಗಳಿ. ಇವಳ ತಾಯಿಯೂ ಹೀಗೇ ನಮಗೆ ತುಂಬ ಅಚ್ಚುಮೆಚ್ಚು. ನಮ್ಮನ್ನು ಬಿಡಬೇಕಾಗಿ ಬಂದಿತೆಂದು ಇವಳಿಗೆ ಕರುಳುಕತ್ತರಿಸಿದಂತಾಗುತ್ತಿದೆ."

"ಅಲ್ಲವೆ ತಾಯಿ!" ಎಂದು ನಿಟ್ಟುಸಿರುಬಿಟ್ಟಳು ಭೈರಿ.

"ಏಳು ಮಂಗಳಿ. ಅಳಬೇಡ. ಮನಸ್ಸಿಗೆ ಘಾಸಿಮಾಡಿಕೊಳ್ಳಬೇಡ. ನಮ್ಮೆಲ್ಲರನ್ನೂ ಆ ಸರ್ವಮಂಗಳೆಯೇ ರಕ್ಷಿಸುತ್ತಾಳೆ.

ಮಂಗಳಿ ಎದ್ದು ನಿಂತಳು. ಅವಳ ದುಃಖ ದೊಡ್ಡ ಅಳುವನ್ನು ತಳ್ಳಿಕೊಂಡು ಮೇಲೆ ಬಂತು. ಅದನ್ನು ಹತ್ತಿಕ್ಕಲು ಅವಳಿಂದ ಸಾಧ್ಯವಾಗಲೇ ಇಲ್ಲ. ಭೈರಿ ಅವಳನ್ನು ತನ್ನೆಡೆಗೆಳೆದುಕೊಂಡು ಮಹಾಮಾತೃಶ್ರೀಯವರ ಸನ್ನಿಧಾನದಿಂದ ಸ್ವಲ್ಪ ದೂರ ಕರೆದುಕೊಂಡು ಹೋಗಿ ಸಮಾಧಾನದ ಮಾತನಾಡಿದಳು :

"ಸನ್ನಿಧಾನದ ಮುಂದೆ ಹೀಗೆಲ್ಲಾ ಆಡಬಾರದು. ನಿನಗೇತರ ಅಂಜಿಕೆ. ನಾನಿದ್ದೇನೆ. ನಾಲ್ಕು ದಿನ ಕಷ್ಟಬರುತ್ತದೆ. ಕಷ್ಟ ಯಾರಿಗೆ ತಪ್ಪಿದ್ದು ಹೇಳು. ಕಷ್ಟ ಬಂದಾಗ ಬಾಯಿ ಮುಚ್ಚಿಕೊಂಡು ಅನುಭವಿಸಬೇಕು. ದೇವರು ಕಣ್ಣು ಬಿಟ್ಟರೆ ಎಲ್ಲ ನಗುಮುಖವಾಗುತ್ತದೆ. ಅಳಬೇಡ ಸುಮ್ಮನಿರು. ಕಣ್ಣೊರಸಿಕೋ ಸನ್ನಿಧಾನ ಬೇಸರಮಾಡಿಕೊಂಡಾರು—"

ಮಂಗಳಿಯ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಅವಳ ಅಳು ನಿಂತಿತು. ಅವಳು ಕಣ್ಣೊರೆಸಿಕೊಂಡಳು. ತನ್ನ ನಡುವಿನಲ್ಲಿ ಅಡಗಿಸಿಟ್ಟು ಕೊಂಡಿದ್ದ ಕಠಾರಿಯನ್ನು ತೆಗೆದು ಮುಂದೆ ಹೋಗಿ ಮಹಾಮಾತೃಶ್ರೀಯವರ ಕಾಲಿನೆಡೆಯಲ್ಲಿಟ್ಟು ಅವರಿಗೆ ಕೈ ಮುಗಿದು ದೂರ ಸರಿದು ಭೈರಿಯ ಜೊತೆಯಲ್ಲಿ ನಿಂತಳು.

ಆ ಹೊತ್ತಿಗೆ ಚಾಮುಂಡಿ ಒಳಬಾಗಿಲಿನಿಂದ ತೊಟ್ಟಿಗೆ ಬಂದಳು. ಅವಳನ್ನ ನುಸರಿಸಿ ಖಾಸಾ ಚಾಮರಾಜಒಡೆಯರ ರಾಣಿಯರು ಬಂದರು. ಭಯ, ದುಃಖ ಗಳಿಂದ ಅವರ ಮುಖಗಳು ಮ್ಲಾನವಾಗಿದ್ದುವು. ಅವರ ಮುಖಗಳನ್ನು ಕಂಡೊಡ ನೆಯೇ ಮಹಾಮಾತೃಶ್ರೀಯವರಿಗೆ ದುಃಖ ಉಮ್ಮಳಿಸಿ ಬಂತು. ಅವರದನ್ನು ತಡೆದುಕೊಂಡು ಮಾತನಾಡಲು ಪ್ರಯತ್ನಪಟ್ಟರು. ಆದರೂ ಅದುಮಿಟ್ಟಿದ್ದ ಆ ದುಃಖದ ಕುಡಿ ಅವರ ಧ್ವನಿಯೊಂದಿಗೆ ಬೆರೆತು ಹೊರಬಿತ್ತು.

" ನಾವು ಬೇರೊಂದೆಡೆಯಲ್ಲಿ ಸಾಮಾನ್ಯರಂತೆ ಬಾಳಬೇಕಾದ ಪರಿಸ್ಥಿತಿಯುಂಟಾಗಿದೆ "– ಎನ್ನುವಷ್ಟರಲ್ಲಿ ಅವರ ಮಾತು ಕಟ್ಟಿತು.

ಮಹಾಮಾತೃಶ್ರೀಯವರು ಅನುಭವಿಸುತ್ತಿರುವ ಅಪಾರ ದುಃಖದ ಸುಳಿವು ಅವರ ಧ್ವನಿಯಲ್ಲಿ ತೋರಿಬಂದಿದ್ದನ್ನು ಚಲುವಾಜಮ್ಮಣ್ಣಿಯವರು ಗಮನಿಸಿದರು. ಮಹಾಮಾತೃಶ್ರೀಯವರನ್ನು ಮಾತನಾಡಲು ಬಿಟ್ಟರೆ ಅವರನ್ನು ಇನ್ನೂ ಹೆಚ್ಚು ದುಃಖಕ್ಕೀಡುಮಾಡಿದಂತಾಗುವುದೆಂದು ಆಲೋಚಿಸಿ, ತಾವೇ ಮಾತನಾಡಿದರು :

" ತಿಳಿಯಿತು ಅತ್ತಮ್ಮಯ್ಯ. ಸಿದ್ಧವಾಗಿ ಬಂದಿದ್ದೇವೆ.–ಚಾಮುಂಡಿ ನಮ್ಮ ಆಭರಣಗಳ ಪೆಟ್ಟಿಗೆಯನ್ನು ಸನ್ನಿಧಾನಕ್ಕೆ ಒಪ್ಪಿಸು."

" ಇದೋ, ಇಲ್ಲಿಟ್ಟಿದ್ದೇನೆ ತಾಯಿ."

ಮಹಾಮಾತೃಶ್ರೀಯವರು ಒಮ್ಮೆ ಸುತ್ತಲೂ ನೋಡಿ ಕೇಳಿದರು :

" ನಮ್ಮ ಖಾಸಾಪೂಜೆ ಮೂರ್ತಿಗಳನ್ನು ತರಲಿಲ್ಲವೆ ಚಲುವಾಜಿ."

" ಈಗಲೇ ತರುತ್ತೇನೆ."

" ಪಟ್ಟೆಮಡಿಯುಟ್ಟು, ಮೂರ್ತಿಗಳನ್ನು ಕೃಷ್ಣಾಜಿನದ ಪೆಟ್ಟಿಗೆಯಲ್ಲಿಟ್ಟು ತೆಗೆದುಕೊಂಡು ಬಾ. ಚಾಮುಂಡಿ, ರಾಣಿಯವರ ಜೊತೆಯಲ್ಲಿ ಹೋಗು."

ಅವರಿಬ್ಬರೂ ಹೊರಟುಹೋದರು. ಮಹಾಮಾತೃಶ್ರೀಯವರು ರಾಣಿಯರನ್ನು ಕರೆದು ತೆರೆಯ ಹಿಂದೆ ತಮ್ಮೊಡನೆ ಕುಳಿತುಕೊಳ್ಳುವಂತೆ ಸೂಚಿಸಿ, ತೊಟ್ಟಿಯ ಹೊರಬಾಗಿಲನ್ನು ತೆರೆಯುವಂತೆ ಆಜ್ಞೆ ಮಾಡಿದರು. ಭೈರಿ ಬಾಗಿಲನ್ನು ತೆರೆದಳು. ಮಂಗಳಿ ಅವಳ ಪಕ್ಕದಲ್ಲಿ ನಿಂತಳು.

ಮೀರ್ ನಾದಿಮ್ ತನ್ನ ಅನುಚರರೊಡನೆ ಒಳಕ್ಕೆ ಬಂದ. ಸುತ್ತಲೂ ನೋಡಿದ. ಅಲ್ಲಿದ್ದ ಶಸ್ತ್ರಗಳು ಒಡವೆ ವಸ್ತ್ರಗಳನ್ನು ವಶಪಡಿಸಿಕೊಳ್ಳುವಂತೆ ತನ್ನವರಿಗೆ ಆಜ್ಞೆ ಮಾಡಿದ. ಮತ್ತೊಮ್ಮೆ ಸೂಕ್ಷ್ಮವಾಗಿ ಸುತ್ತ ನೋಡಿ ಕೇಳಿದ :

" ಇನ್ನಿಬ್ಬರಿರಬೇಕಲ್ಲ ಎಲ್ಲಿ ?"

" ಅವರು ನಮ್ಮ ಪೂಜೋಪಕರಣಗಳನ್ನು ತರಲು ಹೋಗಿದ್ದಾರೆ. ನಮ್ಮ ಪ್ರಯಾಣಕ್ಕೆ ವಾಹನಗಳು ಸಿದ್ಧವಾಗಿವೆ ತಾನೆ ?"

" ಸಿದ್ಧವಾಗಿವೆ. ಇಲ್ಲೇ ಒಳ ಅಂಗಳದಲ್ಲಿವೆ."

ನಾಲ್ಕಾರು ಕ್ಷಣ ಎಲ್ಲರೂ ಮೌನವಾಗಿದ್ದರು. ಆ ಮೌನ ಕತ್ತು ಹಿಚುಕುವಂತಿತ್ತು.

ಚಾಮುಂಡಿ ಒಳಬಾಗಿಲಿನಿಂದ ತೊಟ್ಟಿಗೆ ಬಂದಳು. ಮೀರ್ ನಾದಿಮ್

ಮುಂತಾದವರು ಆಗಲೇ ಅಲ್ಲಿಗೆ ಬಂದಿದ್ದನ್ನು ಗುರುತಿಸಿ, ಚಲುವಾಜಮ್ಮಣ್ಣಿಯವರಿಗೆ ಎಚ್ಚರಿಕೆ ಕೊಟ್ಟಳು. ಅವರು ಮುಖದ ತುಂಬ ಮುಸುಕೆಳೆದುಕೊಂಡು ತೆರೆಯ ಹಿಂಬದಿಗೆ ಹೋದರು. ಚಾಮುಂಡಿ ಮುಂದೆ ಬಂದಳು. ಒಡನೆಯೇ ಮಹಾಮಾತೃಶ್ರೀಯವರು ಹೇಳಿದರು:

"ನಾವಿನ್ನು ಹೊರಡಲು ಸಿದ್ಧರಾಗಿದ್ದೇವೆ. ಇವರಿಬ್ಬರು ದಾಸಿಯರು ನಮ್ಮೊಡನೆ ಬರುತ್ತಾರೆ" ಎಂದು ಚಾಮುಂಡಿ ಮತ್ತು ರುದ್ರಿಯ ಕಡೆಗೆ ಕೈ ತೋರಿಸಿದರು.

"ಒಬ್ಬಳು ದಾಸಿ ಸಾಕೆಂದು ಪ್ಯಾದ್‌ಷಾರವರ ಅಪ್ಪಣೆಯಾಗಿದೆ."

"ತಿಳಿಯಿತು. ಇವಳು ನಮ್ಮ ದಾಸಿ. ಅವಳು ಕುಮಾರರಿಗೆ ಸ್ತನ್ಯ ಕೊಡುವ ದಾಸಿ."

"ತಮ್ಮಿಷ್ಟದಂತೆಯೇ ಆಗಲಿ. ಇನ್ನು ಹೊರಡಬಹುದು – ಆದರೆ ಸ್ವಲ್ಪ ಕೆಲಸ ಉಳಿದಿದೆ – ತಾವು ತೆರೆಯ ಹಿಂದೆ ಇಟ್ಟುಕೊಂಡಿರುವ ಆ ಪೆಟ್ಟಿಗೆಯನ್ನು ಪರೀಕ್ಷಿಸಬೇಕಾಗಿದೆ. ಅಷ್ಟೇ."

"ಅದು ನಮ್ಮ ದೇವರ ಪೆಟ್ಟಿಗೆ."

"ಯಾವುದಾದರೇನು? ನಾವು ಪರೀಕ್ಷಿಸಬೇಕಾದದ್ದೇ."

"ಚಲುವಾಜಿ, ಆ ಕೃಷ್ಣಾಜಿನವನ್ನೂ ಅದರ ಮೇಲೆ ಆ ಪಟ್ಟೆಮಡಿಯನ್ನೂ ತಾಸಿ ಮೂರ್ತಿಗಳನ್ನೆಲ್ಲಾ ತೆಗೆದಿಡು;—ನೀವು ಅವು ಯಾವುದನ್ನೂ ಮುಟ್ಟ ಕೂಡದು. ನಿಮ್ಮ ಅಪೇಕ್ಷೆಯೇನಿದ್ದರೂ ತಿಳಿಸಿ. ನಡೆಸಿಕೊಡುತ್ತೇವೆ."

ಚಲುವಾಜಮ್ಮಣ್ಣಿಯವರು ಆ ಮೂರ್ತಿಗಳನ್ನೆಲ್ಲಾ ಒಂದೊಂದಾಗಿ ತೆಗೆದಿಟ್ಟರು. ಮೀರ್ ನಾದಿರ್ ಅವುಗಳನ್ನು ಬಿರುಗಣ್ಣಿನಿಂದ ನೋಡಿದ. ದೊಡ್ಡ ಶೋಧನೆ ನಡೆಸಿದವನ ಗತ್ತಿನಲ್ಲಿ ಮಾತನಾಡಿದ.

"ಓ! ದೇವರ ಹೆಸರಿನಲ್ಲಿ ಅಮೂಲ್ಯ ಆಭರಣಗಳನ್ನು ಸಾಗಿಸುತ್ತಿದ್ದೀರಿ!"

"ಆ ಮಾತು ಸರಿಯಲ್ಲ. ಅವು ಆ ಮೂರ್ತಿಗಳಿಗೆ ಸದಾಕಾಲದಲ್ಲಿಯೂ ಧರಿಸಿರುವ ಅಲಂಕಾರಗಳು."

"ನನಗದು ತಿಳಿಯದು. ಅವನ್ನು ತಗೆದುಕೊಂಡು ಹೋಗಲು ಅವಕಾಶವಿಲ್ಲ."

"ಎಲ್ಲ ಹೋದಮೇಲೆ ಅವುಗಳಿಂದಾಗಬೇಕಾದುದೇನು?– ತೆಗೆದುಬಿಡು ಚಲುವಾಜಿ."

ಚಲುವಾಜಮ್ಮಣ್ಣಿಯವರು ಮೂರ್ತಿಗಳಿಗೆ ಧರಿಸಿದ್ದ ಒಡವೆಗಳನ್ನು

ಒಂದೊಂದಾಗಿ ತೆಗೆಯಲು ಆರಂಭಿಸಿದರು. ಆಗ ಅವರ ಕೈ ನಡುಗುತ್ತಿತ್ತು. ಕಣ್ಣಿನಲ್ಲಿ ನೀರು ಹರಿಯುತ್ತಿತ್ತು. ಮಹಾಮಾತೃಶ್ರೀಯವರು ಆ ಕಡೆ ನೋಡಲಾರದೆ ಬೇರೆಯೆಡೆಗೆ ಮುಖ ತಿರುಗಿಸಿಕೊಂಡರು. ಚಲುವಾಜಮ್ಮಣ್ಣಿಯವರು ಒಡವೆಗಳನ್ನು ತೆಗೆದಿಡುತ್ತಿದ್ದಾಗ ನಾದಿರ್ ಕಡೆಯ ತುಂಡಾಳು ಅವನ ಕಿವಿಯಲ್ಲುಸಿರಿದ :

"ಮೀರ್‌ಸಾಹೆಬ್, ಈ ದೇವರ ವ್ಯವಹಾರದಲ್ಲಿ ಏನೋ ಮೋಸವಿದೆ. ಆ ವಿಗ್ರಹಗಳು ಚಿನ್ನದವಲ್ಲವೆ ?"

ಮೀರ್‌ನಾದಿರ್ ಕಣ್ಣರಳಿಸಿ ನೋಡಿ ಕೇಳಿದ :

"ಈ ವಿಗ್ರಹಗಳು ಯಾವ ಲೋಹದ್ದು."

"ಚಿನ್ನ, ಬೆಳ್ಳಿ, ಪಂಚಲೋಹ – ಎಲ್ಲ ಇದೆ. ಲೋಹವಲ್ಲದ ಸಾಲಿಗ್ರಾಮಗಳು ಲಿಂಗಗಳೂ ಇವೆ."

"ಚಿನ್ನ ಬೆಳ್ಳಿಯವು ಯಾವುವಿದ್ದರೂ ಅವು ನಮಗೆ ಸೇರತಕ್ಕವು."

"ಅವು ಅನೇಕ ವರ್ಷಗಳಿಂದ ನಮ್ಮ ಅರ್ಚನೆ ಪಡೆದಿವೆ."

"ಆದರೇನು ? – ಅವು ಚಿನ್ನ ಬೆಳ್ಳಿಯವು ತಾನೆ ! ಚಿನ್ನ, ಬೆಳ್ಳಿ ಎಲ್ಲಿದ್ದರೂ ಸರಿ, ಯಾವ ರೂಪದಲ್ಲಿದ್ದರೂ ಸರಿ, ಒಂದು ಚೂರೂ ಬಿಟ್ಟು ಬರಕೂಡದೆಂದು ಪಾದ್‌ಷಾರವರ ಆಜ್ಞೆಯಾಗಿದೆ."

"ಅಷ್ಟುತಾನೆ ? ಚಲುವಾಜಿ, ಅವನ್ನೆಲ್ಲಾ ಅಲ್ಲೇ ಬಿಟ್ಟು ಎದ್ದು ಬಾ. ಇವರು ನಮ್ಮಲ್ಲಿರುವ ಎಲ್ಲ ವಸ್ತುಗಳನ್ನೂ ಕಿತ್ತುಕೊಳ್ಳಬಹುದು. ಆದರೆ ನಮ್ಮ ಶ್ರದ್ಧಾಭಕ್ತಿಗಳನ್ನು ಯಾರೂ ಕಿತ್ತುಕೊಳ್ಳುವಂತಿಲ್ಲ. ಬಡತನದಲ್ಲಿ ಬಾಳಬೇಕಾಗಿರುವ ನಮಗೆ ಈ ಚಿನ್ನ ಬೆಳ್ಳಿಯ ರಕ್ಷಣೆಯ ಹೊರೆ ಇರಬಾರದು – ಎನಿಸಿದೇಯೋ ಆ ದೇವಿಗೆ. ಸರಿ. ಅವಳ ಇಷ್ಟವಿದ್ದಂತೆ ಆಗಲಿ. ಈ ದೇವರುಗಳು ನಮಗೆ ಒಲಿದಿದ್ದರೆ, ಇಂದಲ್ಲ ನಾಳೆ ಈ ಮೂರ್ತಿಗಳು ತಾವಾಗಿ ನಾವಿದ್ದಲ್ಲಿಗೇ ಬರುತ್ತವೆ. – ನಾವಿನ್ನು ಹೊರಡೋಣ ; ರುದ್ರಿ, ಕುಮಾರರು ನಿದ್ರಿಸುತ್ತಿದ್ದಾರೆ. ಅವರಿಗೆ ಎಚ್ಚರವಾಗದಂತೆ ಎತ್ತಿಕೋ."

ಮಹಾಮಾತೃಶ್ರೀಯವರು ಎದ್ದು ನಿಂತರು. ಇತರ ರಾಣಿಯರೂ ಅವರನ್ನನುಸರಿಸಿ ಎದ್ದು ನಿಂತರು. ಮಾತೃಶ್ರೀಯವರು ಗಂಭೀರ ಧ್ವನಿಯಲ್ಲಿ ಹೇಳಿದರು :

"ಚಾಮುಂಡಿ, ವಾಹನಗಳು ಈ ಬಾಗಿಲ ಹತ್ತಿರಕ್ಕೆ ಬರಲಿ. ವಾಹನ ವ್ಯವಸ್ಥೆ ಸರಿಯಾಗಿದೆಯೆ ನೋಡು."

ಮೀರ್ ಸಾದಿಖ್‌ನ ಮನಸ್ಸಿನಲ್ಲಿ ಗೊಂದಲವೆದ್ದಿತು. ಅವನು ಅಲ್ಲಿಗೆ ಬಂದಾಗಿನಿಂದ ಮಹಾಮಾತೃಶ್ರೀಯವರು ನಡೆದುಕೊಂಡ ಧೀರರೀತಿ ಅವನ ಮೇಲೆ ಪ್ರಚಂಡ ಪರಿಣಾಮವನ್ನುಂಟು ಮಾಡಿತ್ತು. ಯಾವ ವಿರೋಧವೂ ಇಲ್ಲದೆ ತನ್ನ ಕಾರ್ಯ ಇಷ್ಟು ಸುಲಭವಾಗಿ ನೆರವೇರುವುದೆಂದು ಅವನು ನೆನೆದಿರಲಿಲ್ಲ. ಅರಮನೆಯ ಭಂಡಾರದ ಬಾಗಿಲು ಮುಟ್ಟುವ ಹೊತ್ತಿಗೆ ಹತ್ತಾರು ಹೆಣಗಳಾದರೂ ಉರುಳುವುವೆಂದು ಅವನು ನಿರೀಕ್ಷಿಸಿ ಅದಕ್ಕೆ ಸಿದ್ಧನಾಗಿಯೇ ಬಂದಿದ್ದನು. ಆದರೆ ಅವನು ನಿರೀಕ್ಷಿಸಿದ್ದಂತೆ ನಡೆಯಲಿಲ್ಲ. ದೊಡ್ಡ ರಾಣಿಯವರು ಅವನನ್ನು ತಡೆಯಲಿಲ್ಲ; ಅವರ ಪರವಾಗಿ ಯಾರೂ ಅವನ ಕಾರ್ಯವನ್ನು ವಿರೋಧಿಸಲಿಲ್ಲ ! ಮಹಾಮಾತೃಶ್ರೀಯವರಂತೂ ಐಶ್ವರ್ಯದ ಮೇಲಿನ ಎಲ್ಲ ಮೋಹವನ್ನೂ ಕಳೆದುಕೊಂಡ ಫಕೀರರಂತೆ ವರ್ತಿಸಿದರು !—ಅಂಥವರು ಶ್ರದ್ಧಾ ಭಕ್ತಿಗಳಿಂದ ಪೂಜಿಸಿಕೊಂಡಿದ್ದ ದೇವರ ವಿಗ್ರಹಗಳನ್ನು ಕಸಿದುಕೊಳ್ಳುವುದು ಕೆಡಕೆನಿಸಿತು ಅವನಿಗೆ. ಆ ಮೂರ್ತಿಗಳಿಗೆ ಧರಿಸಿದ್ದ ನವರತ್ನದ ಆಭರಣಗಳನ್ನು ವಶಪಡಿಸಿಕೊಂಡರಾಯಿತು; ವಿಗ್ರಹಗಳ ಗೊಡವೆ ಬೇಡ ಎಂಬ ನಿರ್ಣಯ ಅವನ ಮನಸ್ಸಿನಲ್ಲಿ ರೂಪುಗೊಳ್ಳುತ್ತಿರುವಂತೆ, ಎಳೆಯ ಕೂಸು ಕಿಟ್ಟನೆ ಕಿರುಚಿದ ಸದ್ದು ಮೀರ್ ಸಾದಿಖ್‌ನ ಮನಸ್ಸನ್ನು ಥಟ್ಟನೆ ಬಹಿರ್ಗತಮಾಡಿತು. ಅವನು ಒಡನೆಯೇ ಸದ್ದು ಬಂದ ಕಡೆಗೆ ತಿರುಗಿ ನೋಡಿದನು.–ಆ ದೃಶ್ಯ ಅವನಿಗೆ ಬೇಸರ ವನ್ನುಂಟು ಮಾಡಿತು. ಅವನು ನಿಂತಿದ್ದಲ್ಲಿಂದಲೇ ಗರ್ಜಿಸಿದ :

"ಏನು ಅದು ಖಾಸಿಂ ?"

"ಈ ಮಗುವಿನ ಕೈಯಲ್ಲಿ ಚಿನ್ನದ ಬಳೆಗಳಿವೆ ಮೀರ್ ಸಾಹೇಬ್"

"ಕುಮಾರರು ನಿದ್ರಿಸುತ್ತಿದ್ದರು. ಇವ ಅವರ ಕೈ ಜಗ್ಗಿ ಎಳೆದ. ನೋವಾಯಿತು. ಅರೆನಿದ್ದೆಯಲ್ಲಿ ಎಚ್ಚರವಾಯಿತು. ಕೂಗಿಕೊಂಡರು." ಎಂದು ವಿವರಿಸಿದಳು ರುದ್ರಿ.

"ಗದ್ದಾ– ತೊಲಗು ಇಲ್ಲಿಂದಾಚೆ."

"ಕೈಯಲ್ಲಿ ಚಿನ್ನದ ಬಳೆ...."

"ನಿನ್ನ ತಲೆ; ತೊಲಗು ಇಲ್ಲಿಂದಾಚೆ. ಯಾರು ನಿನಗೆ ಹೇಳಿದ್ದು, ಮಲಗಿಕೊಂಡಿದ್ದ ಆ ಮಗುವಿನ ಕೈ ಬಳೆ ಕೀಳಲು ! ನೀವೆಂಥಜನ – ಜಾನವಾರ್ ಗಳು ಮೇಲು !"

ಖಾಸಿಂ ಹಿಂದಕ್ಕೆ ಸರಿದು ನಿಂತು ತಲೆಬಾಗಿಸಿದ.

ಮಹಾಮಾತೃಶ್ರೀಯವರು ರುದ್ರಿಯ ಕಡೆ ತಿರುಗಿ ಹೇಳಿದರು.

"ಕುಮಾರರು ಅರೆನಿದ್ದೆಯಲ್ಲಿದ್ದಿದ್ದರಿಂದ ರಚ್ಚೆಮಾಡುತ್ತಿದ್ದಾರೆ. ಅವರನ್ನೆತ್ತಿಕೊಂಡು ತೆರೆಯ ಹಿಂದೆ ಹೋಗಿ ಸಮಾಧಾನಪಡಿಸು."

ರುದ್ರಿ ತೆರೆಯ ಹಿಂದೆ ಹೋದಳು.

ನಾದಿರ್ ಹೇಳಿದ :

"ರಾಣೀ ಸಾಹಿಬಾ, ನೀವೆಲ್ಲರೂ ಇನ್ನು ಇಲ್ಲಿಂದ ಹೊರಡಬಹುದು. ನಿಮ್ಮ ಪೂಜಾ ವಿಗ್ರಹಗಳನ್ನೂ ಇಲ್ಲಿರುವ ಇತರ ಎಲ್ಲ ಸಾಮಾನುಗಳನ್ನೂ ತೆಗೆದುಕೊಂಡು ಹೋಗಬಹುದು."

ಚಾಮುಂಡಿ ಒಳಗೆ ಬಂದು ಬಿನ್ನವಿಸಿಕೊಂಡಳು :

"ವಾಹನಗಳು ತೆರೆ ಕಟ್ಟಿ ಸಿದ್ಧವಾಗಿವೆ ತಾಯಿ ; ಬಾಗಿಲಿಗೆ ಬಂದು ನಿಂತಿವೆ."

ನಾದಿರ್ ಚಾಮುಂಡಿಯ ಕಡೆಗೆ ತಿರುಗಿ ಹೇಳಿದ :

"ಈ ಬಟ್ಟೆಬರೆಗಳು, ಈ ತೂಗುತೊಟ್ಟಿಲು, ಈ ವಿಗ್ರಹಗಳು, ಅವುಗಳ ಅಲಂಕಾರದ ಆಭರಣ– ಎಲ್ಲ ಗಾಡಿಗಳಿಗೆ ಸಾಗಿಸಿ. ಆ ಶಸ್ತ್ರಗಳು ಮಾತ್ರ ಇಲ್ಲಿರಲಿ."

ಮಹಾಮಾತೃಶ್ರೀಯವರು ನುಡಿದರು :

"ಚಲುವಾಜಿ, ಪೂಜಾವಿಗ್ರಹಗಳನ್ನು ಮಾತ್ರ ತೆಗೆದುಕೊಂಡು ಮಡಿಪೆಟ್ಟಿಗೆಯಲ್ಲಿಡು. ಆ ಆಭರಣಗಳು ಬೇಡ. ಅವು ಸರ್ವಾಧಿಕಾರಿಗಳಲ್ಲೇ ಇರಲಿ. ಅವು ನಮ್ಮಲ್ಲಿದ್ದರೆ, ಅವನ್ನು ಪಡೆಯಲು ಇವರು ಮತ್ತೆ ನಮ್ಮಲ್ಲಿಗೆ ಬರಬೇಕಾದೀತು. ಚಾಮುಂಡಿ, ಉಳಿದ ಸಾಮಾನುಗಳನ್ನು ಬಂಡಿಗಳಿಗೇರಿಸು."

ಮಹಾಮಾತೃಶ್ರೀಯವರು ಭೈರಿ, ಮಂಗಳಿಯರ ಕಡೆಗೆ ಕೈ ತೋರಿಸಿ ಹೇಳಿದರು :

"ಅವರಿಬ್ಬರೂ ನಮ್ಮ ದಾಸಿಯರಾಗಿದ್ದವರು. ನಾವೇ ಅವರ ಶಸ್ತ್ರ ವಿಸರ್ಜನೆ ಮಾಡಿಸಿದ್ದೇವೆ. ಅವರ ಮೈಮೇಲಿರುವ ಚೂರು ಪಾರು ಆಭರಣಗಳು ಅವರ ಸ್ವಂತದ್ದು. ಅವರಿಬ್ಬರೂ ಅರಮನೆಯ ಮಹಾದ್ವಾರದವರೆಗೆ ನಮ್ಮ ವಾಹನಗಳೊಂದಿಗೆ ಬರುತ್ತಾರೆ. ಆಮೇಲೆ ಅವರ ಪಾಡಿಗೆ ಅವರು ಹೋಗುತ್ತಾರೆ."

ನಾದಿರ್ ಈ ಸಲಹೆಯನ್ನು ವಿರೋಧಿಸಲಿಲ್ಲ. ಸುಮ್ಮನಿದ್ದನು.

ಸಾಮಾನುಗಳನ್ನೆಲ್ಲಾ ಗಾಡಿಗೆ ಸಾಗಿಸಿದ್ದಾಯಿತು. ಚಾಮುಂಡಿ ಮಹಾ ಮಾತ್ಯಶ್ರೀಯವರ ಮುಂದಿನ ಆಜ್ಞೆಗಾಗಿ ಕಾದು ನಿಂತಳು.

"ಚಾಮುಂಡಿ, ನಿನ್ನಲ್ಲಿರುವ ಶಸ್ತ್ರವನ್ನು ತೆಗೆದು ಅಲ್ಲಿ ಹಾಕು– ನಮ್ಮೊಡನೆಯೇಯಿರು. – ರುದ್ರೀ—"

"ಬಂದೆ ತಾಯಿ."

ತಮ್ಮೊಡನೆ ಬರುವಂತೆ ರಾಣಿಯರಿಗೆ ಸಂಜ್ಞೆಮಾಡಿ ಮಹಾಮಾತ್ಯಶ್ರೀ ಯವರು ಮುಂದೆ ಹೊರಟರು.

ಮೀರ್ ನಾದಿರ್ ಮತ್ತು ಅವನ ಪರಿವಾರ ಮಹಾಮಾತ್ಯಶ್ರೀಯವರನ್ನೂ ಅವರ ಪರಿವಾರವನ್ನೂ ಹಿಂಬಾಲಿಸಿತು.

ಪರಿವಾರವೆಲ್ಲಾ ಗಾಡಿಗಳಲ್ಲಿ ಕುಳಿತ ಮೇಲೆ ಮಹಾಮಾತ್ಯಶ್ರೀಯವರು ತಮ್ಮ ಗಾಡಿಯ ಮೆಟ್ಟಿಲಮೇಲೊಂದು ಕಾಲಿಟ್ಟು ಗಾಡಿ ಹತ್ತುತ್ತಾ ಅರಮನೆಯ ಕಡೆಗೆ ಒಮ್ಮೆ ದೃಷ್ಟಿ ಹೊರಳಿಸಿದರು. ಅವರ ಕಣ್ಣಿನಲ್ಲಿ ಥಟ್ಟನೆ ನೀರು ಕೂಡಿತು. ದೃಷ್ಟಿ ಮಂಜಾಯಿತು. ಒಡನೆಯೇ ಮೊಗದಿರುಹಿ ಸರ್ರನೆ ವಾಹನವನ್ನೇರಿ ಕುಳಿತರು. ಭೈರಿ ಗಾಡಿಯ ತೆರೆಯನ್ನು ಸರಿಪಡಿಸಿದಳು. ಗಾಡಿ ದಡದಡನೆ ಸರಿಯಿತು.

§

"—ಕೇಳಿದಿರಾ ದಿವಾನರೇ. ನಾನು ಹೇಳಿದಾಗ ಹಿಂದೆ ಮುಂದೆ ನೋಡುತ್ತಾ ಅನುಮಾನಿಸಿದಿರಿ. ನಿಮಗೆ ಇಷ್ಟವಿಲ್ಲದಿದ್ದರೆ ನೀವು ಈ ಕೆಲಸಕ್ಕೆ ಹೋಗುವುದು ಬೇಡ, ನಾದಿರ್ ಹೋಗಲಿ ಎಂದಾಗ, 'ಅವನಿನ್ನೂ ಅರಿಯದ ಹುಡುಗ' ಎಂದ ತಲೆ ಕೆರೆದುಕೊಂಡಿರಿ! ನೋಡಿ ಅವನು ಕೆಲಸ ಹೇಗೆ ಸಾಧಿಸಿಕೊಂಡು ಬಂದಿದ್ದಾನೆ!–ಒಂದು ಸಣ್ಣ ಗಲಭೆಗೆ ಕೂಡ ಅವಕಾಶ ಕೊಡದೆ, ಅರಮನೆಯಲ್ಲಿ ಒಂದು ಚೂರು ಸಾಮಾನನ್ನೂ ಬಿಡದಂತೆ ಸಾಗಿಸಿದ್ದಾನೆ. ನೋಡಿದಿರಾ ದಿವಾನರೇ. ಶಾಭಾಸ್! ಶಾಭಾಸ್ ನಾದೀರ್!"

"ಇನ್ನೊಂದು ಮಾತು ಹೇಳುವುದಿದೆ, ಜಹಾಪನ."

"ಧೈರ್ಯವಾಗಿ ಹೇಳು ನಾದಿರ್–"

"ಅರಮನೆಯಲ್ಲಿದ್ದ ಚಿನ್ನ, ಬೆಳ್ಳಿ, ನಗ, ನಾಣ್ಯ, ಪಾತ್ರೆ, ಪರಟಿ, ಬಟ್ಟೆಬರೆ ಎಲ್ಲ ಸ್ವಾಧೀನಪಡಿಸಿಕೊಂಡಿದ್ದೂ ಆಯಿತು. ಅದನ್ನು ಪಾದ್‌ಷಾರವರ

ತೋಷೀಖಾನೆಗೆ ಸಾಗಿಸಿದ್ದೂ ಆಯಿತು. ಅದೇರೀತಿ ರಾಜರ ಜನಾನದವರನ್ನು ಕಾಂತರಾಯರ ಮನೆಗೆ ಸಾಗಿಸಿದ್ದೂ ಆಯಿತು."

"ಅಲ್ಲಿ ಅವರಿಗೆ ನಾವು ಹೇಳಿದ ರೀತಿ ವ್ಯವಸ್ಥೆ ಮಾಡಿದ್ದೀ ತಾನೆ!"

"ಚಾಚೂ ತಪ್ಪದೆ. ಪಾತ್ರೆಗಳ ಬದಲು ಮಡಿಕೆ ಕುಡಿಕೆ; ಮಂಚ ಸುಪ್ಪತ್ತಿಗೆಗಳ ಬದಲು ನೆಲ, ಚಾಪೆ; ಬೆಳಗು ಸಂಜೆ ಪಡಿಭತ್ಯ ಒಂದೊಂದು ಹೊತ್ತಿನ ಊಟಕ್ಕೆ. ಮನೆಯ ಸುತ್ತ ನಮ್ಮ ಸಿಪಾಯಿಗಳ ಕಾವಲು, ಹಗಲು ರಾತ್ರಿ ಏಕಪ್ರಕಾರವಾಗಿ."

"ಭೇಷ್ – ಆ ಮುದುಕಿ ಮಹಾತಂತ್ರಿ. ದೊಡ್ಡ ನವಾಬರ ಆಡಳಿತದ ಕಾಲದಿಂದ ಒಂದಲ್ಲ ಎರಡಲ್ಲ ನಾಲ್ಕು ಸಲ ನಮ್ಮ ಮೇಲೆ ದಂಗೆ ಮಾಡಿಸಿದ್ದಾಳೆ. ಇಂಗ್ಲಿಷ್ ಸೈನ್ಯ ನಮ್ಮ ಕೋಟೆಯ ಬಾಗಿಲವರೆಗೆ ಬಂದು ನಿಲ್ಲುವಂತೆ ಮಾಡಿದವಳೂ ಅವಳೇ. ಅವರ ಫಲ ಅನುಭವಿಸಲಿ.–ನಾದಿರ್, ಆ ಮುದುಕಿಯ ಮಾತು ಯಾವುದೂ ನಂಬಬೇಡ. ತುಂಬ ಹುಷಾರಾಗಿರು.–ತಿಳಿಯಿತೆ?"

"ತಿಳಿಯಿತು ಜಹಾಪನಾ. ನಾನು ವಿಜ್ಞಾಪಿಸಿಕೊಳ್ಳಬೇಕಾದ ವಿಚಾರ..."

"ಹೇಳು."

"ಅರಮನೆಯಲ್ಲಿ ಇನ್ನೂ ಕೆಲವು ವಸ್ತುಗಳು ಉಳಿದಿವೆ. ಅವನ್ನು...."

"ಏನು ಅವು?"

"ಹಿಂದಿನ ದೊರೆಗಳು ಉಪಯೋಗಿಸುತ್ತಿದ್ದ ಸಿಂಹಾಸನ; ಒಂದೆರಡು ಕೋಣೆಗಳ ತುಂಬ ಇಟ್ಟಿರುವ ಪುಸ್ತಕಗಳ ಕಟ್ಟುಗಳು."

"ಏನು ಮಾಡೋಣ ದಿವಾನರೆ?"

"ಪಾದ್‌ಷಾರವರ ಅಪ್ಪಣೆ ಆದಂತೆ."

"ನಿಮ್ಮ ಸಲಹೆ ಹೇಳಿ. ಕೊನೆಯ ನಿರ್ಣಯ ನಮ್ಮದು."

"ಏನು ಮಾಡೋಣ, ನಾದಿರ್."

"ನೀವೇ ಹೇಳಿ ದಿವಾನ್ ಸಾಹೇಬರೆ."

"ಸಿಂಹಾಸನದಿಂದ ಏನೂ ಉಪಯೋಗವಿಲ್ಲ. ಮರದ ಮೇಲೆ ದಂತದ ರೇಕು ಹೊದಿಸಿದೆ. ಅದರ ಮೇಲೆ ತುಂಬ ಹಳೇ ಮಾಲು. ಬೆಲೆಯ ದೃಷ್ಟಿಯಿಂದಲೂ ಕೀಳು...."

"ಸರಿ ದಿವಾನರೆ,– ನಾದಿರ್ ಆ ಸಿಂಹಾಸನವನ್ನು ಅರಮನೆಯಿಂದ

ತೆಗೆಸಿ ಮುರುಕು ಹರುಕು ಸಾಮಾನು ತುಂಬುವ ಯಾವುದಾದರೂ ಕೋಣೆಯಲ್ಲಿ ಹಾಕಿಸು. ಆಮೇಲೆ ನೋಡೋಣ."

"ಪುಸ್ತಕಗಳು."

"ಏನಿದ್ದೀತು ಅವುಗಳಲ್ಲಿ– ಕಾಫಿರ್ ದೇವರುಗಳ ಚರಿತ್ರೆ!– ಛೀ!– ಅವನ್ನು ನಮ್ಮ ಖಾಸಾ ತಬೇಲಿಗೆ ಸಾಗಿಸಿಬಿಡಿ. ಕುದುರೆಗಳಿಗೆ ಹುರುಳಿ ಬೇಯಿಸುವ ಒಲೆಗಳಿಗೆ ಕಟ್ಟಿಗೆಗೆ ಬದಲು ಉಪಯೋಗಿಸಿಬಿಡಿ!– ಹ್ಹ! ಹ್ಹ! ಹ್ಹ! ಹೇಗಿದೆ ನಮ್ಮ ಆಜ್ಞೆ!"

"ತಮ್ಮ ಆಜ್ಞೆಯನ್ನು ಜಾರಿಮಾಡುತ್ತೇನೆ, ಜಹಾಪನಾ."

"ದಿವಾನರೇ, ಈ ಹುಡುಗ, ನಾದಿರ್ ತುಂಬಾ ಚಾಲೂಕು. ನಮ್ಮ ಬಾಯಿಂದ ಮಾತು ಹೊರ ಬೀಳುವುದೇ ತಡ. ನಮ್ಮ ಅಭಿಪ್ರಾಯ ಗ್ರಹಿಸಿ ಬಿಡುತ್ತಾನೆ!"

"ಆದ್ದರಿಂದಲೇ ಅವನು ಪಾದ್‌ಷಾರವರ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ."

"ನಾನು ಹೊರಡುವುದಕ್ಕೆ ಪಾದ್‌ಷಾರವರು ಅನುಜ್ಞೆ ಕೊಡಬೇಕು."

"ಹೊರಡು ನಾದಿರ್. ನಮ್ಮ ಹೊಗಳಿಕೆ ದೊರೆಯಿತೆಂದು ಮೈ ಮರೆ ತೀಯೆ! ಹಾಗಾದರೆ ನಿನ್ನ ಮೈಮೂಳೆ ಒಂದೂ ಉಳಿಯುವುದಿಲ್ಲ. ಹುಷಾರ್. ಆ ಮುದುಕಿ ಸೈತಾನ್ ಕಿ ಬೇಟಿ. ತಪ್ಪಿಸಿಕೊಂಡುಬಿಟ್ಟಾಳು. ಕಾವಲು ಬಲ ವಾಗಿರಲಿ".

"ಅಪ್ಪಣೆ...."

"ಇನ್ನೇನಾದರೂ ಬಿನ್ನವಿಸಿಕೊಳ್ಳುವುದಿದೆಯೆ ದಿವಾನರೆ?"

"ನಾದಿರ್ ಬುದ್ಧಿವಂತ. ಆದರೆ ಅವನು ಒಂದು ವಿಚಾರ ಮರೆತಂತೆ ಕಾಣುತ್ತದೆ...."

"ಯಾವ ವಿಚಾರ?"

"ಅರಮನೆ ಖಾಲಿ ಆಯಿತು.– ಅದನ್ನೇನು ಮಾಡುವುದು?"

"ಅಂದರೆ?"

"ಅದಕ್ಕೆ ಸುಣ್ಣ ಬಣ್ಣ ಬಳೆಸಿ ನಮ್ಮ ವಾಸಕ್ಕಿಟ್ಟುಕೊಳ್ಳಬೇಕು...."

"ಹೂಂ."

"ಆದರದು ಅಷ್ಟು ಹಿತಕಾರಿಯಲ್ಲವೇನೋ?"

"ಯಾಕೆ?"

“ ಕಾಫಿರ್ ಜನ ಅದನ್ನು ನೋಡಿದಾಗಲೆಲ್ಲಾ ಅವರ ರಾಜರನ್ನು ನೆನೆಸಿಕೊಳ್ಳಬಹುದು....”

“ ನಿಜ. ಅದನ್ನು ನೆಲಮಟ್ಟ ಮಾಡಿಸಿಬಿಟ್ಟರಾಯಿತು !”

“ ವ್ಯಕ್ತವಾಗಿ ಹಾಗೆ ಮಾಡುವುದು—”

“ ಒಳ್ಳೆಯದಲ್ಲ ಎನ್ನುತ್ತೀಯೋ ? ಹಾಗಾದರೆ ಮತ್ತೇನು ಮಾಡೋಣ ? ಅವನ್ನಾದರೂ ಹೇಳು.”

“ ಒಳಗೋಡೆಗಳನ್ನೆಲ್ಲಾ ಒಡೆಸಿಹಾಕಿ, ಯಾವುದಾದರೊಂದು ರಾತ್ರಿ ಮಾಳಿಗೆಯಲ್ಲಿ ಹತ್ತಾರು ತೂತು ಹೊಡೆಸಿಬಿಡೋಣ. ನಾಲ್ಕು ಹದ ಒಳ್ಳೆ ಮಳೆ ಬಂದರೆ ಸಾಕು, ಮಳೆಯೇ ನಮ್ಮ ಕೆಲಸ ಮಾಡಿಬಿಡುತ್ತದೆ!”

“ ಭಲೆ, ಮೀರ್ ಸಾದಕ್‌ನ ಬುದ್ಧಿ ಅಂದರೆ ಹೀಗೆ! ಕೋಲು ಮುರಿಯಬಾರದು, ಹಾವು ಸಾಯಬೇಕು !”

“ ಈ ಅಲ್ಪ, ಅಷ್ಟೊಂದು ಹೊಗಳಿಕೆಗೆ ಪಾತ್ರನಲ್ಲ.”

“ ಬಲ್ಲೆ ಬಿಡು ನಿನ್ನ ಕಳ್ಳ ವಿನಯ.”

“ ಪಾದ್‌ಷಾರವರು ನನ್ನ ವಿಚಾರವಾಗಿ ಅನವಶ್ಯಕವಾದ ಅನುಮಾನವನ್ನಿಟ್ಟುಕೊಂಡಿದಾರೆ.”

“ ಅದರಿಂದ ನಿನಗೇನೂ ನಷ್ಟವಾಗಿಲ್ಲವಲ್ಲ. ನಮ್ಮ ಎಚ್ಚರಿಕೆಯಲ್ಲಿ ನಾವಿದ್ದರೆ ತಪ್ಪೇನು ?”

“ ಪಾದ್‌ಷಾರವರ ಚಿತ್ತ. ಈ ಅಲ್ಪ ಹೇಳುವುದಾದರೂ ಏನಿದೆ ?”

“ಅಂದಮೇಲೆ ನೀನು ಹೇಳುವುದೇನೋ ಇದ್ದೇ ಇದೆ. ಅದಕ್ಕೇ ಈ ಪೀಠಿಕೆ.”

“ ಏನಾದರೂ ಹೇಳಲೇಬೇಕೆಂದು ಪಾದ್‌ಷಾರವರು ಸೂಚಿಸಿದ ಮೇಲೆ ಏನನ್ನಾದರೂ ಹೇಳಲೇಬೇಕಾದದ್ದು ದಿವಾನನಾದವನ ಕರ್ತವ್ಯ.”

“ ಎಂಥ ಕರ್ತವ್ಯಶೀಲತೆ !”

“ ನನ್ನ ಕೆಲಸ ನಾನು ಸಮರ್ಪಕವಾಗಿ ಮಾಡಿಕೊಂಡು ಹೋಗುತ್ತಿದ್ದೇನೆಂದು ನನ್ನ ನಂಬಿಕೆ. ಆ ಧೈರ್ಯದಿಂದಲೇ ತಮ್ಮಲ್ಲಿ ಒಂದು ಮಾತು ಬಿನ್ನವಿಸಿಕೊಳ್ಳುತ್ತಿದ್ದೇನೆ—”

“ ಆಗಲಿ.”

“ ಅಂತೂ ಕಾಫಿರ್ ರಾಜವಂಶದ ಕತೆ ಮುಗಿಯಿತಲ್ಲ ಇಲ್ಲಿಗೆ. ಪಾದ್‌ಷಾರವರು ಇನ್ನು ನಿರ್ಬಾಧಕವಾಗಿ ವ್ಯಾಘ್ರಾಸನವನ್ನೇರಬಹುದು.”

"ನಿರ್ಬಾಧಕ! ಏನು ಮೀರ್‌ಸಾದಕ್ ನೀನೂ ಈ ಮಾತು ಹೇಳು ತ್ತೀಯಾ! ನಾವು ನಿರ್ಬಾಧಕವಾಗಿ ವ್ಯಾಘ್ರಾಸನವನ್ನೇರಲು – ಸಾಧಿಸ ಬೇಕಾದದ್ದು ಇನ್ನೂ ತುಂಬಯಿದೆ!"

"ಇಂಗ್ಲಿಷರ ವಿಚಾರತಾನೆ! – ಪಾದ್‌ಷಾರವರು ಈಗಾಗಲೇ ಉದ್ದೇಶಿ ಸಿರುವ ಯೋಜನೆಗಳು ಕೈಗೂಡಿದರೆ ಅದೆಷ್ಟರ ಕೆಲಸ!"

"ಕೈಗೂಡಿದರೆ! – ಅದೆಷ್ಟರ ಕೆಲಸ! – ಕೈಗೂಡಬೇಕು! ನಾವು ಇಸ್ಲಾಂ ಧರ್ಮ ಪ್ರಚಾರಕ್ಕೆ ಪೈಗಂಬರ್‌ರವರಿಗಿಂತ ಹೆಚ್ಚು ಸೇವೆ ಸಲ್ಲಿಸಿರುವುದು ನಿಜವಾದರೆ, ನಾವು ಅಲ್ಲಾನ ಪೈಗಂಬರ್ ಆಗಿರುವುದು ನಿಜವೇ ಆದರೆ...."

"ತಾವು, ಅಲ್ಲಾನ – ಪೈಗಂಬರ್!"

"ನಿನಗೂ ಸಂದೇಹವೇ ಮೀರ್‌ಸಾದಕ್?"

"ತಾವು ಅಲ್ಲಾನ ಪೈಗಂಬರ್ ಎಂದೆ; – ಸಂದೇಹಕ್ಕೆ ಕಾರಣವೇ ಇಲ್ಲವಲ್ಲ. ಎಲ್ಲ ಪ್ರತ್ಯಕ್ಷವಾಗಿ ಕಂಡದ್ದೇ. – – ಖಾವಿಂದರು ವಿಶ್ರಮಿಸಿಕೊಳ್ಳಬೇಕು. ಈಗಾಗಲೇ ಹೊತ್ತು ಮೀರಿತು."

"ಮಾತು, ಬುದ್ಧಿ, ಚರ್ಯೆ ಎಲ್ಲದರಲ್ಲೂ ನೀನು ತುಂಬಾ ಚುರುಕು ಮೀರ್‌ಸಾದಕ್."

"ಎಲ್ಲ ಪಾದ್‌ಷಾರವರ ಅನುಗ್ರಹ – ಅಪ್ಪಣೆಯಾದರೆ ನಾನಿನ್ನು –" ಎನ್ನುತ್ತಾ ಮೀರ್‌ಸಾದಕ್ ಎದ್ದು ಸುಲ್ತಾನರಿಗೆ ಕುರ್ಬಾನೀಸ್ ಮಾಡಿದ. ಅವನು ಹೋಗಬಹುದೆಂದು ಸುಲ್ತಾನರು ಕೈಸಂಜ್ಞೆಮಾಡಿ ತಾವೂ ಪೀಠ ದಿಂದೆದ್ದರು.

§

"ಅತ್ತಮ್ಮ, ನನಗೇಕೋ ಭಯವಾಗುತ್ತಿದೆ. ಚಾಮುಂಡಿ ಬೆಳಗಿನ ಜಾಮ ದಲ್ಲೆದ್ದು ಹೊಳೆಯ ಕಡೆಗೆ ಹೋದವಳು ಇನ್ನೂ ಹಿಂದಿರುಗಿ ಬಂದಿಲ್ಲವಲ್ಲ – ಹೊತ್ತು ಒಂದಾಳುದ್ದ ಏರಿದ್ದರೂ."

ಬಂಧನ, ಕಿರುಕುಳ, ಬಡತನಗಳಿಗೆ ಸಿಕ್ಕಿ ನೊಂದು ನರಳುತ್ತಿದ್ದ ಮಹಾ ಮಾತೃಶ್ರೀಯವರು ಈ ಮಾತು ಕೇಳಿ ತುಂಬ ಕಳವಳಕ್ಕೀಡಾದರು.

"ಚಲುವಾಜಿ, ಅವಳು ಇಲ್ಲಿಂದ ಹೋಗುವಾಗ, ಬರುವುದು ತಡವಾದೀತು ಎಂದು ಹೇಳಲಿಲ್ಲವೆ?"

"ಇಲ್ಲ ಅತ್ತವ್ಮ; ಅವಳು ಎದ್ದು ಹೋದಾಗ ನನಗೆ ಎಚ್ಚರವಾಗಿತ್ತು.–ನಿನ್ನೆ ರಾತ್ರಿ ಕೂಡ ಅವಳು ಅಂಥ ಸೂಚನೆ ಕೊಡಲಿಲ್ಲ."

"ನಿನಗೆ ನಿದ್ರೆ ಹತ್ತಿದೆಯೆಂದು ಭಾವಿಸಿ, ರುದ್ರಿಗೆ ಏನಾದರೂ ಹೇಳಿದಾಳೇನೋ ?"

"ವಿಚಾರಿಸಿದೆ. ಏನೂ ಹೇಳಿಲ್ಲ. 'ಚಾಮುಂಡಿ ಎದ್ದು ಹೋದದ್ದು ಕೂಡ ನನಗೆ ಗೊತ್ತಾಗಲಿಲ್ಲ' ಎಂದಳು."

"ಏನಾಗಿದ್ದೀತು ? ಅವಳ ವಿಚಾರವಾಗಿ ಸುಲ್ತಾನನ ಕಡೆಯವರಿಗೆ ಏನಾದರೂ ಅನುಮಾನ ಹುಟ್ಟಿರಬಹುದೆ ?–ಹುಟ್ಟಿ ಅವಳನ್ನು ಬಂಧಿಸಿರಬಹುದೆ ?"

"ಹೇಳುವುದು ಹೇಗೆ ಅತ್ತಮ್ಮ ? ಅವಳು ಹಿಂದಕ್ಕೆ ಬಂದರೆ ಸಂಗತಿಯೇನು ತಿಳಿದೀತು. ಅನುಮಾನ ಹುಟ್ಟಲು ಅವಕಾಶವಾಗಿದ್ದರೆ ಮುಂದೆ ಅಂಥಾ ಅಚಾತುರ್ಯ ಆಗದಂತೆ ನೋಡಿಕೊಳ್ಳಬಹುದು."

"ನಿಜ. ಒಂದು ವೇಳೆ—"

"ಅವಳು ಬರದೇ ಇದ್ದರೆ ಅಂತೀರಾ—"

"ಹಾಗಾದರೆ ಅಲ್ಲಿಗೆ ನಮ್ಮ ವ್ಯವಹಾರ ಮುಗಿದ ಹಾಗೆಯೇ."

"ಹೌದು ಅತ್ತಮ್ಮ. ಅವಳು ಬರದೆಯಿದ್ದರೆ ಅವಳಿಗೆ ಏನಾಯಿತೆಂಬುದು ನಮಗೆ ತಿಳಿಯುವ ಹಾಗೂ ಇಲ್ಲ.–ಈ ವಿಚಾರ ನಾವು ಯಾರಲ್ಲಿಯೂ ಪ್ರಸ್ತಾಪಿಸುವ ಹಾಗೂ ಇಲ್ಲ. ಹಾಗಾದರೆ ಮುಂದೆ—?"

"ನನಗೇನೂ ಹೊಳೆಯುತ್ತಿಲ್ಲ.–ಆ ಚಾಮುಂಡಾಂಬಿಕೆಯೇ ದಾರಿ ತೋರಿಸಬೇಕು. ಅಷ್ಟೇ !"

"ಅಬ್ಬಾ !–ಅವಳೇ ಬಂದಳಲ್ಲ ಅತ್ತಮ್ಮ !–ನಗುಮೊಗವಾಗಿದಾಳೆ ಅತ್ತಮ್ಮ. ಅಚಾತುರ್ಯವೇನೂ ನಡೆದ ಹಾಗಿಲ್ಲ....ಬಾ, ಚಾಮುಂಡಿ, ಎಲ್ಲಿ ಹೋಗಿದ್ದೆ ಇಷ್ಟು ಹೊತ್ತು ?"

"ನಮ್ಮ ಸೇವೆಗಾಗಿ ಇರುವವಳು ನೀನೊಬ್ಬಳು. ನೀನೂ ಹೀಗೆ ಹೇಳದೆ ಕೇಳದೆ ಹೋಗಿ ಬಿಟ್ಟರೆ ?"

"ತಪ್ಪಾಯಿತು ತಾಯಿ. ಮೊದಲೇ ಸನ್ನಿಧಾನದಲ್ಲಿ ಬಿನ್ನವಿಸಿಕೊಳ್ಳಲು ಸಾಧ್ಯವಾಗಲಿಲ್ಲ."

"ಇನ್ನುಮೇಲೆ ಹೀಗೆ ಮಾಡಬೇಡ."

"ಅಪ್ಪಣೆ ತಾಯಿ."

ಬಾಯಿಗಳು ಗಟ್ಟಿಯಾಗಿ ಮಾತನಾಡುತ್ತಿದ್ದುವಾದರೂ ಮುಖ, ಕೈ, ಕಣ್ಣುಗಳು ಸಂಜ್ಞೆಗಳ ಮೂಲಕ ಬೇರೆ ಸಂಭಾಷಣೆ ನಡೆಸಿದ್ದುವು: "ಮುಖ್ಯವಾದ ಸುದ್ದಿ ಅರಿಕೆ ಮಾಡಿಕೊಳ್ಳುವುದಿದೆ. ಆ ಸಂಬಂಧದಲ್ಲೇ ತಡವಾದದ್ದು. ವಿಚಾರ ತುಂಬಾ ರಹಸ್ಯವಾದದ್ದು."

ಚಲುವಾಜಮ್ಮಣ್ಣಿಯವರು ಸಂದರ್ಭವನ್ನು ಗ್ರಹಿಸಿ ಕೊಟಡಿಯ ಕದವನ್ನು ಮುಚ್ಚಿಕೊಂಡು ಹೊರಕ್ಕೆ ಹೋಗಿ ಬಾಗಿಲಿನಲ್ಲಿ ನಿಂತರು.

ಚಾಮುಂಡಿ ಪಿಸುಮಾತಿನಲ್ಲಿ ಹೇಳಿದಳು:

"ನಾನು ಹೊಳೆಯ ದಂಡೆಗೆ ಹೋಗುವ ಹೊತ್ತಿಗೆ ಭೈರಿ, ಚನ್ನವ್ವ, ಕಾಳವ್ವ ಮೂವರೂ ಮೂರು ಹಾದಿಯಲ್ಲಿ ನಿಂತು ನನಗಾಗಿ ಕಾಯುತ್ತಿದ್ದರು."

"ನಿನಗಾಗಿ ಕಾಯುತ್ತಿದ್ದರೆ?"

"ಹೌದು ತಾಯಿ. ನಾನು ಅಷ್ಟು ದೂರದಲ್ಲಿ ಬರುತ್ತಿದ್ದುದನ್ನು ಕಂಡವಳೆ ಚನ್ನವ್ವ ಬಿರಬಿರನೆ ನನ್ನ ಕಡೆಗೆ ನಡೆದು ಬಂದು, ನನ್ನನ್ನು ದಾಟಿಕೊಂಡು ಹೋಗುತ್ತ "ಆ ಮೂಲೆಯಲ್ಲಿ ಭೈರಿ ಕಾದಿದಾಳೆ" ಎಂದು ಹೊರಟೇಹೋದಳು."

"ಅವಳೇನಾದರೂ ಸುದ್ದಿ?"

"ಹೌದು ತಾಯಿ. ಅದಕ್ಕೇ ತಡವಾದದ್ದು."

"ವಿಚಾರ?"

"ಚಿಕ್ಕನಾಯಕನಹಳ್ಳಿ ದಾಸರು ಬಂದಿದ್ದಾರೆ."

"ನೀನವರನ್ನು ಕಂಡೆಯೇನು?"

"ಕಂಡೆ ತಾಯಿ."

"ಯಾವಾಗ ಬಂದರು? ಎಲ್ಲಿದ್ದಾರೆ?"

"ಬಂದು ಮೂರು ದಿನವಾಯಿತಂತೆ."

"ಮೂರು ದಿನವಾಯಿತೆ!"

"ಹೌದು ತಾಯಿ. ಇಲ್ಲಿ ನಡೆದಿದ್ದನ್ನೆಲ್ಲಾ ಕೇಳಿದ ಮೇಲೆ ಕೋಟೆಯೊಳಕ್ಕೆ ಬರಬಾರದೆಂದು ಯೋಚಿಸಿ, ಪಹರ್ ಗಂಜಾಂನಲ್ಲಿ ಅವರ ಗುರುತಿನವರೊಬ್ಬರ ಮನೆಯಲ್ಲಿ ಬಿಡಾರಮಾಡಿದರಂತೆ."

"ಹಾಗೇನು? ಆಮೇಲೆ?"

"ತಾವು ಬಂದಿರುವ ಸುದ್ದಿಯನ್ನು ಹೇಗಾದರೂ ಸನ್ನಿಧಾನಕ್ಕೆ ತಿಳಿಸಬೇಕು

ಎಂದು ತಕ್ಕ ಆಸಾಮಿಗಾಗಿ ಎರಡು ದಿನ ಅಲ್ಲಿಲ್ಲಿ ಹುಡುಕಾಡಿದರಂತೆ. ನೆನ್ನೆ ಸಂಜೆ ಭೈರಿ ಅವರನ್ನು ಹೊಳೆಯ ದುಡೆಯಲ್ಲಿ ಕಂಡವಳು ಮಾತನಾಡಿಸಿ, ನಮಸ್ಕಾರ ಮಾಡಿದಳಂತೆ."

"ಭೈರಿ ಅವರನ್ನು ಕಂಡಿದ್ದು, ಮಾತನಾಡಿಸಿದ್ದು ಒಳ್ಳೆಯದೇ ಆಯಿತು. ದಾಸರು ಏನು ಹೇಳಿದರಂತೆ ?"

"'ತಂಜಾವೂರು, ಚನ್ನಪುರಿ, ಬೆಂಗಳೂರು ಹೊಕ್ಕು ಬಂದಿದ್ದೇನೆ. ಸನ್ನಿಧಾನದವರನ್ನು ಕಂಡು ಮಾತನಾಡಬೇಕಾದ್ದು ತುಂಬ ಇದೆ. ನಾನು ಬಂದಿರುವ ಸುದ್ದಿ ಸನ್ನಿಧಾನಕ್ಕೆ ತೆಗೆದುಕೊಂಡು ಹೋಗಬಹುದಾದವರನ್ನು ಕರೆದುಕೊಂಡು ಬಾ' ಎಂದರಂತೆ."

"ಚಾಮುಂಡಿ, ನಾವೂ ದಾಸರನ್ನು ನೋಡಲೇಬೇಕಾಗಿದೆ. ಅವರೊಡನೆ ಮಾತನಾಡುವುದೂ ತುಂಬಾ ಇದೆ. – ಆದರೆ ಏನು ಮಾಡೋಣ. – ಅವರು ಈ ನರಕಕ್ಕೆ ಬರುವುದು ಸಾಧ್ಯವಿಲ್ಲ; ನಾವು ಈ ನರಕದಿಂದ ಹೊರಗೆ ಹೋಗುವುದು ಸಾಧ್ಯವಿಲ್ಲ. – ಇದಕ್ಕೇನು ಮಾರ್ಗ ?"

"ನಾನು ಈ ವಿಚಾರ ಹೇಳಿದಾಗ, ಅವರು ಸ್ವಲ್ಪ ಹೊತ್ತು ಆಲೋಚನೆ ಮಾಡಿ—"

"ಏನು ಹೇಳಿದರು ?"

"ಸನ್ನಿಧಾನದವರು ಕಾವಲುಗಾರರ ಮುಖ್ಯಸ್ಥನನ್ನು ಈಗಲೇ ಕರೆಸಿ 'ನಾಡಿದ್ದು ಕೊನೆಯ ಕಾರ್ತಿಕ ಸೋಮವಾರ. ಅವತ್ತು ರಾತ್ರಿ ಗಂಗಾಧರೇಶ್ವರ ಸ್ವಾಮಿಯ ದೇವಾಲಯದಲ್ಲಿ ಮೂರನೆಯ ಜಾಮದ ಪೂಜೆ ಅರಮನೆಯವರು ನಡೆಸಬೇಕಾದದ್ದು. ಅದಕ್ಕೆ ವ್ಯವಸ್ಥೆ ಆಗಬೇಕು. ಅಲ್ಲದೆ ಆ ಪೂಜೆ ನಡೆಯುವಾಗ ದೇವರ ದರ್ಶನಕ್ಕೆ ಹೋಗಲೂ ಏರ್ಪಾಡಾಗಬೇಕು. ಈ ವಿಚಾರ ನಮ್ಮ ಒಡೆಯರಿಗೆ ತಿಳಿಸು ಎಂದು ಹೇಳಲಿ' ಅಂದರು."

"ತಿಳಿಸಿದ ಮಾತ್ರಕ್ಕೇ ಏನು ಪ್ರಯೋಜನ. ಸುಲ್ತಾನ ಒಪ್ಪಬೇಕಲ್ಲ"

"'ಸನ್ನಿಧಾನದವರು ಅಷ್ಟು ಹೇಳಲಿ. ಮುಂದಿನದು ನಾನು ನೋಡಿ ಕೊಳ್ಳುತ್ತೇನೆ. ಅದರ ಚಿಂತೆ ಅವರಿಗೆ ಬೇಡ' ಎಂದರು ದಾಸರು."

"ಹಾಗೆ ಹೇಳಿದರೆ ?"

"ಹೌದು ತಾಯಿ. ಅವರು ಏನೋ ಏರ್ಪಾಡು ಮಾಡತಾರೆ ಅಂತ ಕಾಣತ್ತೆ."

"ದಾಸರು ದೇವರಂಥ ಮನುಷ್ಯರು. ನಾವು ಅವರಿಗೆ ಕಷ್ಟ ಕೊಡುತ್ತಿದ್ದೇವೆ. ನಮ್ಮಿಂದ ಒಬ್ಬರಿಗಲ್ಲ ಹತ್ತಾರು ಮಂದಿಗೆ ಕಷ್ಟ; ಹಿಂಸೆ. ಆಗಲಿ. ನಮ್ಮೆಲ್ಲರ ಪ್ರಯತ್ನ ಫಲಿಸಿ ನಮ್ಮ ವಂಶದ ಕುಡಿ ಸ್ವತಂತ್ರವಾಗಿ ಸಿಂಹಾಸನದ ಮೇಲೆ ಕೂರುವಂತಾದರೆ!—"

ಮಹಾಮಾತೃಶ್ರೀಯವರ ಕಣ್ಣಿನಲ್ಲಿ ನೀರು ತುಂಬಿತು. ಧ್ವನಿ ಒಡೆಯಿತು. ಆದರೂ ಮಾತು ಮುಂದುವರಿಸಿದರು : "ಆ ಸೌಭಾಗ್ಯ ನೋಡುವ ಪುಣ್ಯವುಂಟೆ ಈ ಪಾಪಿ ಕಣ್ಣುಗಳಿಗೆ! ಬಾಳಿದ ಈ ಐವತ್ತುನಾಲ್ಕು ವರ್ಷದಲ್ಲಿ ಅರ್ಧಕ್ಕಿಂತ ಹೆಚ್ಚುಕಾಲ ಈ ಹೊಡಬಾಳಲ್ಲೇ ಕಳೆದಿದ್ದಾಯಿತು ! ನಮ್ಮ ಗ್ರಹಚಾರ ಎಂದಿಗೆ ನೆಟ್ಟಗಾಗುತ್ತದೆಯೋ, ಇದೆಲ್ಲಾ ಯಾವಾಗ ಸರಿಹೋಗುತ್ತದೆಯೋ!—"

"'ಇನ್ನು ಸ್ವಲ್ಪ ಕಾಲದಲ್ಲಿ ಎಲ್ಲ ಸರಿಹೋಗುತ್ತದೆ. ಕಳೆ ಮಾಡುವುದಕ್ಕೆ ಮುಂಚೆ ಕಾವಳ ಹೆಚ್ಚು. ಮನಸ್ಸಿಗೆ ಬೇಸರ ಮಾಡಿಕೊಳ್ಳಬಾರದು. ಧೈರ್ಯವಾಗಿರಬೇಕು'–ಎಂದು ಸನ್ನಿಧಾನದಲ್ಲಿ ಬಿನ್ನವಿಸಿಕೋ, ಎಂದರು ದಾಸರು. 'ಎಲ್ಲ ವಿಚಾರ ಅವರೇ ಸನ್ನಿಧಾನದಲ್ಲಿ ಬಿನ್ನವಿಸಿಕೊಳ್ಳುತ್ತಾರಂತೆ.'"

"ಒಳ್ಳೇದು."

"ಸನ್ನಿಧಾನಕ್ಕೆ ಬರಬಹುದು ತಾಯಿ" ಎಂದು ಗಟ್ಟಿಯಾಗಿ ಹೇಳುತ್ತಾ ಚಾಮುಂಡಿ ಎದ್ದು ಹೋಗಿ, ಕೊಟಡಿಯ ಬಾಗಿಲು ತೆರೆದಳು. ಆವರೆಗೆ ಬಾಗಿಲು ಕಾಯುತ್ತಿದ್ದ ಚಲುವಾಜಮ್ಮಣ್ಣಿ ಕೊಟಡಿಯೊಳಕ್ಕೆ ಬಂದರು.

§

ಕೊನೆಯ ಕಾರ್ತಿಕ ಸೋಮವಾರ ರಾತ್ರಿ. ಗಂಗಾಧರೇಶ್ವರಸ್ವಾಮಿಗೆ ಎರಡನೆಯ ಜಾಮದ ಪೂಜೆ ಮುಗಿಯುವ ಹೊತ್ತಿಗೆ, ಪಾರುಪತ್ಯಗಾರರಿಗೆ ಸುದ್ದಿ ಬಂತು : "ಮಹಾಮಾತೃಶ್ರೀಯವರು ರಾಣಿಯವರು, ಕುಮಾರರು ಸಮೇತರಾಗಿ ಸ್ವಾಮಿಯ ದರ್ಶನಕ್ಕೆ ಬಿಜಯಮಾಡಿಸುತ್ತಿದ್ದಾರೆ" ಎಂದು.

ಸುದ್ದಿ ಬಂದದ್ದೇ ತಡ "ಮೂರನೆಯ ಜಾಮದ ಪೂಜೆಯನ್ನು ಆರಂಭಿಸಲು ಸಿದ್ಧವಾಗಿರಿ – ಸವಾರಿ ಬರುತ್ತಿದೆ" ಎಂದು ಪಾರುಪತ್ಯಗಾರ ಅರ್ಚಕರಿಗೆ ಸೂಚನೆ ಕೊಟ್ಟು ತಾನು ದೇವಸ್ಥಾನದ ಮಹಾದ್ವಾರಕ್ಕೆ ಬಂದ – ಸವಾರಿಯನ್ನು ಸ್ವಾಗತಿಸಲು. ತಾಳಮೇಳದವರು, ವೈದಿಕರು, ಪಾಠಕರು ಮುಂತಾದವರೆಲ್ಲ

ಅವನನ್ನನುಸರಿಸಿ ಬಂದರು. ದೇವಾಲಯಕ್ಕೆ ಬಂದಿದ್ದ ಇತರ ಜನರನ್ನು ಹೊರಕ್ಕೆ ಕಳುಹಿಸುವ ಕಾರ್ಯ ಭರದಿಂದ ಸಾಗಿತು.

ಪರಿವಾರ ಸಮೇತವಾಗಿ ಸವಾರಿ ಚಿತ್ತೈಸಿತು. ವೈಗಾವಲಿಗಾಗಿ ಬಂದಿದ್ದವರು, ಮಹಾದ್ವಾರದ ಹೊರಗೆ ನಿಂತರು. ಪಾರುಪತ್ಯಗಾರ ಕೋರಿದ ಸ್ವಾಗತವನ್ನು ಒಪ್ಪಿಸಿಕೊಂಡು ಮಹಾಮಾತೃಶ್ರೀಯವರು ಸ್ವಾಮಿಯ ಸನ್ನಿಧಿಗೆ ಹೊರಟರು. ಗರ್ಭಗೃಹದ ಮುಂದಣ ಕೈಸಾಲೆಯಲ್ಲಿ ಸನ್ನಿಧಿಯ ಎದುರಿಗೆ ಕಟ್ಟಿದ್ದ ತೆರೆಯನ್ನು ಅವರು ಪ್ರವೇಶಿಸಿದೊಡನೆಯೇ ವೃದ್ಧ ಅರ್ಚಕ ಹೇಳಿದ:

"ಭಟ್ಟರೇ, ಸನ್ನಿಧಾನಕ್ಕೆ ಹೋಗಿ, ಸಂಕಲ್ಪ ಯಾರ ಹೆಸರಿನಲ್ಲಿ ಆಗಬೇಕು ತಿಳಿದುಕೊಂಡು ವರಣ ತೆಗೆದುಕೊಂಡು ಬನ್ನಿ."

ಭಟ್ಟರು ತೆರೆಯೊಳಕ್ಕೆ ಬಂದರು. ಮಹಾಮಾತೃಶ್ರೀಯವರು ಅವರ ಕಡೆ ತಿರುಗಿದರು. ಭಟ್ಟರು ಮಾತೃಶ್ರೀಯವರಿಗೆ ನಮಸ್ಕರಿಸಿ "ಕ್ಷೇಮವೇ ತಾಯಿ" ಎಂದರು. ತೆರೆಯ ಹಿಂಬದಿಯ ಮಂದಪ್ರಕಾಶದಲ್ಲಿ ಕೂಡ ಭಟ್ಟರು ಯಾರೆಂಬುದನ್ನು ಮಹಾಮಾತೃಶ್ರೀಯವರು ಗುರುತಿಸಿದರು. ಧ್ವನಿ ಕೇಳಿದ ಮೇಲೆ ಅವರ ಊಹೆ ಸ್ಥಿರವಾಯಿತು. ಆದರೆ ಅವರು ಯಾವ ಅನುಮಾನಕ್ಕೂ ಎಡೆಗೊಡದಂತೆ ಗಂಭೀರವಾಗಿ :

"ದೇವಿಯ ಕೃಪೆಯಿಂದ ಕ್ಷೇಮವಾಗಿದ್ದೇವೆ. ಮುಂದಿನ ಕಾರ್ಯ ನಡೆಯಲಿ" ಎಂದಳು.

"ಸೇವೆಯು ನಡೆಯಬೇಕಾದದ್ದು—"

"ಪಟ್ಟಾಧಿಕಾರಿಗಳಾದ ಕುಮಾರರ ಹೆಸರಿನಲ್ಲಿ."

"ನ್ಯಾಯವೇ. ಕುಮಾರರನ್ನು ಸನ್ನಿಧಾನದ ಹತ್ತಿರಕ್ಕೆ ಬಿಜಯಮಾಡಿಸಿಕೊಳ್ಳಬೇಕು."

ರುದ್ರಿ ಕುಮಾರರನ್ನೆತ್ತಿಕೊಂಡು ಬಂದು ಮಹಾಮಾತೃಶ್ರೀಯವರ ಕೈಗೆ ಕೊಟ್ಟಳು. ಅವರು ಕುಮಾರರನ್ನು ತೊಡೆಯ ಮೇಲೆ ಕೂರಿಸಿಕೊಂಡರು. ಭಟ್ಟರು ಸಂಕಲ್ಪ ಹೇಳಿ ಕುಮಾರರಿಂದ ವರಣ ತೆಗೆದುಕೊಂಡು ಮೇಲಕ್ಕೆದ್ದರು. ಮಹಾಮಾತೃಶ್ರೀಯವರು ಕಿಳ್ದನಿಯಲ್ಲಿ ಹೇಳಿದರು :

"ನಿಮ್ಮನ್ನು ನೋಡಿದ್ದು ತುಂಬ ಸಂತೋಷವಾಯಿತು ದಾಸರೆ. 'ಭಟ್ಟರು' ಎಂದಾಗ ಯಾರೋ ಎಂದುಕೊಂಡಿದ್ದೆ. ಪೂಜೆ ಆರಂಭಮಾಡಿಸಿ ಮತ್ತೆ ಇಲ್ಲಿಗೆ ಬನ್ನಿ."

"ಅಪ್ಪಣೆ."

ದಾಸರು ಹೊರಟುಹೋದರು. ಪೂಜೆ ಆರಂಭವಾಯಿತು. ಸನ್ನಿಧಾನದವರು ತಮ್ಮೊಡನೆ ತಂದಿದ್ದ ಹೂ ಹಣ್ಣು ಬಟ್ಟೆಬರೆ ಕಾಣಿಕೆ ತಟ್ಟೆಗಳನ್ನು ತೆಗೆಸಿಕೊಂಡು ಬರುವ ನೆಪ ಹೇಳಿ ದಾಸರು ಮತ್ತೆ ತೆರೆಯೊಳಕ್ಕೆ ಬಂದರು. ಒಂದು ಹೂವಿನ ತಟ್ಟೆಯನ್ನೆತ್ತಿ ಚಾಮುಂಡಿಯ ಕೈಗೆ ಕೊಟ್ಟು "ಇದನ್ನು ಗರ್ಭಗುಡಿಗೆ ಕಳಿಸು" ಎಂದು ಮಹಾಮಾತೃಶ್ರೀಯವರ ಕಡೆಗೆ ತಿರುಗಿ :

"ಭೈರಿ, ಚಾಮುಂಡಿ ಎಲ್ಲ ಹೇಳಿದರು."

"ಅಂತು ನಿಮ್ಮ ದರ್ಶನವಾದದ್ದು ನಮ್ಮ ಪುಣ್ಯ ದಾಸರೆ."

"ನಾನೂ ಹಾಗೆಯೇ ಹೇಳಬೇಕಾಗಿದೆ ತಾಯಿ. ಸನ್ನಿಧಾನದ ದರ್ಶನ ಸಾಧ್ಯವಾಗದಿದ್ದರೆ, ನಾನು ಮುಂದಿನ ಕೆಲಸದಲ್ಲಿ ತೊಡಗುವುದು ಸಾಧ್ಯವಾಗುತ್ತಿರಲಿಲ್ಲ."

ಚಾಮುಂಡಿ ಹೂವಿನ ತಟ್ಟೆ ಕೊಟ್ಟು ಹಿಂದಿರುಗಿ ಬಂದಳು. ದಾಸರು ಇನ್ನೊಂದು ಹೂವಿನ ತಟ್ಟೆಯನ್ನು ಅವಳ ಕೈಗೆ ಕೊಟ್ಟು ಕಳುಹಿಸಿದರು.

"ಸುಲ್ತಾನನಿಂದ ನಿಮಗೆ ತುಂಬ ತೊಂದರೆಯಾಯಿತೆಂಬ ಸುದ್ದಿ ಗತ್ವಾಗತ್ವ ರಾಯರಿಗೆ ಗೊತ್ತಾಯಿತು. ಅನಂತರ ನಿಮ್ಮಿಂದ ಯಾವ ಸುದ್ದಿಯೂ ಬರಲಿಲ್ಲವಾಗಿ ರಾಯರು ತುಂಬ ಗಾಬರಿಯಾದರು – ಏನಾಗಿದೆಯೋ ಎಂದು."

"ಸುದ್ದಿ ಕಳುಹಿಸಲು ಸಾಧ್ಯವಾಗಲಿಲ್ಲ. ದಾಸರೆ."

"ಹಾಗಿದ್ದೀತೇನೋ ಎಂದು ಅನುಮಾನ ಪಟ್ಟು ಎಲ್ಲ ವಿಚಾರವನ್ನೂ ತಿಳಿದುಬರುವಂತೆ ನನ್ನನ್ನು ಕಳುಹಿಸಿದರು."

"ಒಳ್ಳೆಯದಾಯಿತು."

"ನಾನು ಇಲ್ಲಿಗೆ ಬಂದದ್ದೂ ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ಸುಲ್ತಾನ ಇಂಗ್ಲಿಷರ ಮೇಲೆ ಬೀಳುವುದಕ್ಕಾಗಿ ಬೇಕಾದಷ್ಟು ಪ್ರಯತ್ನ ಮಾಡುತ್ತಿದ್ದಾನೆಂಬುದು ಗೊತ್ತಾಯಿತು."

"ಆ ವಿಚಾರವಾಗಿ ನಮಗೂ ಬೇಕಾದಷ್ಟು ಸುದ್ದಿ ತಿಳಿದಿದೆ. ಆದರೆ ಇಲ್ಲಿಂದ ಹೊರಕ್ಕೆ ಸುದ್ದಿ ಕಳುಹಿಸುವುದು ಕಷ್ಟವಾಗಿತ್ತು."

"ಈಗ ಆ ಕಷ್ಟವಿಲ್ಲ ತಾಯಿ. ಇಂಗ್ಲಿಷರ ವಿರುದ್ಧ ಸುಲ್ತಾನ ನಡೆಸುತ್ತಿರುವ ಪಿತೂರಿ ಪ್ರಯತ್ನಗಳು ; ಅವನಿಂದ ನಿಮಗೆ ಆಗಿರುವ ಅನ್ಯಾಯ ಎಲ್ಲವನ್ನೂ ವಿವರವಾಗಿ ಬರೆದ ಒಂದು ಪತ್ರ ದಯಪಾಲಿಸಿದರೆ—"

"ಆಗಲಿ ದಾಸರೆ, ಸಿದ್ಧ ಮಾಡಿಸುತ್ತೇವೆ."

"ಅದಕ್ಕೆ ರಾಜಮುದ್ರೆ ಒತ್ತುವುದು ಸಾಧ್ಯವಾದರೆ—"

"ಅದಿನ್ನೂ ನಮ್ಮಲ್ಲೇ ಉಳಿದಿದೆ. ಈಗ ನಮ್ಮಲ್ಲುಳಿದಿರುವ ರಾಜ ಚಿನ್ಹೆ ಅದೋಂದೇ!"

"ಚಿಂತಿಸಬೇಡಿ ತಾಯಿ. ರಾಜತ್ವದ ಇತರ ಎಲ್ಲ ಚಿನ್ಹೆಗಳೂ ಶೀಘ್ರದಲ್ಲಿಯೇ ಕುಮಾರರಿಗೆ ಸಲ್ಲುವುವು."

"ನಿಮ್ಮಂಥ ತಪಸ್ವಿಗಳ ಬಾಯ ಹರಿಕೆಯಿಂದ ಹಾಗಾದರೆ--"

"ಆಗುತ್ತದೆ ತಾಯಿ. ಧೈರ್ಯವಾಗಿರಿ. ಕಷ್ಟಕಾಲ ಕಳೆಯುತ್ತ ಬಂದಿದೆ. – ಚಾಮುಂಡಿ, ಈ ಹಣ್ಣು ಹಂಪಲು ತಟ್ಟೆಗಳು, ಬಟ್ಟೆಬರೆಗಳ ತಟ್ಟೆಗಳು ಇವನ್ನೆಲ್ಲಾ ತೆಗೆಸಿಕೊಂಡು ಹೋಗು. — ಆಡಬೇಕಾದ ಮಾತು ಆಡಿ ಆಯಿತಲ್ಲಾ ತಾಯಿ. ಶ್ರೀ ಗಂಗಾಧರೇಶ್ವರನ ಕೃಪೆಯಿಂದ ಇಲ್ಲಿಯವರೆಗೆ ಎಲ್ಲ ಸಮರ್ಪಕವಾಗಿ ನಡೆದಿದೆ. ನಾನು ಇಲ್ಲಿಂದ ಗುರುವಾರ ಪ್ರಯಾಣ ಮಾಡುತ್ತೇನೆ."

"ತಿಳಿಯಿತು ದಾಸರೆ. ನೀವು ಹೊರಡುವುದರೊಳಗಾಗಿ ಚಾಮುಂಡಿ ನಿಮ್ಮ ದರ್ಶನಕ್ಕೆ ಬರುತ್ತಾಳೆ."

"ಸಂತೋಷ." ಎನ್ನುತ್ತಾ ದಾಸರು ಮೇಲಕ್ಕೆದ್ದು ಮಹಾಮಾತೃಶ್ರೀಯವರಿಗೆ ಕೈ ಮುಗಿದು "ಸ್ವಾಮಿಗೆ ಅಭಿಷೇಕ ನಡೆಯುತ್ತಿದೆ. ಇಲ್ಲಿ ಅರ್ಚಕರು, ಮಂತ್ರಪಾಠಕರು ನಾವು ನಾಲ್ಕು ಜನ ವಿನಾ ಇನ್ನಾರೂ ಇಲ್ಲ. ಅಪ್ಪಣೆಯಾದರೆ ತೆರೆ ತೆಗೆಯುತ್ತೇನೆ. ಸನ್ನಿಧಾನದವರು ನೇರವಾಗಿಯೇ ದೇವರ ದರ್ಶನ ಮಾಡಬಹುದು" ಎಂದು ಗಟ್ಟಿಯಾಗಿ ಬಿನ್ನವಿಸಿಕೊಂಡರು.

"ಇತರ ಜನ ಇಲ್ಲದಿದ್ದರೆ ತೆರೆಯ ಆವಶ್ಯಕತೆಯೇನೂ ಇಲ್ಲ" ಎಂದು ಮಾತೃಶ್ರೀಯವರು ಗಂಭೀರವಾಗಿ ಹೇಳಿದರು. ದಾಸರು ತೆರೆಯನ್ನು ಒಂದು ಪಕ್ಕಕ್ಕೆ ತಳ್ಳಿ ಮಂತ್ರಪಾಠಕರ ಜೊತೆಗೆ ತಮ್ಮ ಕೊರಳನ್ನೂ ಸೇರಿಸಿದರು:

....ತತ್ಪುರುಷಾಯ ವಿದ್ಮಹೇ । ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ ॥

ಈಶಾನಸ್ಸರ್ವವಿದ್ಯಾ ನಾಮೀಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿ ಬ್ರಹ್ಮಣೋಧಿಪತಿ ಬ್ರಹ್ಮಾ ಶಿವೋಮೇ ಅಸ್ತು – ಸದಾಶಿವೋಂ ॥

§

ಇಂಡಿಯಾದ ಗೌರ್ನರ್ ಜನರಲ್‌ರವರಾಗಿ ನಿಯಮಿತರಾಗಿದ್ದ ಲಾರ್ಡ್ ಮಾರ್ನಿಂಗ್‌ಟನ್‌ರವರು ಕಲಿಕತ್ತೆಗೆ ಹೋಗುವ ಮೊದಲು ಚನ್ನಪುರಿಗೆ ಬಂದು ಹೋಗುವರೆಂಬ ಸುದ್ದಿ ತಿಳಿದಿದ್ದೇ ತಡ ತಿರುಮಲರಾಯರು ದಾಸರನ್ನೂ ತಮ್ಮ ಜೊತೆಯಲ್ಲಿ ಕರೆದುಕೊಂಡು ತಂಜಾವೂರಿನಿಂದ ಚನ್ನಪುರಿಗೆ ಓಡಿಬಂದರು. ಎಷ್ಟೇ ಕಷ್ಟವಾಗಲಿ, ತಮ್ಮ ಶಕ್ತಿ ಸಾಹಸಗಳನ್ನೆಲ್ಲಾ ವಿನಿಯೋಗಿಸಿ ಗೌರ್ನರ್ ಜನರಲ್ ಸಾಹೇಬರನ್ನು ನೋಡಿ ಮಾತನಾಡಬೇಕೆಂದು ಅವರು ನಿರ್ಧರಿಸಿದ್ದರು. ಅವರ ಈ ನಿರ್ಧಾರ ವ್ಯರ್ಥವಾಗಲಿಲ್ಲ. ಲಾರ್ಡ್ ಮಾರ್ನಿಂಗ್‌ಟನ್‌ರವರು ಚನ್ನಪುರಿಯನ್ನು ಬಿಟ್ಟು ಕಲಿಕತ್ತೆಗೆ ಹೊರಡುವುದಕ್ಕೆ ಮುನ್ನಾದಿನ ಮಧ್ಯಾಹ್ನ ಅವರನ್ನು ನೋಡಲು ತಿರುಮಲರಾಯರಿಗೆ ಅವಕಾಶ ದೊರೆಯಿತು. ಈ ಸುಸಂಧಿಯನ್ನು ಪೂರ್ಣವಾಗಿ ಉಪಯೋಗಕ್ಕೆ ತಂದುಕೊಂಡು ಗೌರ್ನರ್ ಜನರಲ್ ರವರು ಟಿಪ್ಪೂವಿನ ಮೇಲೆ ಯುದ್ಧ ಸಾರುವಂತೆ ಮಾಡಬೇಕೆಂದು ಉದ್ದೇಶಿಸಿ ತಿರುಮಲರಾಯರು ಅದಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡೇ ಬಂದಿದ್ದರು.

ಪರಸ್ಪರ ಪರಿಚಯ, ವಂದನೆಗಳಾದ ಮೇಲೆ, ತಿರುಮಲರಾಯರು ಮೈಸೂರು ಮಹಾರಾಣಿಯವರ ಪರವಾಗಿ ತಮ್ಮ ವಾದವನ್ನಾರಂಭಿಸಿದರು.

ಮೈಸೂರು ಸೇನೆಯಲ್ಲಿ ಸಾಮಾನ್ಯ ಸೈನಿಕನಾಗಿದ್ದ ಹೈದರ್ ಹೇಗೆ ರಾಜ್ಯದ ಸರ್ವಾಧಿಕಾರಿಯಾದನೆಂಬುದನ್ನು ಸ್ಥೂಲವಾಗಿ ಹೇಳಿ, ಅವನ ಮರಣಾನಂತರ ಅವನ ಮಗ ಟಿಪ್ಪೂ ಸರ್ವಾಧಿಕಾರಿಯ ಸೋಗು ತೊರೆದು ತಾನೇ ರಾಜ್ಯದ ಅರಸನಾಗಿ ವರ್ತಿಸುತ್ತಿರುವುದನ್ನು ಮೊದಲು ವಿವರಿಸಿದರು.

ಅನಂತರ, ೧೭೮೨ನೇ ಅಕ್ಟೋಬರ್ ೨೮ನೇ ತಾರೀಖಿನ ದಿನ ತಮ್ಮ ಮೂಲಕ ಮೈಸೂರು ಮಹಾರಾಣಿಯವರಿಗೂ ಕಂಪನಿ ಸರ್ಕಾರಕ್ಕೂ ಆದ ಪರಸ್ಪರ ಸಹಾಯದ ಕರಾರುನಾಮೆಯನ್ನು ಗೌರ್ನರ್ ಜನರಲ್‌ರವರ ಗಮನಕ್ಕೆ ತಂದರು.

ಆಮೇಲೆ, ಟಿಪ್ಪೂ ಅಧಿಕಾರಕ್ಕೆ ಬಂದಾಗಿನಿಂದ ಇಂಗ್ಲಿಷರ ಮೇಲೆ ವೈರ ಸಾಧಿಸುತ್ತಿರುವುದನ್ನು ವಿವರವಾಗಿ ತಿಳಿಸಿ, ಕಳೆದ ಸಾರಿ ಶ್ರೀರಂಗಪಟ್ಟಣದ ಮುತ್ತಿಗೆಯಲ್ಲಿ ಬ್ರಿಟಿಷರಿಗೆ ಜಯ ಹಸ್ತಗತವಾಗಿದ್ದಾಗ, ಕಾರನ್‌ವಾಲಿಸ್ ಸಾಹೇಬರು ಟಿಪ್ಪೂವನ್ನು ಮುಗಿಸದೆ ಬಿಟ್ಟು, ಅವನೊಡನೆ ಸಂಧಿಮಾಡಿಕೊಂಡಿದ್ದು, ಕೈಗೆ ಸಿಕ್ಕಿದ ಹಾವನ್ನು ಹೊಡೆದು ಕೊಲ್ಲುವುದರ ಬದಲು, ಅದಕ್ಕೆ ಹಾಲೆರೆದು

ಹಾಸುಗೆಯಲ್ಲಿ ಮಲಗಿಸಿಕೊಂಡಂತಾಗಿದೆಯೆಂದು ಹೇಳಿ, ಒಂದು ಪತ್ರವನ್ನು ತೆಗೆದು ಲಾರ್ಡ್ ಮಾರ್ನಿಂಗ್‌ಟನ್‌ರವರ ಮುಂದಿಟ್ಟು :

"ಗೌರ್‍ನರ್ ಜನರಲ್ ಸಾಹೇಬರು ಈ ಪತ್ರವನ್ನು ಅವಲೋಕಿಸಬೇಕು. ಇದು ಇಂದಿನ ಕಾಗದವಲ್ಲ. ಮೈಸೂರಿನ ಮಹಾರಾಣಿ ಲಕ್ಷ್ಮಮ್ಮಣ್ಣಿ ಸನ್ನಿಧಾನದವರು ಈ ಪತ್ರವನ್ನು ಬರೆಸಿ ಸುಮಾರು ಎರಡುವರ್ಷಗಳಾಗುತ್ತಾ ಬಂತು. ಈ ಕಾಗದ ನನ್ನ ಕೈ ಸೇರಿದೊಡನೆಯೇ, ಇದರ ಪ್ರತಿಯನ್ನೂ ಭಾಷಾಂತರವನ್ನೂ ಚನ್ನಪುರಿಯ ಗೌರ್‍ನರ್ ಸಾಹೇಬರ ಮೂಲಕ ಕಲಿಕತ್ತೆಯ ದೊಡ್ಡ ಸಾಹೇಬರ ಸನ್ನಿಧಾನಕ್ಕೆ ಕಳುಹಿಸಲಾಯಿತು. ಅದೇನು ಕಾರಣವೋ ಕಲಿಕತ್ತೆ ಸರ್ಕಾರ ಈ ಪತ್ರದಲ್ಲಿರುವ ಪ್ರಮುಖವಾದ ಯಾವ ಅಂಶವನ್ನೂ ಗಮನಕ್ಕೆ ತಂದುಕೊಳ್ಳದೆ, ಟಿಪ್ಪೂವನ್ನು ಬೆಳೆಯಬಿಟ್ಟಿತು."

ತಿರುಮಲರಾಯರ ವಾದವನ್ನು ಏಕಾಗ್ರ ಚಿತ್ತತೆಯಿಂದ ಕೇಳುತ್ತಾ ಕುಳಿತಿದ್ದ ಗೌರ್‍ನರ್ ಜನರಲ್ ಸಾಹೇಬರು :

"ನಿಮ್ಮ ವಾದ ಅರ್ಥವಾಯಿತು ಪ್ರಧಾನರೆ. ಈ ಪತ್ರ ಓದಿ ಹೇಳಿ. ನಾವು ಗಮನಿಸಬೇಕಾದಂಥ ಪ್ರಮುಖ ಅಂಶಗಳು ಯಾವುವಾದರೂ ಈ ಪತ್ರದಲ್ಲಿದ್ದರೆ ಅದನ್ನು ನಾವು ಲಕ್ಷ್ಯಕ್ಕೆ ತೆಗೆದುಕೊಳ್ಳುತ್ತೇವೆ. ಹೇಳಿ."

ತಿರುಮಲರಾಯರು ಕನ್ನಡದಲ್ಲಿದ್ದ ಆ ಪತ್ರವನ್ನು ಓದಲಾರಂಭಿಸಿದರು. ದುಭಾಷಿ ಅದನ್ನು ಉರ್ದು ಭಾಷೆಗೆ ಪರಿವರ್ತಿಸುತ್ತ ಹೋದ.

"ಮೈಸೂರಿನ ಮಹಾರಾಣಿಯವರಾದ ನರಪತಿ ಮಹಾಮಾತೃಶ್ರೀ ರಾಣಿ ಲಕ್ಷ್ಮಮ್ಮಣ್ಣಿಯವರ ಸನ್ನಿಧಾನದಿಂದ– ಚನ್ನಪುರಿಯ ಕಂಪನಿ ಬಹಾದ್ದೂರ್ ಸರ್ಕಾರದಲ್ಲಿ ಸನ್ನಿಧಾನದ ರಾಯಭಾರಿಯಾಗಿರುವ ಪ್ರಧಾನ ತಿರುಮಲರಾಯರಿಗೆ ಬರೆಸಿದ ಬುದ್ಧಿನಿರೂಪ :

"ನೀವು ಕಳುಹಿಸಿದ ನಿಯೋಗಿಯಿಂದ, ನಮ್ಮ ಪರವಾಗಿ ನೀವು ಇಂಗ್ಲಿಷ್ ಸರದಾರರಲ್ಲಿ ಮಾಡುತ್ತಿರುವ ಪ್ರಯತ್ನಗಳ ವಿವರ ತಿಳಿಯಿತು. ಇಲ್ಲಿ ಈಗ ನಮ್ಮ ಸ್ಥಿತಿ ಹೇಗಿದೆಯೆಂಬುದನ್ನು ನಿಮ್ಮ ನಿಯೋಗಿ ವಿವರವಾಗಿ ಹೇಳಬಲ್ಲರು. ಅವರ ಮಾತಿಗೆ ಪುಷ್ಟಿಯಿರಲೆಂದು ನಿಮಗೆ ಈ ನಿರೂಪ ಬರೆಸಿದ್ದೇವೆ.

"ನಾವು ಈಗ್ಯೆ ಅನೇಕ ವರ್ಷಗಳಿಂದ ಈ ಯವನ ರಾಕ್ಷಸನು ಕೊಡುತ್ತಿರುವ ನಾನಾ ಬಾಧೆಗಳನ್ನು ಸಹಿಸಿಕೊಂಡು ಕಾಲಹರಣ ಮಾಡುತ್ತಿದ್ದೇವೆಂಬುದು ನಿಮಗೆ ತಿಳಿದ ವಿಚಾರವೇ ಆಗಿದೆ. ಕಳೆದ ಆಷಾಢ ಶುದ್ಧದಲ್ಲಿ ಈ ರಾಕ್ಷಸ ನಮ್ಮ

ಅರಮನೆಯನ್ನು ದೋಚಿದನು. ಅಷ್ಟು ಮಾತ್ರವಲ್ಲ. ನಮ್ಮನ್ನೂ ರಾಣಿಯರನ್ನೂ ಕುಮಾರರನ್ನೂ ಅಲ್ಲಿಂದ ಹೊರಡಿಸಿ ಕಾಂತರಾಯರ ಹಳೆಯ ಮನೆಯಲ್ಲಿ ಬಂಧನದಲ್ಲಿಟ್ಟಿದ್ದಾನೆ. ಈಗ ನಮ್ಮ ದೀನಾವಸ್ಥೆ ಹೇಳತೀರದು. ಉಡುವುದಕ್ಕೆ ಬಟ್ಟೆಯಿಲ್ಲ ಊಟಕ್ಕೆ ಅನ್ನವಿಲ್ಲ ಎಂಬ ಸ್ಥಿತಿಗೆ ಬಂದಿದ್ದೇವೆ. ಭಿಕ್ಷದವರಂತೆ ಹಗಲು ಸಂಜೆ ಭತ್ತೆಯ ಪಡೆದು ಮಡಿಕೆ ಕುಡಿಕೆಗಳಲ್ಲಿ ಬೇಯಿಸಿಕೊಂಡು ಹೊಟ್ಟೆ ತುಂಬಿಸಿಕೊಳ್ಳಬೇಕಾಗಿದೆ. ನಮ್ಮ ಗತಿ ಏನೇ ಆಗಲಿ ದುಃಖವಿಲ್ಲ. ಆದರೆ ಕುಮಾರರು ಸರಿಯಾದ ಆಹಾರ ಆರೈಕೆ ಇಲ್ಲದೆ ಸೊರಗುತ್ತಿರುವುದನ್ನು ನೋಡಿ ನೋಡಿ ನಮ್ಮ ಎದೆ ಬೆಂದು, ನೊಂದು ಹುಣ್ಣಾಗಿ ಹೋಗಿದೆ.

"ಈ ಕಷ್ಟವೆಲ್ಲ ಇರಲಿ – ಸಾಯದೆ ಬದುಕಿದ್ದರೆ ಎಂದಾದರೂ ಸುಖ ಕಂಡೇವು ಎಂದು ಧೈರ್ಯವಾಗಿ ಇರುವುದು ಕೂಡ ಸಾಧ್ಯವಿಲ್ಲವಾಗಿದೆ. ಟಿಪ್ಪೂ ತನ್ನ ಬಳಿಗೆ ಬಂದಿರುವ ಫ್ರೆಂಚ್ ವಕೀಲನ ಸೂಚನೆಯನ್ನನುಸರಿಸಿ ನಮ್ಮನ್ನು ತೀರಿಸಿಬಿಡಬೇಕೆಂದು ಆಲೋಚನೆ ಮಾಡುತ್ತಿದ್ದಾನೆಂದು ನಮಗೆ ಖಚಿತವಾಗಿ ತಿಳಿದುಬಂದಿದೆ. ಅವನ ಇಂಥಾ ಪ್ರಯತ್ನವನ್ನು ನಿರೋಧಿಸುವ ಶಕ್ತಿ ಏನೇನೂ ಇಲ್ಲದಷ್ಟು ದೀನಸ್ಥಿತಿಗೆ ನಾವು ಇಳಿದಿದ್ದೇವೆ. ಕಳೆದ ಮೂವತ್ತು ವರ್ಷಗಳಿಂದ ನಾವೂ ನಮ್ಮ ಹಿರಿಯರೂ ಒಂದಲ್ಲ ಒಂದು ರೀತಿಯಲ್ಲಿ ಈ ಯವನ ರಾಕ್ಷಸರ ವಿರುದ್ಧ ಚಳವಳಿ ನಡೆಸುತ್ತಿದ್ದರೂ ನಾವು ಇನ್ನೂ ಉಳಿದಿರುವುದು ಆ ದೇವಿಯ ಕೃಪಾವಿಶೇಷದಿಂದಲೇ ಎನ್ನಬೇಕು. ಹಾಗೆಂದುಕೊಂಡು ಇನ್ನೂ ಕಾಲಹರಣ ಮಾಡುತ್ತಾ ಕುಳಿತರೆ ಒಳಿತಲ್ಲವೆಂದು ನಾವು ಭಾವಿಸುತ್ತೇವೆ.

"ನಮ್ಮ ವಿಚಾರ ಹಾಗಿರಲಿ. ಕಂಪನಿ ಬಹಾದ್ದೂರ್ ಸರ್ಕಾರದವರು ಈ ಯವನ ರಾಕ್ಷಸನನ್ನು ಹೀಗೇ ಬೆಳೆಯಗೊಡುವುದು ಅವರಿಗೂ ಅಪಾಯಕರವೆಂಬ ಅಂಶವನ್ನು ನೀವು ಇಂಗ್ಲಿಷ್ ಸರದಾರರಿಗೆ ಮುಂದಟ್ಟು ಮಾಡಬೇಕು. ಈ ಸಂಬಂಧವಾಗಿ ನಮಗೆ ತಿಳಿದುಬಂದಿರುವ ಸುದ್ದಿಗಳನ್ನು ಈ ಕೆಳಗೆ ನಿರೂಪಿಸಿದ್ದೇವೆ. ನಮ್ಮ ಹಸ್ತಗತವಾಗಿರುವ ದಾಖಲೆಗಳನ್ನು ಈ ಪತ್ರದ ಸಂಗಡ ಜೋಡಿಸಿದ್ದೇವೆ.

"ತಮ್ಮವರಾದ ಆಫ್‌ಘಾನಿಸ್ತಾನದ ಮತ್ತು ಪರ್ಷಿಯಾದೇಶದ ಪಾದ್‌ಷಾಗಳನ್ನು ಕೂಡಿಕೊಂಡು ಇಲ್ಲಿರುವ ಕಂಪನಿ ಸರ್ಕಾರದ ಮೇಲೆ ಹೋರಾಟ ನಡೆಸಿ ಅದನ್ನು ಪೂರ್ಣವಾಗಿ ನಾಶಮಾಡಬೇಕೆಂಬುದು ಈ ಯವನರಾಕ್ಷಸನ ಅಭಿಲಾಷೆಯಾಗಿದೆ. ತನ್ನ ಈ ಕೆಲಸವನ್ನು ಸಾಧಿಸಲು ಅವನು ಆಫ್‌ಘಾನಿಸ್ತಾನಕ್ಕೆ ತನ್ನ ಕಳ್ಳಭಂಟರನ್ನು ಕಳುಹಿಸಿದ್ದಾನೆ. ಅವರು ವ್ಯಾಪಾರಿಗಳಂತೆ ವೇಷ ಮರೆಸಿ

ಕೊಂಡು ಕರಾಚಿಯಲ್ಲಿರುವ ವ್ಯಾಪಾರದ ಕೋಠಿಗೆ ಹೋಗಿ, ಅಲ್ಲಿಂದ ತೀರ್ಥ ಯಾತ್ರೆ ನೆಪ ಹೂಡಿಕೊಂಡು ಪರ್ಷಿಯಾದೇಶಕ್ಕೆ ಪ್ರಯಾಣಮಾಡಿ, ಆ ಮಾರ್ಗ ವಾಗಿ ಕಾಬೂಲ್ ಸೇರಬೇಕೆಂದು ವ್ಯವಸ್ಥೆಯಾಗಿದೆಯಂತೆ. ಅಫ್‌ಘಾನಿಸ್ತಾನದ ಅರಸು ಉತ್ತರ ದಿಕ್ಕಿನಿಂದ ದಾಳಿ ಮಾಡಬೇಕೆಂದು ಅವನನ್ನು ಪ್ರಾರ್ಥಿಸಲಾಗು ವುದಂತೆ.

"ಪರ್ಷಿಯಾದೇಶದ ರಾಜಕುಮಾರನೊಬ್ಬ ಇಲ್ಲಿಗೆ ಬಂದಿದ್ದಾನೆ. ಷಹರ್‌ಗಂಜಾಂನಲ್ಲಿ ಅವನಿಗೆ ಬಿಡಾರ ಮಾಡಲಾಗಿದೆ. ಅವನು ಸದ್ಯದಲ್ಲಿಯೇ ತನ್ನ ರಾಜ್ಯಕ್ಕೆ ಹಿಂದಿರುಗುತ್ತಾನಂತೆ. ಆ ದೇಶದ ಸೈನ್ಯ ಈ ಯವನ ರಾಕ್ಷಸನ ಸಹಾಯಕ್ಕೆ ಬರುವಂತೆ ಅವನು ವ್ಯವಸ್ಥೆ ಮಾಡುತ್ತಾನಂತೆ. ಅವನಿಗಂತೂ ಈಗ ಇಲ್ಲಿ ರಾಜೋಪಚಾರಗಳು ನಡೆಯುತ್ತಾ ಇವೆ.

"ಈ ಎರಡು ನಿಟ್ಟಿನ ಸಹಾಯವಲ್ಲದೆ, ಫ್ರೆಂಚರ ಸೀಮೆಯಿಂದ ಕೆಂಪು ಸಿಪಾಯಿಗಳನ್ನು ಕರೆತರಿಸಲು ಕೂಡ ಪ್ರಯತ್ನ ನಡೆದಿದೆ. ಅದಕ್ಕಾಗಿ ಫ್ರೆಂಚರ ವನೊಬ್ಬನ ಹಡಗನ್ನು ಕೊಂಡುಕೊಂಡು ಅದರಲ್ಲಿ ತನ್ನ ರಾಯಭಾರಿಗಳನ್ನು ಫ್ರೆಂಚರ ದೇಶಕ್ಕೆ ಕಳಿಸಿದ್ದಾನೆ

"ದಿನದಿನಕ್ಕೆ ಸಂಸ್ಥಾನದಲ್ಲಿರುವ ಕೋಟೆ ಕೊತ್ತಲಗಳನ್ನೆಲ್ಲಾ ಬಲ ಪಡಿಸುತ್ತಿದ್ದಾನೆ. ಸೈನ್ಯವನ್ನು ಹೆಚ್ಚಿಸುತ್ತಿದ್ದಾನೆ.

"ಇದೆಲ್ಲದರ ಜೊತೆಗೆ ಮರಾಠಿ ಪೇಷ್ವೆಗಳ ಒಳಜಗಳದಲ್ಲಿ ಪ್ರವೇಶಿಸಿ ಅವರಿಂದ ಆದಷ್ಟು ಸಹಾಯ ಪಡೆಯಬೇಕೆಂದು ಇಲ್ಲಿಂದ ಬಾಳಾಜಿರಾಯನೆಂಬ ನಿಯೋಗಿಯನ್ನು ಪುಣೆಗೆ ಕಳುಹಿಸಿದ್ದಾನೆ.

"ಈ ಯವನ ರಾಕ್ಷಸನ ಈ ಪ್ರಯತ್ನಗಳಲ್ಲಿ ಯಾವುದು ಫಲಿಸಿದರೂ ಸರಿ, ಇಲ್ಲದ್ದಿದ್ದರೂ ಸರಿ ಅವನು ಕಂಪನಿ ಸರ್ಕಾರದ ಮೇಲೆ ದಾಳಿ ಮಾಡಿಯೇ ಮಾಡು ತ್ತಾನೆ. ಅನುಕೂಲವಾದ ಸಂದರ್ಭಕ್ಕೆ ಕಾಯುತ್ತಿದ್ದಾನೆ ಅಷ್ಟೇ.

"ಕಂಪನಿ ಬಹಾದ್ದೂರ್ ಸರ್ಕಾರದವರು ಈ ಅಂಶಗಳನ್ನೆಲ್ಲಾ ಚಿತ್ತಕ್ಕೆ ತಂದುಕೊಂಡು ತಡಮಾಡದೆ ಈ ಯವನ ರಾಕ್ಷಸ ಕಥೆ ಮುಗಿಸಿಬಿಡಬೇಕೆಂದು ನೀವು ಇಂಗ್ಲಿಷ್ ಸರದಾರರಿಗೆ ಮನಮುಟ್ಟುವಂತೆ ತಿಳಿಸಿ.

"ನಾವು ಹೇಳಿರುವ ಅಂಶಗಳೆಲ್ಲಾ ನಿಜವಾದುವು. ಅವು ನಿಜವೆಂಬ ಅಂಶ ಇಂಗ್ಲಿಷ್ ಸರದಾರರಿಗೂ ಅವರ ಸರ್ಕಾರಕ್ಕೂ ವೇದ್ಯವಾಗಲು ಹೆಚ್ಚುಕಾಲ ಬೇಕಾಗುವುದಿಲ್ಲ.

"ಈ ಯವನ ರಾಕ್ಷಸ ಫ್ರೆಂಚ್ ಸರ್ಕಾರದೊಡನೆ ನಡೆಸಿರುವ ಪತ್ರವ್ಯವಹಾರ, ಸಂಧಿಪತ್ರದ ನಕಲು ಸಹ ಈ ನಿರೂಪಕ್ಕೆ ಜೊತೆಮಾಡಿದ್ದೇವೆ. ಅದನ್ನು ಇಂಗ್ಲಿಷ್ ಸರದಾರರಿಗೆ ತೋರಿಸಿರಿ.

"ನಮಗಾಗಿ ನೀವು ಎಷ್ಟು ಶ್ರಮಿಸುತ್ತಿದ್ದೀರೆಂಬುದು ನಮಗೆ ಚೆನ್ನಾಗಿ ತಿಳಿದಿದೆ. ನಮಗೆ ನಿಮ್ಮಲ್ಲಿ ಪೂರ್ಣ ನಂಬಿಕೆಯಿದೆ. ನೀವು ಇಂಗ್ಲಿಷ್ ಸರದಾರರೊಡನೆ, ಅವರ ಸರ್ಕಾರದೊಡನೆ ಮಾಡಿಕೊಳ್ಳಬಹುದಾದ ಎಲ್ಲ ಒಡಂಬಡಿಕೆಗಳಿಗೂ ನಮ್ಮ ಪೂರ್ಣ ಒಪ್ಪಿಗೆಯಿರುತ್ತದೆ. ನೀವು ಧೈರ್ಯದಿಂದ ಮುಂದುವರಿದು ಕೆಲಸ ಸಾಧಿಸಬೇಕು.

"ದೇವಿಯ ಅನುಗ್ರಹದಿಂದ ನೀವು ಕಾರ್ಯಸಿದ್ಧಿಯನ್ನು ಪಡೆದು ಸುಖಿಸುವಿರೆಂದು ನಂಬಿದ್ದೇವೆ – ಎಂದು ಬರೆಸಿದ ಬುದ್ಧಿ ನಿರೂಪ.

ಶ್ರೀರಂಗ."

ಪತ್ರದ ಭಾಷಾಂತರವನ್ನು ಆ ಮೂಲಾಗ್ರವಾಗಿ ಕೇಳಿದ ಲಾರ್ಡ್ ಮಾರ್ನಿಂಗ್‌ಟನ್‌ರವರು ತಿರುಮಲರಾಯರನ್ನು ಕುರಿತು:

"ಪ್ರಧಾನರೇ, ನೀವು ನಮ್ಮನ್ನು ಕಂಡು ಮಾತನಾಡಿದ್ದು ಒಳ್ಳೆಯದಾಯಿತು. ನಿಮ್ಮ ಮಹಾರಾಣೀಸಾಹಿಬಾ ಬರೆಸಿರುವ ಪತ್ರ ತುಂಬಾ ಶ್ಲಾಘ್ಯವಾಗಿದೆ. ಸಮಕಾಲೀನ ರಾಜಕಾರಣದಲ್ಲಿ ಅವರಿಗಿರುವ ಅಗಾಧ ಪ್ರಜ್ಞೆ, ದೂರದೃಷ್ಟಿ, ಕಂಪನಿ ಸರ್ಕಾರದಲ್ಲಿ ಅವರಿಗಿರುವ ಗಾಢವಾದ ನಂಬಿಕೆ, ವಿಶ್ವಾಸ ಇವನ್ನು ತಿಳಿದು ನಮಗೆ ತುಂಬ ಸಂತೋಷವಾಯಿತು. ಹಾಗೆಯೇ ಅವರಂಥ ಗಣ್ಯವ್ಯಕ್ತಿಗಳು ತೀವ್ರವಾದ ಕಷ್ಟ, ಕಾರ್ಪಣ್ಯಗಳಿಗೆ ಸಿಕ್ಕಿ ನರಳುತ್ತಿರುವರೆಂಬ ಸುದ್ದಿ ನಮ್ಮ ಮನಸ್ಸಿಗೆ ತುಂಬ ದುಃಖವನ್ನುಂಟುಮಾಡಿದೆ. ದಯಾಮಯನಾದ ದೇವರ ಕೃಪೆಯಿಂದ ನಾವು ನಿಮ್ಮ ರಾಣೀಸಾಹಿಬಾರವರ ಕಷ್ಟವನ್ನು ನಿವಾರಿಸುವುದು ಸಾಧ್ಯವಾದರೆ ನಮಗೆ ಅದಕ್ಕಿಂತ ಆನಂದದಾಯಕವಾದುದು ಮತ್ತೇನೂ ಇಲ್ಲ. ನಿಮ್ಮ ರಾಣೀಸಾಹಿಬಾರವರು ಈಗ್ಗೆ ಎರಡು ವರ್ಷದ ಹಿಂದೆ ಬರೆಸಿದರೆಂದು ನೀವು ತಿಳಿಸಿದ ಪತ್ರದ ಪ್ರತಿ ನಮ್ಮ ಕಲಿಕತ್ತೆ ಕಛೇರಿಯಲ್ಲಿದೆಯೆಂದಿರಲ್ಲ; ನಾವು ಅಲ್ಲಿಗೆ ತಲುಪಿದೊಡನೆಯೇ ಆ ಕಾಗದವನ್ನು ತೆಗೆಸಿ, ಪರಿಸ್ಥಿತಿಯನ್ನು ಎಲ್ಲ ದೃಷ್ಟಿಗಳಿಂದ ವಿಮರ್ಶಿಸಿ ನೋಡಿ ಸೂಕ್ತವಾದ ಕಾರ್ಯಕ್ರಮ ಕೈಗೊಳ್ಳುತ್ತೇವೆ.—"

"ಗೌರ್ನರ್ ಜನರಲ್ ಸಾಹೇಬರ ಮಾತು ಕೇಳಿ ನನ್ನ ಮನಸ್ಸಿಗೆ ತುಂಬ ಸಂತೋಷವಾಯಿತು. ಆದರೆ ನನ್ನದೊಂದು ಬಿನ್ನಹವನ್ನು ಕೇಳಬೇಕು."

"ಹೇಳಿ ಪ್ರಧಾನರೆ."

"ಈ ಅಲ್ಪನ ಅಭಿಪ್ರಾಯದಲ್ಲಿ ಸೂಕ್ತವಾದ ಕಾರ್ಯಕ್ರಮ ಒಂದೇ. ಟಿಪ್ಪೂ ಸುಲ್ತಾನನ ಮೇಲೆ ದಾಳಿಮಾಡಿ ಅವನನ್ನು ನಾಶಪಡಿಸಿ ಯದುವಂಶದ ಅರಸರನ್ನು ಮೈಸೂರು ಸಿಂಹಾಸನದಲ್ಲಿ ಸ್ಥಾಪಿಸುವುದು. – ಈ ಕಾರ್ಯವನ್ನು ಆದಷ್ಟು ಶೀಘ್ರವಾಗಿ ನೆರವೇರಿಸಿ ಕೊಡುವ ಆಶ್ವಾಸನ ತಮ್ಮಿಂದ ಬೇಡುತ್ತೇನೆ."

"ನಿಮ್ಮ ಅಭಿಪ್ರಾಯ ತಿಳಿಯಿತು. ನಮ್ಮ ನಿಮ್ಮ ಅಭಿಪ್ರಾಯಗಳಲ್ಲಿ ಅಂಥ ದೊಡ್ಡ ಅಂತರವೇನಿಲ್ಲ. ಆದರೆ, ಕಾರ್ಯಸಾಧನೆಗೆ ತಕ್ಕ ಮಾರ್ಗ ಯಾವುದೆಂಬುದನ್ನು ಆಲೋಚಿಸಿ ಮುಂದುವರಿಯಬೇಕು; ಅಲ್ಲವೆ? ನಮಗೆ ಸ್ವಲ್ಪ ಕಾಲಾವಕಾಶ ಕೊಡಿ. – ಅನವಶ್ಯಕವಾದ ವಿಳಂಬಕ್ಕೆ ನಾವು ಎಡೆಗೊಡುವುದಿಲ್ಲ. ಈ ಮಾತಿನಲ್ಲಿ ನೀವು ನಂಬಿಕೆಯಿಡಿ."

"ತಮ್ಮ ಮಾತನ್ನು ಪೂರ್ಣವಾಗಿ ನಂಬಿದ್ದೇನೆ. ತಾವು ಕೊಟ್ಟ ಈ ಆಶ್ವಾಸನವನ್ನು ರಾಣೀಸಾಹಿಬಾರವರಲ್ಲಿ ಬಿನ್ನವಿಸಿಕೊಳ್ಳುತ್ತೇನೆ."

"ನಮ್ಮ ಪ್ರಣಾಮಗಳನ್ನವರಿಗೆ ತಿಳಿಸಿ. ಅವರ ವಿಚಾರವಾಗಿ ನಮಗೆ ಸಂಪೂರ್ಣ ಗೌರವವಿದೆಯೆಂದೂ, ಅವರು ಕೈಗೊಂಡಿರುವ ಕಾರ್ಯದಲ್ಲಿ ಪೂರ್ಣವಾದ ಸಹಾನುಭೂತಿಯಿದೆಯೆಂದೂ ನಾವು ಹೇಳಿದೆವೆಂದು ತಿಳಿಸಿ. ಸಂತೋಷಕರವಾದ ಸನ್ನಿವೇಶದಲ್ಲಿ ಅವರನ್ನು ಕಂಡು ಅವರಿಗೆ ನಮ್ಮ ಪ್ರಣಾಮಗಳನ್ನು ಸಲ್ಲಿಸುವ ಕಾಲ ಬರಲಿ ಎಂದು ನಾವು ದಯಾಮಯನಾದ ದೇವರನ್ನು ಸದಾ ಪ್ರಾರ್ಥಿಸುತ್ತೇವೆಂದೂ ತಿಳಿಸಿ."

"ಅಪ್ಪಣೆ."

"ದುಬಾಷಿಗಳೇ, ನೀವು ನಮಗೆ ಭಾಷಾಂತರಿಸಿದ ಪತ್ರಕ್ಕೆ ಏನೆಂದು ರುಜುವಾಗಿದೆ ಎಂದಿರಿ?"

"ಶ್ರೀರಂಗ."

"ಮೈಸೂರಿನ ಮಹಾರಾಣೀಸಾಹಿಬಾರವರ ಹೆಸರು 'ಲಕ್ಷಮಮ್ಮಣ್ಣಿ' ಎಂದು ಕೇಳಿದ್ದೆವು. ಈ ಪತ್ರ ಅವರ ಪರವಾಗಿ ಬೇರೆಯವರು ಬರೆದಿದ್ದೇನು?"

"ಅಲ್ಲ. ಸ್ವತಃ ರಾಣಿಯವರೇ ಬರೆಸಿದ್ದು. ಅಲ್ಲವೆ ತಿರುಮಲರಾಯರೇ?"

"ಹೌದು ಪ್ರಭು. ಈ ಸಂಬಂಧದಲ್ಲಿ ಮಹಾರಾಣಿಯವರು ಬರೆಯುವ ಎಲ್ಲ ಕಾಗದಗಳಿಗೂ ಆ ರೀತಿ ಅಂಕಿತ ಮಾಡುತ್ತಾರೆ. ದುಬಾಷಿಗಳಿಗೂ ಇದು ತಿಳಿದ ವಿಷಯವೇ."

"ಹಾಗೇನು? ಆ ಮಾತು ನೀವೇಕೆ ನಮಗೆ ಮೊದಲೇ ಹೇಳಲಿಲ್ಲ ದುಬಾಷಿಗಳೆ?"

"ಆ ಅಂಶ ಚಿತ್ತಕ್ಕೆ ವೇದ್ಯವಾಗಿರಬಹುದೆಂದು ಹೇಳಲಿಲ್ಲ. ಕಂಪನಿ ಸರ್ಕಾರಕ್ಕೆ ರಾಣಿಯವರಿಂದ ಬಂದಿರುವ ಎಲ್ಲ ಪತ್ರಗಳಿಗೂ ಅದೇ ಅಂಕಿತವಿದೆ. ಪ್ರಭುಗಳಿಗೆ ಆ ಪತ್ರವನ್ನು ಸಮರ್ಪಿಸಿ ತಿರುಮಲರಾಯರೇ; ಪ್ರಭುಗಳು ರಾಜ ಮುದ್ರೆಯನ್ನು ನೋಡಲಿ."

ತಿರುಮಲರಾಯರು ಎದ್ದು ನಿಂತು ತಮ್ಮ ಕಯ್ಯಲ್ಲಿದ್ದ ಆ ಪತ್ರವನ್ನು ಲಾರ್ಡ್ ಮಾರ್ನಿಂಗ್‌ಟನ್‌ರವರಿಗೆ ಅರ್ಪಿಸಿದರು.

ಅವರದನ್ನು ತೆಗೆದುಕೊಂಡು ನೋಡಿ :

"ತಿರುಮಲರಾಯರೇ, ನಮ್ಮ ಕಲಿಕತ್ತೆ ಕಛೇರಿಯಲ್ಲಿ ಈ ಪತ್ರದ ನಕಲು ಹುಡುಕಲು ತಡವಾದರೆ, ಒಂದು ವೇಳೆ ಅದು ಸಿಕ್ಕದೆ ಹೋದರೆ, ಅನವಶ್ಯಕವಾಗಿ ಕಾಲಹರಣವಾಗುತ್ತದೆ – ನಕಲು ತರಿಸಿಕೊಳ್ಳಲು. ಈ ಪತ್ರ ನಮ್ಮಲ್ಲಿರಲಿ."

"ಸ್ವೀಕರಿಸಬೇಕು."

ಲಾರ್ಡ್ ಮಾರ್ನಿಂಗ್‌ಟನ್‌ರವರು ಪೀಠದಿಂದೆದ್ದು "ನಿಮ್ಮನ್ನು ನೋಡಿದ್ದು ತುಂಬಾ ಸಂತೋಷವಾಯಿತು. ಇನ್ನೂ ಸಂತೋಷದ ಸನ್ನಿವೇಶದಲ್ಲಿ ಮತ್ತೆ ಸೇರೋಣ" ಎಂದು ಹೇಳಿ ಹೊರಟರು.

ತಿರುಮಲರಾಯರು ಕೈಜೋಡಿಸಿ ಅವರಿಗೆ ವಂದಿಸಿದರು.

§

ಚನ್ನಪುರಿಯ ಸೇಂಟ್‌ಜಾರ್ಜ ಕೋಟೆಯ ಗೌರ್ನರ್‌ರವರು ತಮ್ಮ ಅತಿಥಿಯಾಗಿದ್ದ ಗೌರ್ನರ್ ಜನರಲ್ ಲಾರ್ಡ್ ಮಾರ್ನಿಂಗ್‌ಟನ್‌ರವರ ಸೌಖ್ಯಕ್ಕಾಗಿ ಸಾಧ್ಯವಾದ ಎಲ್ಲ ವ್ಯವಸ್ಥೆಗಳನ್ನೂ ಮಾಡಿದ್ದರು. ಆದರೇನು? – ಚನ್ನಪುರಿಯ ಬೇಸಿಗೆಯ ಹಗಲಿನ ದಗೆಯನ್ನು ಸಹಿಸುವುದು, ಆಗತಾನೆ ಇಂಗ್ಲೆಂಡಿನಿಂದ ಬಂದಿದ್ದ ಲಾರ್ಡ್ ಮಾರ್ನಿಂಗ್‌ಟನ್‌ರವರಿಗೆ ಸಾಕು ಸಾಕಾಗಿಹೋಗಿತ್ತು.

ರಾತ್ರಿಯ ಊಟ ಮುಗಿದಿದ್ದೇ ತಡ, ಅವರು ತಮ್ಮ ಸಹೋದರರಾದ

ಆರ್ಥರ್ ವೆಲ್ಲೆಸ್ಲಿಯವರನ್ನು ಕರೆದುಕೊಂಡು ತಾವು ಇಳಿದುಕೊಂಡಿದ್ದ ಸೌಧದ ಮಾಳಿಗೆಗೆ ಹೋದರು.

ಎಲ್ಲೆಲ್ಲೂ ಬೆಳದಿಂಗಳು ಪ್ರಕಾಶಮಾನವಾಗಿ ಹಬ್ಬಿತ್ತು. ಮುಂದೆ ಅನತಿ ದೂರದಲ್ಲಿ ವಿಶಾಲ ಸಮುದ್ರ ಬಿಳಿ ಮರಳಿಗೆ ಅಪ್ಪಳಿಸಿ ಮೊರೆಯುತ್ತಿತ್ತು.

ಅಣ್ಣತಮ್ಮಂದಿರಿಬ್ಬರೂ ಮಾಳಿಗೆಯ ಮೇಲೆ ಸಿದ್ಧವಾಗಿದ್ದ ಆಸನಗಳಲ್ಲಿ ಕುಳಿತರು ಅವರ ಏಕಾಂತಕ್ಕೆ ಭಂಗ ತರಬಾರದೆಂದು ಅಲ್ಲಿದ್ದ ಬಟ್ಲರ್ ಮಾಳಿಗೆಯ ಒಂದು ಮೂಲೆಗೆ ಹೋಗಿ ನಿಂತ.

ಕಡಲ ಮೇಲೆ ಹಾದು ಬರುತ್ತಿದ್ದ ಮಂದಮಾರುತ ಹಿತವಾಗಿತ್ತು. ಚೈತನ್ಯದಾಯಕವಾಗಿತ್ತು.

ಲಾರ್ಡ್ ಮಾರ್ನಿಂಗ್‌ಟನ್‌ರವರು ತಮ್ಮ ಮುಂದಿದ್ದ ಟೀಪಾಯ್ ಮೇಲಿದ್ದ ಪೆಟ್ಟಿಗೆಯಿಂದ ಒಂದು ಸಿಗಾರ್ ಅನ್ನು ತೆಗೆದು ವೆಲ್ಲೆಸ್ಲಿಯವರಿಗೆ ಕೊಟ್ಟು ತಾವು ಇನ್ನೊಂದು ತೆಗೆದುಕೊಂಡರು. ಬಟ್ಲರ್ ಓಡಿ ಬಂದು ಅವರಿಬ್ಬರ ಸಿಗಾರ್‌ಗಳಿಗೂ ಬೆಂಕಿ ಹೊತ್ತಿಸಿದ. ವಿರಾಮವಾಗಿ ಧೂಮಪಾನ ಮಾಡುತ್ತಾ ಆ ಅಣ್ಣ ತಮ್ಮಂದಿರು ಮಾತನಾಡಲಾರಂಭಿಸಿದರು.

"ಬ್ರದರ್, ನಾಳೆ ಬೆಳಗ್ಗೆ ಒಂಭತ್ತು ಗಂಟೆಗೆ ಕಲ್ಕತ್ತಾಕ್ಕೆ ಹೊರಡುತ್ತದಂತೆ ನಿಮ್ಮ ಹಡಗು. ನಿಮ್ಮ ಮಿಲಿಟರಿ ಸೆಕ್ರೆಟರಿ ಹೇಳಿದರು."

"ಹೌದು ವೆಲ್ಲೆಸ್ಲಿ. ನಾನು ಇಲ್ಲಿಂದ ಹೊರಡುವುದಕ್ಕೆ ಮೊದಲು ನಿನ್ನೊಡನೆ ಮಾತನಾಡಬೇಕಾದ ಕೆಲವು ವಿಚಾರಗಳಿದ್ದುದರಿಂದಲೇ ನಿನ್ನನ್ನಿಲ್ಲಿಗೆ ಕರೆದುಕೊಂಡು ಬಂದಿದ್ದು."

"ಅದಕ್ಕೇನು! ಮಾತನಾಡೋಣ."

"ಆ ಮೈಸೂರು ಮಹಾರಾಣೀಸಾಹಿಬಾರವರ ಪ್ರಧಾನ ತಿರುಮಲರಾವ್ ಈ ಸಂಜೆ ನನ್ನ ಭೇಟಿಗೆ ಬಂದಿದ್ದ."

"ನಾನೂ ಆತನನ್ನು ನೋಡಿದ್ದೇನೆ ಬ್ರದರ್. ಆತ ಒಳ್ಳೆ ಬುದ್ಧಿವಂತ, ವಾಚಾಳಿ."

"ನಾನೂ ಹಾಗೇ ಅಭಿಪ್ರಾಯಪಡುತ್ತೇನೆ. ಆದರೆ ನಾನು ನಿನ್ನನ್ನು ಕೇಳುವುದೇನೆಂದರೆ, ಅವನು ನಂಬಿಕೆಗೆ ಅರ್ಹನೆ?"

"ಅರ್ಹನೆಂದು ನನ್ನ ಅಭಿಪ್ರಾಯ ಬ್ರದರ್. ಕಳೆದ ಹದಿನೈದು ಹದಿನಾರು ವರ್ಷಗಳಿಂದ ಅವನು ನಮ್ಮ ಜೊತೆಯಲ್ಲಿಯೇ, – ಇಲ್ಲಿ, ತಂಜಾವೂರಿನಲ್ಲಿ –

ಇಲ್ಲೇ ಇದ್ದಾನೆ. ನಮ್ಮ ಸಹಾಯದಿಂದ ತನ್ನ ರಾಣಿಯ ವಂಶದವರನ್ನು ಮೈಸೂರು ಸಿಂಹಾಸನದಲ್ಲಿ ಪುನಃಪ್ರತಿಷ್ಠೆ ಮಾಡಲು ತುಂಬ ಪ್ರಯತ್ನ ಮಾಡುತ್ತಾ ಇದ್ದಾನೆ. ನನ್ನ ಅಭಿಪ್ರಾಯ ಹೇಳುವುದಾದರೆ ನಾವು ಆವನನ್ನು ಸರಿಯಾಗಿ ಉಪಯೋಗಿಸಿಕೊಂಡಿಲ್ಲ. ಉಪಯೋಗಿಸಿಕೊಂಡಾಗ ಕೂಡ ನಾವು ಅವನೊಡನೆ ಸರಿಯಾಗಿ ನಡೆದುಕೊಳ್ಳಲಿಲ್ಲ."

"ಹಾಗೇನು ?"

"ಹಾಗೆಂದು ನಾನು ಭಾವಿಸಿದ್ದೇನೆ. ಇಂದಿಗೂ ಮೈಸೂರು ರಾಜ್ಯದಲ್ಲಿ ಆತನಿಗೆ ಬೆಂಬಲಿಗರಿದ್ದಾರೆ. ಅಂದರೆ, ಅವರೆಲ್ಲಾ ರಾಣಿಯ, ರಾಜವಂಶದ ಬೆಂಬಲಿಗರು. ಅವರ ಮೂಲಕ ಅವನು ಟಿಪ್ಪೂವಿನ ವಿರುದ್ಧವಾಗಿ ಶ್ರೀರಂಗಪಟ್ಟಣ ದಲ್ಲೇ ದಂಗೆ ಎಬ್ಬಿಸಬೇಕು. ಆ ಹೊತ್ತಿಗೆ ಸರಿಯಾಗಿ ನಾವು ನಮ್ಮ ಸೈನ್ಯಾಚರಣೆ ಯಿಂದ ಆ ದಂಗೆಗೆ ಬೆಂಬಲಕೊಟ್ಟು ಟಿಪ್ಪೂವನ್ನು ಸದೆಬಡೆಯಬೇಕು ಎಂದು ವ್ಯವಸ್ಥೆಯಾಗಿತ್ತಂತೆ. ಆತ ತನ್ನ ಮಾತಿನಂತೆ ದಂಗೆ ಎಬ್ಬಿಸಿದ. ನಾವು ನಮ್ಮ ಮಾತು ಉಳಿಸಿಕೊಂಡಂತೆ ಕಾಣುವುದಿಲ್ಲ. ಪರಿಣಾಮ, ಟಿಪ್ಪೂ ದಂಗೆಯನ್ನು ಅಡಗಿಸಿ ಅದಕ್ಕೆ ಸಂಬಂಧಿಸಿದವರನ್ನು ಗಲ್ಲಿಗೇರಿಸಿದ."

"ತುಂಬ ದುಃಖದಾಯಕವಾದ ಸುದ್ದಿ ಇದು ವೆಲ್ಲೆಸ್ಲಿ."

"ಇನ್ನೊಂದು ವಿಚಾರ ಬ್ರದರ್ : ಈಗ್ಗೆ ಹದಿಮೂರು ವರ್ಷಗಳ ಹಿಂದೆ ಲಾರ್ಡ್ ಮೆಕಾರ್ಟ್‌ನಿಯವರು ಮದರಾಸು ಗೌರ್ನರ್ ಆಗಿದ್ದಾಗ ನಮ್ಮ ಸೇನೆ ಗಳು ಟಿಪ್ಪೂ ಸುಲ್ತಾನನ ರಾಜ್ಯದ ಮೇಲೆ ದಾಳಿಯನ್ನಾರಂಭಿಸಿ ಸುಲ್ತಾನನ ರಾಜ್ಯದ ಗಡಿಯ ಕರೂರು ಕೋಟೆಯನ್ನು ಆಕ್ರಮಿಸಿಕೊಂಡುವು. ಆ ಹಿಂದೆ ತಿರುಮಲರಾಯನೊಡನೆ ಆಗಿದ್ದ ಒಪ್ಪಂದದಂತೆ ಆ ಕೋಟೆಯನ್ನು ಅವನಿಗೆ ಒಪ್ಪಿಸಿದುವು. ಅಲ್ಲಿ ಆತ ಮೈಸೂರು ರಾಜರ ಧ್ವಜ ಹಾರಿಸಿ ಅವರ ಹೆಸರಿನಲ್ಲಿ ಆಡಳಿತ ನಡೆಸಿದ. ಮತ್ತು ಮೊದಲನೆಯ ಕೋಟೆಯನ್ನು ರಾಜರ ಪ್ರತಿನಿಧಿಯ ವಶಕ್ಕೆ ಕೊಟ್ಟೊಡನೆ ರಾಜರು ಕೊಡಲೊಪ್ಪಿದ್ದ ಯುದ್ಧವ್ಯಯದ ಹಣವನ್ನೂ ಕೊಟ್ಟ ಎಂದು ಕೇಳಿದ್ದೇನೆ. ಆದರೆ ಏನೇನೋ ಕಾರಣಗಳಿಂದಾಗಿ ಆ ಸಲ ಟಿಪ್ಪೂ ಸುಲ್ತಾನನೊಡನೆ ರಾಜಿ ಆಯಿತು. ಕೋಟೆ ಆತನ ಕೈ ತಪ್ಪಿತು."

"ಸರಿ ಸರಿ. ಇದು ಹಳೆಯ ವ್ಯಾಧಿಯೆಂದು ತೋರುತ್ತದೆ, ವೆಲ್ಲೆಸ್ಲಿ. ಮೊನ್ನೆ ಆರು ವರ್ಷದ ಹಿಂದೆ ಕೂಡ ಹಾಗೆಯೇ ಆಯಿತು. ಶ್ರೀರಂಗಪಟ್ಟಣದ ಬಾಗಿಲಲ್ಲಿ ಬೀಡುಬಿಟ್ಟ ಲಾರ್ಡ್ ಕಾರನ್‌ವಾಲಿಸ್‌ರು, ಟಿಪ್ಪೂವಿನೊಡನೆ ಸಂಧಿ

ಮಾಡಿಕೊಂಡರು – ಈ ವಿಷಯ ವಿವರವಾಗಿ ಕೇಳಿದ್ದೇನೆ. ನನಗೆ ಅನ್ನಿಸುತ್ತದೆ ವೆಲ್ಲೆಸ್ಲಿ : ನಾವಾಗಿ ಟಿಪೂವನ್ನು ಬೆಳೆಯಗೊಟ್ಟಿದ್ದೇವೆ. ತಿರುಮಲರಾವ್ ಈ ಸಂಜೆ ನಮಗೊಂದು ಪತ್ರ ಓದಿ ತೋರಿಸಿದ – ಅವನ ರಾಣಿ ಅವನಿಗೆ ಎರಡು ವರ್ಷದ ಹಿಂದೆ ಬರೆದ ಪತ್ರ. ಆ ಕಾಗದ ನನಗೆ ಆಶ್ಚರ್ಯವನ್ನುಂಟು ಮಾಡಿತು. ಆ ರಾಣಿ, ಆ ಕಾಗದದಲ್ಲಿ ಇದೇ ಮಾತು ಹೇಳಿದ್ದಾರೆ. ಆಕೆ ತುಂಬಾ ಚತುರೆ ಯೆಂದು ಕಾಣುತ್ತದೆ. ಇಲ್ಲಿನ ರಾಜಕೀಯ ಪರಿಸ್ಥಿತಿಯನ್ನು ತುಂಬ ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಆಕೆ ಈಗ್ಗೆ ಎರಡು ವರ್ಷದ ಹಿಂದೆ ಹೇಳಿದ್ದೆಲ್ಲ – ಒಂದಲ್ಲ ನಾಲ್ಕಾರು ಘಟನೆಗಳು – ಒಂದೂ ತಪ್ಪದಂತೆ ಸರಿಯಾಗಿ ನಡೆದಿವೆ. ಆ ವಿಚಾರ ಇರಲಿ. ನಾವು ಟಿಪೂ ವಿಚಾರವಾಗಿ ಕೊನೆ ನಿರ್ಣಯವನ್ನು ಕೈಗೊಂಡು ಅವನನ್ನು ಮುಗಿಸಿಬಿಡಬೇಕು. ಇಲ್ಲದಿದ್ದರೆ ಇಲ್ಲಿ ನಮಗೆ ಉಳಿಬಾಳಿಲ್ಲ. ದಕ್ಷಿಣ ಇಂಡಿಯದ ಸ್ಥಿತಿಗತಿ ಒಂದು ಹತೋಟಿಗೆ ಬರುವುದಿಲ್ಲ. – ಏನೆನ್ನುತ್ತಿ ?"

"ನಾನು ನಿಮ್ಮ ಅಭಿಪ್ರಾಯವನ್ನು ಪೂರ್ಣವಾಗಿ ಒಪ್ಪುತ್ತೇನೆ ಬ್ರದರ್. ಟಿಪೂವನ್ನು ಮುಗಿಸಿಬಿಡದೆ ಗತ್ಯಂತರವಿಲ್ಲ. ಆದರೆ, ಬೋರ್ಡಿನವರ, ಹೋಂ ಗೌರ್ನಮೆಂಟ್‌ನವರ ಕಾರ್ಯನೀತಿ ಹೇಗಿದೆಯೋ. ಲಾರ್ಡ್ ಕಾರನ್‌ವಾಲಿಸ್, ಅವರ ಅನಂತರ ಸರ್ ಜಾನ್‌ಷೋರ್—ಈ ಇಬ್ಬರು ಗೌರ್ನರ್ ಜನರಲ್ಲರೂ ದೇಶೀಯ ರಾಜರ ವಿಚಾರವಾಗಿ ತಟಸ್ಥ ನೀತಿಯನ್ನೇ ಅನುಸರಿಸುತ್ತಿದ್ದರು."

"ಆ ರೀತಿ ನಡೆದುಕೊಳ್ಳಬೇಕೆಂದು ಅವರಿಗೆ ಸೂಚಿಸಲಾಗಿತ್ತು. ಹಾಗೆ ನಡೆದುಕೊಂಡರು. ಈಗ ಆ ನೀತಿ ಬದಲಾಗಿದೆ ವೆಲ್ಲೆಸ್ಲಿ. ಫ್ರಾನ್ಸಿನ ರಾಜಕಾರಣ ವನ್ನೂ ನೆಪೋಲಿಯನ್ನನ ಮಹತ್ವಾಕಾಂಕ್ಷೆಯನ್ನೂ ಗಮನಕ್ಕೆ ತೆಗೆದುಕೊಂಡು, ಬ್ರಿಟಿಷ್ ಸರ್ಕಾರ ತನ್ನ ಕಾರ್ಯನೀತಿಯನ್ನು ಈಗ ಹೊಸದಾಗಿ ರೂಪಿಸಿದೆ. ಆ ನೀತಿಯನ್ನು ನಾನು ಕಾರ್ಯಗತ ಮಾಡಬೇಕಾಗಿದೆ."

"ತುಂಬ ಸಂತೋಷ ಬ್ರದರ್. ಇಲ್ಲಿ ನಮ್ಮ ತಟಸ್ಥ ನೀತಿ ಕೊನೆಗಂಡಿದ್ದು ನನಗೆ ತುಂಬ ಸಂತೋಷ. ಈ ತಟಸ್ಥ ನೀತಿಯಿಂದ ನಮ್ಮ ಮಿಲಿಟರಿ ಅಧಿಕಾರಿ ಗಳೆಲ್ಲ – ನಾನೂ ಸೇರಿ – ಸೋಮಾರಿಗಳಾಗಿ ಬಿಟ್ಟಿದ್ದೇವೆ ! ಇದರಲ್ಲಿ ನಮ್ಮ ತಪ್ಪೇನೂ ಇಲ್ಲ ! ಚುರುಕಾಗಿಡುವ ಕೆಲಸವಿದ್ದರಲ್ಲವೆ ?"

"ಚಟುವಟಿಕೆಯ ಜೀವನವೇ ಬೇಡವಾಗಿದೆಯೇನೋ ಎನ್ನುವಷ್ಟುಮಟ್ಟಿಗೆ ನಿಮ್ಮ ಸ್ನೇಹಿತರು ಸೋಮಾರಿಗಳಾಗಿದ್ದಾರೆಂಬುದನ್ನು ನಾನು ಇಲ್ಲಿಗೆ ಬಂದಾಗಿ

ನಿಂದ ಗಮನಿಸುತ್ತಿದ್ದೇನೆ ವೆಲ್ಲೆಸ್ಲಿ. ಇರಲಿ. ಅದನ್ನು ಸರಿಪಡಿಸುವುದು ಅಂಥ ಕಷ್ಟದ ಕೆಲಸವೇನಲ್ಲ. ನನ್ನ ಅಧಿಕಾರಾವಧಿ ಮುಗಿದು ನಾನು ಇಂಡಿಯವನ್ನು ಬಿಡುವ ಹೊತ್ತಿಗೆ, ಟಿಪ್ಪೂ ಅವತಾರ ಮುಗಿಯಬೇಕು. ಫ್ರೆಂಚರು ಕೈಕಟ್ಟಿ ಕೂರಬೇಕು. ನೈಜಾಮ್ ನಮ್ಮ ಆಶ್ರಿತನಾಗಬೇಕು.–ಇವಿಷ್ಟು ದಕ್ಷಿಣ ಇಂಡಿಯಾ ದಲ್ಲಾಗಬೇಕಾದ ಕಾರ್ಯ. ಹೇಗಾದರೂ ಮಾಡಿ ಇವಿಷ್ಟು ಕಾರ್ಯವನ್ನೂ ಸಾಧಿಸಲೇಬೇಕೆಂದು ನಿರ್ಧರಿಸಿದ್ದೇನೆ."

"ಈ ಮಾತು ಕೇಳಿ ನನಗೆ ತುಂಬಾ ಸಂತೋಷವಾಯಿತು. ನಿಮ್ಮ ಸಂಕಲ್ಪ ಅತ್ಯುತ್ತಮವಾದದ್ದು. ಕರುಣಾಳುವಾದ ದೇವರ ಕೃಪೆಯಿಂದ ನಿಮ್ಮ ಈ ಸಂಕಲ್ಪ ಸಿದ್ಧಿಸಲಿ ಎಂದು ಪ್ರಾರ್ಥಿಸುತ್ತೇನೆ."

"ಹಾಗೆ ಪ್ರಾರ್ಥನೆ ಮಾಡುವುದರ ಜೊತೆಗೆ, ಟಿಪ್ಪೂವಿನ ಮೇಲಿನ ದಾಳಿಯ ವಿಚಾರವಾಗಿ ನೀನು ತುಂಬ ಆಸಕ್ತಿ ವಹಿಸಬೇಕು. ಕಳೆದ ಎರಡು ವರ್ಷಗಳಿಂದ ನೀನು ಇಲ್ಲಿದ್ದು ಇಲ್ಲಿನ ಸ್ಥಿತಿಗತಿಗಳನ್ನು ಚೆನ್ನಾಗಿ ತಿಳಿದಿದ್ದೀಯೆ. ನಿನ್ನ ಅನುಭವದ ಲಾಭ ನನಗೆ ದೊರೆಯಲಿ."

"ನಾನು ಸದಾಕಾಲದಲ್ಲಿಯೂ ತಮ್ಮ ಸೇವೆಗೆ ಸಿದ್ಧನಾಗಿದ್ದೇನೆ."

"ತುಂಬಾ ಸಂತೋಷ ವೆಲ್ಲೆಸ್ಲಿ. ನಾವು ಇದನ್ನೆಲ್ಲಾ ಮಾತನಾಡಿದೆವೆಂದು ನೀನು ಯಾರೊಡನೆಯೂ ಹೇಳಬೇಕಾಗಿಲ್ಲ. ಆದರೆ, ಕಾರ್ಯನೀತಿಯಲ್ಲಿ ಬದಲಾವಣೆಯಾಗುವ ಸಂಭವವಿದೆಯೆಂಬುದನ್ನು ಸೂಚ್ಯವಾಗಿ ಹೇಳಿ ನಿನ್ನ ಸ್ನೇಹಿತರ ಮನಸ್ಸು ನಮ್ಮ ಹೊಸ ಕಾರ್ಯಕ್ರಮಕ್ಕೆ ಒಗ್ಗಿಕೊಳ್ಳುವಂತೆ ಮಾಡು. ತಿರುಮಲರಾಯನ ಪರಿಚಯ ಬೆಳೆಸಿಕೋ. ನಮ್ಮ ಕಾರ್ಯದಲ್ಲಿ ಆತನಿಂದಾಗ ಬಹುದಾದ ಸಹಾಯವನ್ನೆಲ್ಲಾ ತೆಗೆದುಕೊಳ್ಳೋಣ."

"ಆಗಲಿ. ತಮ್ಮ ಸೂಚನೆಯಂತೆ ನಡೆದುಕೊಳ್ಳುತ್ತೇನೆ."

ಅಣ್ಣತಮ್ಮಂದಿರಿಬ್ಬರೂ ಎದ್ದು ಮಾಳಿಗೆಯಿಂದಿಳಿದರು. ತಮ್ಮ ತಮ್ಮ ಶಯ್ಯಾಗೃಹಗಳಿಗೆ ಹೊರಡುವ ಮುನ್ನ ಒಬ್ಬರನ್ನೊಬ್ಬರು ಅಪ್ಪಿಕೊಂಡು "ಗುಡ್ ನೈಟ್" ಹೇಳಿದರು.

§

"ಓಹೋ! ಇವನು ಬಂದಮೇಲೆ ಆ ಕಳ್ಳ ಪುಂಗೀಲಿ ಹೊಸ ರಾಗ ಆರಂಭಿಸಿದನೋ?– ಎಲ್ಲಿ ಇನ್ನೊಂದು ಸಲ ಓದು ಅದನ್ನ ನಾದಿವ್" ಎಂದು ಗರ್ಜಿಸಿದರು ಟಿಪೂ ಸುಲ್ತಾನರು.

ನಾದಿವ್ ನಮ್ರಭಾವದಿಂದ ಓದಿದ:

"ಇಂದಿನ ಫ್ರೆಂಚ್ ಜನಾಂಗದವರಷ್ಟು ಕೀಳುಮಟ್ಟದ, ಅಪಾಯಕಾರಿಯಾದ ಪಿತೂರಿಗಾರ ಜನ ಈವರೆಗೆ ಯಾವ ರಾಷ್ಟ್ರದಲ್ಲಿಯೂ ಹುಟ್ಟಿಲ್ಲ. ಈ ಅಪಾಯಕಾರಿ ಜನರು ಆಡುವ ಮರುಳು ಮಾತುಗಳಿಂದ ಪ್ರಾಜ್ಞರೂ ವಿವೇಕಶಾಲಿಗಳೂ ಆದ ನಿಮ್ಮ ಮನಸ್ಸಿನ ಮೇಲೆ ಯಾವ ವಿಧವಾದ ದುಷ್ಪರಿಣಾಮವೂ ಆಗುವುದಿಲ್ಲವೆಂದು ಭಾವಿಸಿದ್ದೇನೆ. ಆದರೂ ಈ ಕೆಟ್ಟ ಜನ ನಿಮ್ಮ ಸಮೀಪದಲ್ಲಿ ಸೇರಿಕೊಂಡಿದ್ದಾರೆಂಬುದನ್ನೂ, ಅವರು ನಿಮ್ಮನ್ನು ನಮ್ಮ ಕಂಪೆನಿಯ ವಿರುದ್ಧವಾಗಿ ಎತ್ತಿಕಟ್ಟುತ್ತಿರುವರೆಂಬ ಅಂಶವನ್ನೂ ನಾನು ನಿರ್ಲಕ್ಷ್ಯಿಸುವಂತೆ ಇಲ್ಲ. ಏಕೆಂದರೆ, ನನ್ನ ಸ್ಥಾನಬಲದಿಂದ, ನಿಮ್ಮ ಮತ್ತು ಫ್ರೆಂಚ್ ಸರ್ಕಾರದ ನಡುವೆ ನಡೆದಿರುವ ಪತ್ರವ್ಯವಹಾರದ ಸ್ವರೂಪವೇನೆಂಬುದು ನನಗೆ ವಿವರವಾಗಿ ಗೊತ್ತಾಗಿದೆ—"

"ಕೇಳಿದಿರಾ ದಿವಾನರೇ,– ಫ್ರೆಂಚರು ಅಪಾಯಕಾರಿ ಪಿತೂರಿಗಾರರು! ಇವರು ಸಭ್ಯರು! ಲಕ್ಷ್ಮಮ್ಮಣ್ಣಿಯ ಮಾತು ಕೇಳಿಕೊಂಡು, ಅವಳ ಪಿತೂರಿಯಲ್ಲಿ ಸೇರಿಕೊಂಡು ನಮ್ಮ ಮೇಲೆ ವಿಷ ಕಾರುತ್ತಿರುವವರು ಯಾರು?– ಈ ಸಭ್ಯ ಪಿತೂರಿಗಾರರಲ್ಲವೇನು? ನನ್ನ ಮತ್ತು ಫ್ರೆಂಚರ ನಡುವೆ ನಡೆದ ಕಾಗದ ಪತ್ರಗಳ ಸಮಾಚಾರವೆಲ್ಲಾ ಇವನಿಗೆ– ಈಗ್ಗೆ ಆರು ತಿಂಗಳ ಹಿಂದೆ ಇಲ್ಲಿಗೆ ಬಂದ ಈ ಗೌರ್ನರ್ ಜನರಲ್ಲನಿಗೆ ಗೊತ್ತಂತೆ! ಗೊತ್ತಾಗಲಿ; ಏನು ಮಾಡಿಯಾನು? ನನ್ನ ಮತ್ತು ಫ್ರೆಂಚರ ಸಖ್ಯ ಲೋಕವಿಖ್ಯಾತವಾದದ್ದು! ನನಗೆ ಬೇಕಾದವರೊಡನೆ ನಾನು ಸ್ನೇಹಮಾಡುತ್ತೇನೆ. ಇವನು ಯಾರು ಆ ವಿಚಾರದಲ್ಲಿ ನನಗೆ ಬುದ್ಧಿ ಹೇಳುವುದಕ್ಕೆ!—ಆಗಲಿ ಮುಂದಕ್ಕೆ ಓದು ನಾದಿವ್."

"ನೀವು ಬುದ್ಧಿವಂತರೆಂದೂ ವಿವೇಕಶಾಲಿಗಳೆಂದೂ ನಾನು ಬಲ್ಲೆ. ಆದ್ದರಿಂದ ನಿಮ್ಮ ಯುದ್ಧ ಸಿದ್ಧತೆಗಳನ್ನು ಕುರಿತು ಮೇಲಿಂದ ಮೇಲೆ ನನ್ನ ಕಡೆಗೆ ಬರುತ್ತಿರುವ ಸುದ್ದಿಗಳನ್ನು ನಾನು ಅಷ್ಟಾಗಿ ನಂಬುತ್ತಿಲ್ಲ. ಆದರೂ ಇಂಥ ಸುದ್ದಿಗಳಿಂದ ನಮ್ಮೆರಡು ಸರ್ಕಾರಗಳ ನಡುವಿನ ಸ್ನೇಹ ಸಂಬಂಧ ಕೆಡದಂತೆ

ನೋಡಿಕೊಳ್ಳಲು ಏನಾದರೊಂದು ವ್ಯವಸ್ಥೆ ಮಾಡುವುದು ಒಳ್ಳೆಯದೆಂದು ನನಗೆ ತೋರುತ್ತದೆ—"

"ಭಲೆ! ನನ್ನ ಯುದ್ಧ ಸಿದ್ಧತೆಯ ಸುದ್ದಿಗಳು ಮೇಲಿಂದ ಮೇಲೆ ಇವನಿಗೆ ಬರುತ್ತಿವೆಯಂತೆ! ಇವನು ನಂಬುತ್ತಿಲ್ಲವಂತೆ! ಪಾಪ, ಹಸುಗೂಸು! ಬಾಯಲ್ಲಿ ಬೆರಳಿಟ್ಟರೆ ಕಚ್ಚುವುದಕ್ಕೂ ಬರುವುದಿಲ್ಲ! ಅವನು ಮಾಡುತ್ತಿರುವ ಯುದ್ಧ ಸಿದ್ಧತೆ ನನಗೆ ಗೊತ್ತಿಲ್ಲವೇನು? ಅದನ್ನು ಮುಚ್ಚುವುದಕ್ಕೆ ಈ ಕಳ್ಳ ಮಾತು. ಇರಲಿ – ಮುಂದಕ್ಕೆ ಓದು ನಾದಿರ್."

"ಪುಣೆಯ ಪೇಷ್ವೆಯವರೂ, ಹೈದರಾಬಾದಿನ ನಿಜಾಮರೂ ಇದೇ ಅಭಿಪ್ರಾಯವುಳ್ಳವರಾಗಿದ್ದಾರೆ!—"

"ನೋಡಿದಿರಾ ದಿವಾನರೇ, ಅವರಿಬ್ಬರನ್ನೂ ಈಗಾಗಲೇ ನಮ್ಮ ವಿರುದ್ಧವಾಗಿ ಎತ್ತಿಗಟ್ಟಿರುವುದಾಗಿ ಹೆದರಿಸುತ್ತಿದ್ದಾನೆ ಈ ನೀಚ! ಟಿಪ್ಪೂ ಹತ್ತಿರ ಇಂಥ ಬೇಳೆ ಬೇಯುವುದಿಲ್ಲವೆಂದು ಈ ಹೊಸ ಗೌರ್ನರ್ ಜನರಲ್ಲನಿಗೆ – ಅವನ ಹೆಸರೇನು ನಾದಿರ್."

"ಲಾರ್ಡ್ ಮಾರ್ನಿಂಗ್‌ಟನ್."

"– ಈ ಮಾರ್ನಿಂಗ್‌ಟನ್ ಸಾಹೇಬನಿಗೆ ಇನ್ನೂ ಗೊತ್ತಿಲ್ಲ! ಆಗಲಿ, ಮುಂದೆ—"

"ನಾವು ಮೂವರೂ ಯೋಚಿಸಿರುವ ವ್ಯವಸ್ಥೆಯ ಮೂಲಭಾವನೆ ಸರ್ವತ್ರ ಶಾಂತಿ. ಒಟ್ಟು ದೇಶದಲ್ಲೆಲ್ಲೆಲ್ಲೂ ಶಾಂತಿ ನೆಲೆಸಿ ಜನ ಸುಖವಾಗಿ ಬಾಳುವಂತಾಗಬೇಕೆಂಬುದೇ ನಮ್ಮ ಅಭಿಪ್ರಾಯ."

"ಶಹಬ್ಬಾಸ್! ಇವನೊಬ್ಬ ಶಾಂತಿದೂತ! ನಮಗೆ ಶಾಂತಿಪಾಠ ಹೇಳುವುದಕ್ಕೆ ಹೊರಟಿದ್ದಾನೆ! ನಮ್ಮನ್ನು ಕುರಿಗಳೆಂದು ತಿಳಿದುಕೊಂಡಿದ್ದಾನೋ ಏನೋ? ಇವನು ತೋರಿದ ಹಳ್ಳಕ್ಕೆ ಬೀಳುವುದಕ್ಕೆ!—ಆಮೇಲೆ?"

"ಆ ದೃಷ್ಟಿಯಿಂದಲೂ, ನಮ್ಮೆಲ್ಲರ ಪರಸ್ಪರ ಸ್ನೇಹ ಸೌಹಾರ್ದಗಳು ಬಲಪಡಬೇಕೆಂಬ ದೃಷ್ಟಿಯಿಂದಲೂ ನಿಮಗೆ ಇದೊಂದು ಸೂಚನೆ ಮಾಡುತ್ತಿದ್ದೇನೆ. ಇಷ್ಟೇಯೆ: ನಿಮಗೆ ಚಿರಪರಿಚಿತರಾದ ಮೇಜರ್ ಡೌಟನ್‌ರವರನ್ನು ನಿಮ್ಮ ಆಸ್ಥಾನಕ್ಕೆ ಕಳುಹಿಸಿಕೊಡುತ್ತೇನೆ. ಅವರು ನಿಮ್ಮ ಮತ್ತು ನಮ್ಮ ನಡುವೆ ಉಂಟಾಗಿರುವ ವಿರಸಭಾವವನ್ನು ಹೋಗಲಾಡಿಸಲು ಏನು ಮಾಡಬೇಕೆಂಬುದನ್ನು ನಿಮಗೆ ಸುವಿಸ್ತಾರವಾಗಿ ತಿಳಿಸುತ್ತಾರೆ. ಅವರ ಸೂಚನೆಗಳನ್ನನುಸರಿಸುವುದರಿಂದ

ನಮ್ಮ ನಮ್ಮ ನಡುವಣ ಅಪನಂಬಿಕೆಗಳು ತೊಲಗಿ ಶಾಂತಿ ಸೌಹಾರ್ದಗಳು ಬಲಗೊಳ್ಳುವುವೆಂದು ನಾವು ಮತ್ತು ನಮ್ಮ ಮಿತ್ರವರ್ಗದವರು ನಂಬಿದ್ದೇವೆ."

"ಡೌಟನ್ ಇಲ್ಲಿಗೆ ಬರುತ್ತಾನಂತೋ! ಬಲ್ಲೆ ಅವನ ಚಾಳಿ. ಅವನ ಬಾಯಲ್ಲಿ ಮಾತು ಬಲು ಸವಿ; ಕಯ್ಯಲ್ಲಿ ಮಾತ್ರ ಕನ್ನಗತ್ತರಿ ಕೆಲಸ! ಬಲ್ಲೆ ಈ ಕಳ್ಳ ಭಂಟನನ್ನ. ಸರಿಯಾದ ಆಸಾಮಿಯನ್ನೇ ಹುಡುಕಿದ್ದಾರೆ, ನಮ್ಮ ಆಸ್ಥಾನಕ್ಕೆ ಕಳುಹಿಸುವುದಕ್ಕೆ. ಇಲ್ಲಿಯ ಗುಟ್ಟನ್ನೆಲ್ಲಾ ತಿಳಿದು ಅವರಿಗೆ ಸುದ್ದಿ ತಿಳಿಸುವುದಕ್ಕೆ.—"

"ನೀವು ಯಾವಾಗ ಎಲ್ಲಿ ಮೇಜರ್ ಡೌಟನ್‌ರವರನ್ನು ಸಂಧಿಸಲು ಅನುಕೂಲ ಎಂಬ ಅಂಶವನ್ನು ತಿಳಿಸುವ ಪತ್ರ ತಲುಪಿದೊಡನೆಯೇ ಅವರು ನಿಮ್ಮ ಆಸ್ಥಾನಕ್ಕೆ ಪ್ರಯಾಣ ಮಾಡುತ್ತಾರೆ."

"ಆಗಲಿ ತಿಳಿಸುತ್ತೇನೆ! ನಾನೇ ಇಸ್ತಕಾಪಾಲಿಗೆ ಬಾಜಾಬಜಂತ್ರಿ ತೆಗೆಸಿಕೊಂಡು ಹೋಗಿ ಮರ್ಯಾದೆವೀಳ್ಯ ಕೊಟ್ಟು ಕರೆದುಕೊಂಡು ಬರುತ್ತೇನೆ!– ಕಳ್ಳರು, ಪುಂಡರು, ಲಫಂಗರು! ಇವರ ಸಂಬಂಧವೇ ನಮಗೆ ಬೇಡ. ಯಾವನೂ ಇಲ್ಲಿಗೆ ಬರಬೇಕಾಗಿಲ್ಲ."

"ಪಾದ್‌ಷಾರವರ ಅಭಿಪ್ರಾಯ ಸರಿಯಾದದ್ದೇ. ನಾವು ಈ ಕಳ್ಳರ ಸಹವಾಸ ಮಾಡದೇ ಇರುವುದು ಮೇಲು. ಆದರೆ—"

"ಆದರೆ – ಏನು ? ಮತ್ತೇನೋ ಅಡ್ಡದಾರಿ ತೆಗೆದೆಯಲ್ಲ – ಸುತ್ತು ಬಳಸು ಮಾತು ಬೇಡ. ಏನು ಹೇಳಬೇಕೋ ಅದನ್ನು ಹೇಳಿಬಿಡು."

ಮೀರ್ ಸಾದಕ್‌ಸಾಹೇಬರು ಗಂಟಲು ಸರಿಮಾಡಿಕೊಂಡು ತಮ್ಮ ಮಾತು ಆರಂಭಿಸಿದರು:

"ಇನ್ನೇನೂ ಇಲ್ಲ ಜಹಾಪನಾ, ಈ ಕಳ್ಳರ ಸಹವಾಸ ನಮಗೆ ಖಂಡಿತ ಬೇಡ; ಆದರೆ ಅದನ್ನು ವ್ಯಕ್ತವಾಗಿ ಹೇಳುವುದು ಬೇಡ. ಅವರನ್ನು ನಿರ್ಮೂಲ ಮಾಡುವುದು ನಮ್ಮ ಉದ್ದೇಶ; ಆದರೆ ಅದನ್ನು ನಾವಾಗಿ ಪ್ರಕಟಮಾಡುವುದು ಬೇಡ. ಕಳ್ಳನಿಗೆ ಸುಳ್ಳೇ ಔಷಧಿ. ಅವರು ತುಂಬಾ ನಯವಾಗಿ ಕಾಗದ ಬರೆದಿರುವಂತೆ ನಾವೂ ಒಂದು ನಯವಾದ ಕಾಗದ ಬರೆಯೋಣ."

"ಅದು ಅನವಶ್ಯಕ. ಅವರು ಬರೆದ ಕಾಗದಗಳಿಗೆಲ್ಲಾ ನಾವು ಉತ್ತರ ಬರೆದೇ ತೀರಬೇಕೆಂದು ಎಲ್ಲಿ ಹೇಳಿದೆ ? ನಾವೇನು ಅವರ ಆಶ್ರಿತರಲ್ಲವಲ್ಲ."

"ನಿಜ ಜಹಾಪನಾ. ಪಾದ್‌ಷಾರವರು ಸರ್ವತಂತ್ರ ಸ್ವತಂತ್ರರು. ಆದರೂ

ನಾವು ಈ ಪತ್ರಕ್ಕೆ ಉತ್ತರ ಬರೆಯದಿದ್ದರೆ, ನಮ್ಮ ವಿಚಾರದಲ್ಲಿ ಅವರಿಗೆ ಅನುಮಾನ ಹೆಚ್ಚುತ್ತದೆ."

"ಹೆಚ್ಚಿದರೆ ಹೆಚ್ಚಲಿ. ಅದರಿಂದ ಆಗುವುದಾದರೂ ಏನು? ನೋಡಿ ಬಿಡೋಣ."

"ಕೊನೆಯ ಪರಿಣಾಮ ಒಂದೇ ಆದರೂ, ಸಾಧ್ಯವಾದಷ್ಟು ಕಾಲಹರಣ ಮಾಡುವುದರಲ್ಲಿ ನಮಗೇ ಲಾಭವಿದೆ. ಇನ್ನು ಐದಾರು ತಿಂಗಳು ಹೀಗೆ ಕಾಲ ಹರಣ ಮಾಡಿದರೆ ಆಮೇಲೆ ಮಳೆಗಾಲ ಆರಂಭವಾಗುತ್ತದೆ. ಆಗ ಸೈನ್ಯ ಚಲನೆ ಕಷ್ಟ. ಅವರೂ ವಿಧಿಯಿಲ್ಲದೆ, ಇನ್ನು ನಾಲ್ಕು ಐದು ತಿಂಗಳು ಕೈಕಟ್ಟಿ ಕೂರ ಬೇಕಾಗುತ್ತದೆ. ಅಂದರೆ ನಮಗೆ ಒಂದು ವರ್ಷ ಅವಕಾಶ ಸಿಕ್ಕಿದಂತಾಯಿತು. ಅಷ್ಟುಹೊತ್ತಿಗೆ ನಮಗೆ ಫ್ರೆಂಚರಿಂದ ಸಹಾಯ ಬಂದರೆ – ನಮ್ಮ ಕೆಲಸ ಸಿದ್ಧಿಸಿದ ಹಾಗೇಯೆ. ಅಲ್ಲವೆ ಜಹಾಪನಾ?"

"ಸರಿ, ಹಾಗೇ ಆಗಲಿ. ಒಡನೆಯೇ ಉತ್ತರ ಕೊಡಬೇಡ. ನಾವು ಅವರ ಕಾಗದ ನೋಡಿ ಹೆದರಿಕೊಂಡೆವೆಂದು ಭಾವಿಸಿಯಾರು. ಇನ್ನೊಂದೆರಡು ವಾರ ಬಿಟ್ಟು ಉತ್ತರ ಕಳಿಸು. ಅದರಲ್ಲಿ ನಾವೂ ಶಾಂತಿಪ್ರಿಯರು ಎಂದು ಹೇಳು. ಪುಣೆಯ ಮಹಾರಾಜಾ ಸಾಹೆಬ್ ಶ್ರೀಮಂತ ಪೇಷ್ವ ಬಹಾದ್ದೂರ್, ಹೈದರಾಬಾದಿನ ನವಾಬ್ ಅಸುಫ್ ಝಾ ಬಹಾದ್ದೂರ್ ಮತ್ತು ಕಂಪನಿ ಸರ್ಕಾರ್ ಬಹಾದ್ದೂರ್ ಇವರೆಲ್ಲರ ಸಂಗಡ ಸ್ನೇಹವಾಗಿರುವುದೇ ನಮ್ಮ ಅಪೇಕ್ಷೆಯಾಗಿದೆ ಎಂದೂ ತಿಳಿಸು.—"

"ಡೌಟನ್ ವಿಚಾರ—"

"ಡೌಟನ್ ವಿಚಾರ? – ಅವನು ಇಲ್ಲಿಗೆ ಬರುವುದು ಬೇಡ."

"ಹಾಗೆಂದು ಬರೆದರೆ, ನಮ್ಮ ಕಾಲವಂಚನೆಯ ಪ್ರಯತ್ನಕ್ಕೆ ಭಂಗ ಬಂದೀತೇನೋ – ಹೀಗೆ ಬರೆಯಬಹುದೆ ಜಹಾಪನಾ : ಶಾಂತಿ ಸೌಹಾರ್ದಗಳನ್ನು ಬೆಳೆಸುವುದಕ್ಕಾಗಿ ಮೇಜರ್ ಡೌಟನ್ ಸಾಹೇಬರು ಇಲ್ಲಿಗೆ ಬರಲಿರುವುದು ತುಂಬಾ ಸಂತೋಷಕರವಾದ ವಿಚಾರ—"

"ಅವನಿಲ್ಲಿಗೆ ಬರಕೂಡದು ಎಂದೆ!"

"ಅದೇ–ಅದೇಮಾತು. ನಮಗೆ ಪೂರ್ವಪರಿಚಿತರಾದ ಅವರನ್ನು ಕಂಡು ಪರಸ್ಪರ ಹಿತಸಾಧಕವಾದ ವಿಚಾರಗಳನ್ನು ಅವರೊಡನೆ ಚರ್ಚಿಸುವುದರಲ್ಲಿ ನಮಗೆ ತುಂಬಾ ಆಸಕ್ತಿಯಿದೆ. ಈಗ ನಮ್ಮ ಆರೋಗ್ಯ ಅಷ್ಟು ಉತ್ತಮವಾಗಿಲ್ಲವಾಗಿ

ವಿಶ್ರಾಂತಿಗೋಸ್ಕರ ಬೇರೆಯೆಡೆಗೆ ಹೋಗುತ್ತಿದ್ದೇವೆ. ಅಲ್ಲಿಂದ ಹಿಂದಿರುಗಿದೊಡನೆಯೇ ಮೇಜರ್ ಡೌಟನ್‌ರವರನ್ನು ನಾವು ಎಂದು, ಎಲ್ಲಿ ಸ್ವಾಗತಿಸಲು ಸಾಧ್ಯವಾಗಬಹುದು ಎಂಬುದನ್ನು ತಿಳಿಸುತ್ತೇವೆ."

"ಸರಿ, ಸರಿ, ಅಷ್ಟು ಬರೆದರೆ ಸಾಕು."

"ನಾನು ಹೇಳಿದ್ದನ್ನೆಲ್ಲಾ ಸರಿಯಾಗಿ ಗುರುತುಮಾಡಿಕೊಂಡೆಯಾ ನಾದಿಮ್ ?"

"ಬರೆದುಕೊಂಡಿದ್ದೇನೆ ದಿವಾನರೆ."

"ಪಾದ್‌ಷಾರವರು ವಿಶ್ರಾಂತಿ ತೆಗೆದುಕೊಳ್ಳಲಿ. ನಾವು ಹೋಗೋಣ."

ದಿವಾನ್ ಮೀರ್ ಸಾದಕ್, ಮೀರ್ ನಾದಿಮ್ ಇಬ್ಬರೂ ಎದ್ದು ಪಾದ್‌ಷಾರವರಿಗೆ ಕುರ್ನಿಸ್ ಮಾಡಿ ಹೊರಟುಹೋದರು.

§

"ಬಾ ನಾದಿಮ್, ಇದೀಗಲೇ ಕೆಲಸಕ್ಕೆ ಹೋಗಬೇಕಾದ ಪ್ರಮೇಯವೇನೂ ಇಲ್ಲ ತಾನೆ ?"

"ಅಂಥ ಆತುರದ ಕೆಲಸವೇನೂ ಇಲ್ಲ ದಿವಾನರೆ."

"ಹಾಗಾದರೆ ನಮ್ಮ ಮನೆಯಲ್ಲಿ ಸ್ವಲ್ಪ ಹೊತ್ತು ಕುಳಿತು ಮಾತನಾಡೋಣ. ಒಂದೆರಡು ಮುಖ್ಯ ವಿಷಯಗಳಲ್ಲಿ ನಿನ್ನ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕಾಗಿದೆ."

"ಆಗಬಹುದು. ನಿಮ್ಮೊಡನೆಯೇ ಬರುತ್ತೇನೆ."

ಟಿಪೂ ಸುಲ್ತಾನರ ಸನ್ನಿಧಿಯಿಂದ ಹೊರಬಿದ್ದ ಅವರಿಬ್ಬರೂ ಮಹಲಿನ ಹೊರ ಅಂಗಳಕ್ಕೆ ಬಂದು ತಮ್ಮ ತಮ್ಮ ಮೇನೆಗಳಲ್ಲಿ ಕುಳಿತರು. ಎರಡು ಮೇನೆಗಳೂ ಹೊರಟು ಮೀರ್ ಸಾದಕ್‌ರವರ ಮನೆಯನ್ನು ಸೇರಿದುವು. ಇಬ್ಬರೂ ಒಳಕೋಣೆಯೊಂದನ್ನು ಸೇರಿ ಕದ ಮುಚ್ಚಿಕೊಂಡು ಕುಳಿತರು – ರಹಸ್ಯವಾಗಿ ಮಾತನಾಡುವುದಕ್ಕೆ.

"ಸಮಾಚಾರ ಏನು ದಿವಾನರೆ, ನನ್ನನ್ನು ಇಷ್ಟು ಆತುರವಾಗಿ ಇಲ್ಲಿಗೆ ಕರೆದುಕೊಂಡು ಬಂದಿರಲ್ಲ."

"ನಾಲ್ಕಾರು ವಿಚಾರಗಳನ್ನು ಕುರಿತು ನಿನ್ನೊಡನೆ ಮಾತನಾಡಬೇಕಾಗಿದೆ ನಾದಿಮ್. ಅವು ನನಗೆ ಎಷ್ಟು ಮುಖ್ಯವೋ ನಿನಗೂ ಅಷ್ಟೇ

ಮುಖ್ಯ; ನನಗೆ ಎಷ್ಟರ ಮಟ್ಟಿಗೆ ಸಂಬಂಧಿಸಿವೆಯೋ ನಿನಗೂ ಅಷ್ಟರ ಮಟ್ಟಿಗೆ ಸಂಬಂಧಿಸಿವೆ. ಆದ್ದರಿಂದ ಮನ ಬಿಚ್ಚಿ ಮಾತನಾಡುತ್ತೇನೆ. ನಾನು ಹೇಳಿದ್ದು ನಿನಗೆ ಸರಿ ತೋರಿದರೆ ಒಳ್ಳೆಯದೇ ಆಯಿತು. ಇಲ್ಲವೆ – ನಾನು ಹೇಳಿದ್ದನ್ನು ಇಲ್ಲಿಯೇ ಮರೆತು ಬಿಡಬೇಕು. ನಾವಿಬ್ಬರು ವಿನಾ ಮೂರನೆಯವರಾರಿಗೂ ನಮ್ಮ ನಮ್ಮಲ್ಲಿ ಇಂಥ ಮಾತು ನಡೆಯಿತೆಂಬುದರ ಸುಳಿವೂ ತಿಳಿಯಕೂಡದು.– ಅಲ್ಲದೆ, ನನ್ನ ಅಭಿಪ್ರಾಯಗಳನ್ನು ನಿನ್ನ ಮನಸ್ಸಿನಲ್ಲಿಟ್ಟುಕೊಂಡು ಅದರ ಪ್ರಭಾವ ಕ್ಕೊಳಗಾಗಿ ನಿನಗೆ ಸರಿ ತೋರಿದ್ದನ್ನು ನನಗೆ ಹೇಳದೆಯಿರಕೂಡದು. ನಿನಗೆ ಸರಿ ತೋರಿದಂತೆ ನಡೆಯದೆ ಇರಕೂಡದು."

"ತಿಳಿಯಿತು ದಿವಾನರೆ. ನೀವು ಇಷ್ಟೊಂದು ಹೇಳಿದ ಮೇಲೆ ವಿಚಾರ ತುಂಬ ಮುಖ್ಯವಾದುದೆಂದು ತೋರುತ್ತದೆ. ನೀವು ನನ್ನಲ್ಲಿ ಮನಬಿಚ್ಚಿ ಮಾತ ನಾಡಬಹುದು. ನಿಮಗಿಂತ ಆಪ್ತರಾದವರು ನನಗೆ ಇನ್ನಾರಿದ್ದಾರೆ. ಈಗ ನಾನೂ ಒಬ್ಬ ಮನುಷ್ಯ ಎಂದು ತಲೆಯೆತ್ತಿ ತಿರುಗುತ್ತಿರುವುದು ನಿಮ್ಮ ಕೃಪೆಯಿಂದ ಎಂಬುದನ್ನು ನಾನು ಮರೆಯಲು ಸಾಧ್ಯವೆ – ಹೇಳಿ! ತಮ್ಮ ಆಜ್ಞೆಯಾದಂತೆ ನಡೆದುಕೊಳ್ಳುತ್ತೇನೆ."

"ಇದು ಆಜ್ಞೆ, ಅಪ್ಪಣೆಗಳ ಮಾತಲ್ಲ ನಾದಿಮ್. ನನ್ನ ನಿನ್ನ ಜೀವ ಸಾವುಗಳ ಮಾತು. ಆದ್ದರಿಂದಲೇ, ಮನಬಿಚ್ಚಿ ಮಾತನಾಡಬೇಕಾಗಿದೆ."

"ಆಗಬಹುದು ದಿವಾನರೆ. ಅಲ್ಲಾನ ಸಾಕ್ಷಿಯಾಗಿ ನಾನು ನಿಮಗೆ ಎರಡು ಬಗೆಯುವುದಿಲ್ಲ."

"ನೀನು ಈ ಮಾತು ಹೇಳಿದ್ದು ತುಂಬ ಸಂತೋಷ ನಾದಿಮ್. ಈಗ ಕೇಳು – ಈಗತಾನೆ ಸುಲ್ತಾನರ ಸಮ್ಮುಖದಲ್ಲಿ ಚರ್ಚೆಯಾಯಿತಲ್ಲ ಲಾರ್ಡ್ ಮಾರ್ನಿಂಗ್‌ಟನ್‌ರವರ ಖರೀತ.–ಅದರ ವಿಚಾರವಾಗಿ ನಿನ್ನ ಅಭಿಪ್ರಾಯವೇನು ?"

"ದಿವಾನರೆ, ಇದು ತುಂಬ ದೊಡ್ಡ ಪ್ರಶ್ನೆ. ರಾಜಕೀಯದಲ್ಲಿ ನಾನೇನು ನುರಿತವನಲ್ಲ. ನಿಮ್ಮ ಬೆಂಬಲದಿಂದ, ಸುಲ್ತಾನರ ಕೃಪೆಯಿಂದ ನಾನೂ ಸುಲ್ತಾನರ ಆಸ್ಥಾನದಲ್ಲಿ ಒಬ್ಬ ಗಣ್ಯವ್ಯಕ್ತಿಯಾಗಿದ್ದೇನೆ. ಅದು ಬಿಟ್ಟು ಬೇರೆ ಯೋಗ್ಯತೆ ನನಗೆ ಇರುವುದು ಇನ್ನೇನು ? – ಒಂದೆರಡು ಸಂದರ್ಭಗಳಲ್ಲಿ ನಾನು ತುಂಬ ಬುದ್ಧಿವಂತಿಕೆಯಿಂದ, ಚಾಲೂಕಾಗಿ ನಡೆದುಕೊಂಡೆನೆಂದು ಸುಲ್ತಾನರು ಬಾಯಿತುಂಬ ಹೊಗಳಿದ್ದಾರೆ ನಿಜ. ಆದರೆ, ಹೊಗಳಿಕೆ ನ್ಯಾಯವಾಗಿ ನಿಮಗೆ ಸಲ್ಲಬೇಕಾದದ್ದು. ಆಯಾ ಸಂದರ್ಭಗಳಲ್ಲಿ ನಾನು ಯಾವ ಯಾವ ರೀತಿ

ನಡೆದುಕೊಳ್ಳಬೇಕೆಂಬುದನ್ನು ನೀವು ನನಗೆ ವಿವರವಾಗಿ ಹೇಳಿಕೊಟ್ಟಿದ್ದರಿಂದ ತಾನೆ, ನಾನು ಆ ಕಾರ್ಯಗಳನ್ನು ಸಮರ್ಪಕವಾಗಿ ಸಾಧಿಸಲು ಆದದ್ದು ; ನನಗೆ ಸುಲ್ತಾನರ ಹೊಗಳಿಕೆ ದೊರೆತಿದ್ದು."

"ನಿನಗೆ ನನ್ನ ಮೇಲೆ ತುಂಬ ಪ್ರೀತಿ ಅಭಿಮಾನಗಳು ಇವೆಯಾಗಿ ಈ ರೀತಿ ಮಾತನಾಡುತ್ತಿ. ಸ್ವತಂತ್ರವಾಗಿ ಯೋಚಿಸಿ ನಿರ್ಣಯಕ್ಕೆ ಬರುವ ಶಕ್ತಿ ನಿನಗೆ ಇಲ್ಲದೆ ಇಲ್ಲ. ಆಯಿತಲ್ಲ – ಈ ಮಾತು ಕೇಳು. ಲಾರ್ಡ್ ಮಾರ್ನಿಂಗ್‌ಟನ್ ಬರೆಸಿರುವ ಪತ್ರ ನೋಡಿದರೆ—"

"ಇನ್ನೇನು ಯುದ್ಧ ಸಿದ್ಧ ಎನ್ನುತ್ತೀರಾ."

"ಸರಿಯಾದ ಮಾತು ಹೇಳಿದೆ. ಈ ಹೊತ್ತಿಗೆ ಅವರು ಸೈನ್ಯ ಚಲನೆಯನ್ನು ಆರಂಭಿಸಿದ್ದರೂ ನನಗೆ ಆಶ್ಚರ್ಯವಿಲ್ಲ."

"ನಿಜವಾಗಿ."

"ನನಗೆ ಈ ವಿಚಾರದಲ್ಲಿ ಅನುಮಾನವೇ ಉಳಿದಿಲ್ಲ. ಏಕೆ ಎನ್ನುತ್ತೀಯೋ– ಕಾಗದದ ಸರಣಿಯೆಲ್ಲ ನಮ್ಮ ಮೇಲೆಯೇ ತಪ್ಪು ಹೊರಿಸುವಂತಿದೆ. ರಾಜಕೀಯ ದಲ್ಲಿ ಇಂಥ ಸರಣಿಯು ಕಾಗದ ಸರ್ವಸಾಮಾನ್ಯ ಅನ್ನು. ಆದರೆ ಈ ಕಾಗದ ದಲ್ಲಿರುವ ವಿಶೇಷಾಂಶ ಎಂದರೆ,—ಸುಲ್ತಾನರು ಯಾವ ಯಾವುದನ್ನು ಸರ್ವಥಾ ಒಪ್ಪುವುದಿಲ್ಲವೋ ಅವೇ ಆಗಬೇಕೆಂದು ಒಂದಲ್ಲ ಒಂದು ರೀತಿಯಲ್ಲಿ ಒತ್ತಾಯ ಮಾಡಿರುವುದು."

"ಅಂದರೆ, ಫ್ರೆಂಚರ ವಿಚಾರವೆ ?"

"ಅದೊಂದೇ ಏಕೆ ನಾದಿಮ್ ? – ಇನ್ನೂ ಬೇಕಾದಷ್ಟಿವೆ. ಅವಿರಲಿ. ಈ ಮಾತು ಕೇಳು. ಸುಲ್ತಾನರು ಫ್ರೆಂಚರ ಸ್ನೇಹ ಬಿಡುವುದು ಸಾಧ್ಯವೆ ? ಇಂದಿನ ಸ್ಥಿತಿಯಲ್ಲಿ ಅದನ್ನು ಬಿಟ್ಟು ಅವರು ಉಳಿಯುವಹಾಗಿದಾರೆಯೆ ? ನೀನೇ ಯೋಚನೆ ಮಾಡಿನೋಡು. ನಮಗೆ ಫ್ರೆಂಚರ ಸಹಾಯ ದೊರೆಯಲಿಲ್ಲ ಎಂದಿಟ್ಟುಕೋ. ಇಂಗ್ಲಿಷರು ದೊಡ್ಡ ಪ್ರಮಾಣದಲ್ಲಿ – ಕಳೆದಸಾರಿ ನಡೆಸಿದ ಹಾಗೆ – ನಮ್ಮ ಮೇಲೆ ದಾಳಿ ಮಾಡಿದರು ಎಂದು ಇಟ್ಟುಕೋ—"

"ನಾವು ಅವರನ್ನು ಇದಿರಿಸಿ ಗೆಲ್ಲುವುದು ತುಂಬ ಕಷ್ಟ ದಿವಾನರೆ."

"ಸರಿಯಾಗಿ ಹೇಳಿದೆ. ಆದಕ್ಕೇ ಸುಲ್ತಾನರು ಫ್ರೆಂಚರ ಸಹಾಯಕ್ಕಾಗಿ ಅಷ್ಟೊಂದು ಹಾತೊರೆಯುತ್ತಿರುವುದು."

"ನಿಜ."

"ಆದರೆ ಫ್ರೆಂಚರ ಸ್ಥಿತಿ ಹೇಗಿದೆ ಗೊತ್ತೆ ನಾದಿರ್."

"ನನಗೆ ಆ ವಿಚಾರ ಅಷ್ಟಾಗಿ ತಿಳಿಯದು ದಿವಾನರೆ."

"ಅದೇನು ಅಷ್ಟು ಸಮರ್ಪಕವಾಗಿಲ್ಲ. ನೆಪೋಲಿಯನ್ ಸಾಹೇಬರು ಈಜಿಪ್ಟಿನ ಮೇಲೆ ದಾಳಿ ಮಾಡಿದಾಗ ನಾವು ಏನೇನೋ ಎಣಿಕೆ ಮಾಡಿದ್ದೆವು. ಅಲ್ಲಿ ಅವರಿಗೆ ಶೀಘ್ರವಾಗಿ ವಿಜಯ ದೊರೆಯುತ್ತದೆ; ಅದರಿಂದ ಇಂಗ್ಲಿಷರ ಎದೆ ನಡುಗಿ ಹೋಗುತ್ತದೆ; ನೆಪೋಲಿಯನ್ನರ ವಿಜಯಸೇನೆಯ ಒಂದು ಭಾಗ ನಮ್ಮ ಬೆಂಬಲಕ್ಕೆ ಬಂದು ಮಂಗಳೂರಿನಲ್ಲೋ ಕಣ್ಣಾನೂರಿನಲ್ಲೋ ಇಳಿಯುತ್ತದೆ.... ಅದೆಲ್ಲಾ ಈಗ ಕನಸು."

"ಅಂದರೆ."

"ನಿನಗೆ ತುಂಬಾ ಗುಟ್ಟಾದ ವಿಚಾರ ಹೇಳುತ್ತಿದ್ದೇನೆ ನಾದಿರ್. ಅದನ್ನು ಇನ್ನೂ ಸುಲ್ತಾನರಿಗೆ ಕೂಡ ತಿಳಿಸಿಲ್ಲ. ಈಜಿಪ್ಟಿನಲ್ಲಿ ಇಂಗ್ಲಿಷರ ಕೈ ಮೇಲಾಗಿದೆ. ಆ ಸುದ್ದಿ ಕೊಡುವ ಪತ್ರ ನೆನ್ನೆತಾನೆ ನನ್ನ ಕೈ ಸೇರಿದೆ."

"ಅಂದರೆ, ನೆಪೋಲಿಯನ್ ಸಾಹೇಬರ ಇಂಡಿಯಾ ವಿಜಯಯಾತ್ರೆಯ ಕನಸು—"

"ಮಣ್ಣುಗೂಡಿದಂತೆಯೇ."

ನಾದಿರ್ ದೊಡ್ಡದಾಗಿ ನಿಟ್ಟುಸಿರು ಬಿಟ್ಟು ತಲೆಯ ಮೇಲೆ ಕೈ ಹೊತ್ತುಕೊಂಡು ಕುಳಿತ. ಅವನ ಮುಖ ವಿವರ್ಣವಾಯಿತು. ಮೀರ್ ಸಾದಕ್ ರವರು ಒಂದು ಕ್ಷಣ ಸುಮ್ಮನಿದ್ದು ಮತ್ತೆ ತಮ್ಮ ಮಾತು ಆರಂಭಿಸಿದರು:

"ನಾದಿರ್, ಈಗ ನಿನಗೆ ಅರ್ಥವಾಯಿತೆ ನನ್ನ ಕಳವಳದ ಕಾರಣ?– ನಮಗೆ ಫ್ರೆಂಚರಿಂದ ಸಮರ್ಪಕವಾದ ಸಹಾಯ ಬರಲು ಸಾಧ್ಯವಿಲ್ಲ. ಇಂಗ್ಲಿಷರು ದೊಡ್ಡ ಪ್ರಮಾಣದಲ್ಲಿ ನಮ್ಮ ಮೇಲೆ ದಾಳಿ ಮಾಡುವುದು ತಪ್ಪುವಂತಿಲ್ಲ."

"ನಿಜ ದಿವಾನರೇ, ಅಂಥ ಬಲವಾದ ದಾಳಿಗೆ ಸಿದ್ಧಮಾಡಿಕೊಳ್ಳದೆ, ಇಂಗ್ಲಿಷರು ಸುಲ್ತಾನರಿಗೆ ಅಂಥ ಕಾಲು ಕೆರೆಯುವ ಕಾಗದ ಬರೆಯುತ್ತಿರಲಿಲ್ಲ. ಅವರಿಗೇನು ಗೊತ್ತಿಲ್ಲವೆ ಸುಲ್ತಾನರ ಸ್ವಭಾವ."

"ಆಯಿತಲ್ಲ – ಈಗ ಹೇಳು: ಮುಂದಕ್ಕೇನು?"

"ನೀವು ಹೇಳಿದ್ದನ್ನೆಲ್ಲಾ ಕೇಳಿದ ಮೇಲೆ ನನಗೂ ಅದೇ ಯೋಚನೆ ಯಾಗಿದೆ, ದಿವಾನರೆ. – ಸರಿ, ಇದರಲ್ಲಿ ನಾವು ಮಾಡತಕ್ಕದ್ದಾದರೂ ಏನಿದೆ? ಸುಲ್ತಾನರು ನಿರ್ಣಯಿಸಬೇಕು."

"ಆ ಮಾತು ತಪ್ಪು. ಸುಲ್ತಾನರು ನಿರ್ಣಯಿಸುವ ಕಾಲ ಮುಗಿದು ಹೋಯಿತು ನಾದಿರ್!"

"ಅಂದರೆ?"

"ಪರಿಸ್ಥಿತಿ ಅವರ ಕೈಮೀರಿ ಹೋಗಿದೆ. ಇಂಗ್ಲಿಷರ ದಾಳಿಯನ್ನು ಅವರು ನಿಲ್ಲಿಸುವುದೂ ಸಾಧ್ಯವಿಲ್ಲ. ಅದನ್ನಿದಿರಿಸಿ ನಿಲ್ಲುವುದೂ ಸಾಧ್ಯವಿಲ್ಲ. ಸುಲ್ತಾನರಿಗಿದ್ದ ಬಲವೆಲ್ಲಾ ಫ್ರೆಂಚರದು. ಅದು ಈಗ ಇಲ್ಲ. ಅಲ್ಲಿಗೆ ಮುಗಿಯಿತು."

"ಹಾಗೆನ್ನುತ್ತೀರಾ ದಿವಾನರೇ? ನಮ್ಮ ಸೈನ್ಯ?"

"ಇದೆ. ಆದರೆ ಅದರಲ್ಲಿ ಎಷ್ಟೋ ಒಡಕು. ಆ ಮಾತೆಲ್ಲಾ ಏಕೆ ಈಗ? ನಮ್ಮ ಸೈನ್ಯ ಇಂಗ್ಲಿಷರ ಸೈನ್ಯವನ್ನು ಇದಿರಿಸಿ ಹೋರಾಡುತ್ತದೆ. ಅದು ನನಗೂ ಗೊತ್ತು ನಿನಗೂ ಗೊತ್ತು. ಹೋರಾಡದೆ ಕೈ ಎತ್ತಿ ನಿಲ್ಲುವ ಹೇಡಿಯಲ್ಲ ನಮ್ಮ ಸುಲ್ತಾನರು. ಅವರು ನಮ್ಮ ಸೈನ್ಯಗಳ ನಾಯಕತ್ವ ವಹಿಸಿ ವೀರಾವೇಶದಿಂದ ಹೋರಾಡುತ್ತಾರೆ. ನಿಜ. ಆದರೆ ಒಂದೊಂದು ಹೋರಾಟದಲ್ಲಿಯೂ ಇಂಗ್ಲಿಷರನ್ನು ಇದಿರಿಸಲಾರದೆ ಸೋತು, ಹಿಂದಕ್ಕೆ ಸರಿಯುತ್ತಾ ಕೊನೆಗೆ ಈ ಕೋಟೆಯ ಒಳಗೆ ಸೇರಿಕೊಳ್ಳುತ್ತಾರೆ. ಈಗ್ಗೆ ಏಳು ವರ್ಷದ ಹಿಂದೆ ಹುಟ್ಟಿದ ಪರಿಸ್ಥಿತಿಯೇ ಮತ್ತೆ ಉದ್ಭವವಾಗುತ್ತದೆ—"

"ಅಂಥ ಪರಿಸ್ಥಿತಿಯುಂಟಾಯಿತೆಂದೇ ಇಟ್ಟುಕೊಳ್ಳೋಣ ದಿವಾನರೆ. ಕಳೆದ ಬಾರಿ ಪ್ರಯತ್ನಿಸಿದಂತೆ ಈ ಬಾರಿಯೂ ಸಂಧಿಗೆ ಪ್ರಯತ್ನ—"

"ಮಾಡಬಹುದು. ಆದರೆ ಆ ಪ್ರಯತ್ನ ಫಲಕಾರಿಯಾದೀತೆ ಎಂಬ ವಿಚಾರದಲ್ಲಿ ಮಾತ್ರ ನನಗೆ ತುಂಬ ಅನುಮಾನವಿದೆ."

"ಹಾಗೆನ್ನುತ್ತೀರಾ."

"ನಿಸ್ಸಂದೇಹವಾಗಿ ನಾದಿರ್. ಈಜಿಪ್ಟಿನಲ್ಲಿ ತಮ್ಮ ಕೈ ಬಲವಾದ ಮೇಲೆ ಇಂಗ್ಲಿಷರು ಇಲ್ಲಿ ಸುಮ್ಮನಿರುತ್ತಾರೆ ಎಂದಿದ್ದೀಯಾ? ಫ್ರೆಂಚರ ಸ್ನೇಹಿತರಾದವರನ್ನು ಸುಮ್ಮನೆ ಬಿಡುತ್ತಾರೆ ಎಂದಿದ್ದೀಯಾ? – ಕಳೆದ ಏಳು ವರ್ಷಗಳಲ್ಲಿ ತುಂಬ ಬದಲಾವಣೆಗಳಾಗಿವೆ ನಾದಿರ್. ಇತ್ತೀಚೆಗೆ ಇಂಗ್ಲಿಷರಿಂದ ಬರುತ್ತಿರುವ ಕಾಗದಗಳ ಧೋರಣೆ ನೋಡಿದರೆ, ವಾರ್ನಿಂಗ್‌ಟನ್ ಸಾಹೇಬನ ಕಾರ್ಯ ನೀತಿ ಕಾರನ್‌ವಾಲಿಸ್ ಸಾಹೇಬನ ನೀತಿಯಂತಲ್ಲ ಎಂಬುದು ನನಗೆ ಸ್ಪಷ್ಟವಾಗಿದೆ. ಅದರಲ್ಲಿ ಅನುಮಾನವಿಲ್ಲ. ಜೊತೆಗೆ ನಮ್ಮ ಸುಲ್ತಾನರೂ ತಮ್ಮ ಬಲ ಹಾಳು ಮಾಡಿಕೊಂಡಿದ್ದಾರಲ್ಲ! ಒಂದೇ ಎರಡೇ! ಧೊಂಡಯ್ಯನಂಥವನನ್ನು ಬಲವಂತ

ವಾಗಿ ಇಸ್ಲಾಂಗೆ ಸೇರಿಸಿದರು – ಫಲವೇನು ಹೇಳು ? ವೈರ. ಈಗ ಅವನನ್ನು ಹಿಡಿದು ಸೆರೆಮನೆಯಲ್ಲಿ ಹಾಕಿದ್ದಾರೆ. ಅವನ ಕೈಕೆಳಗಿದ್ದ ಸೈನ್ಯ ಪೂರ್ತಿಯಾಗಿ ಅತೃಪ್ತವಾಗಿದೆ."

"ಧೊಂಡಯ್ಯನ ವಿಚಾರದಲ್ಲಿ ಸುಲ್ತಾನರು ತುಂಬ ತಪ್ಪು ಮಾಡಿದರು. ತಾವಾಗಿ ತಮ್ಮ ಬಲಗೈ ಕತ್ತರಿಸಿಕೊಂಡರು."

"ಆಯಿತೆ, ಹೀಗೆ ಹಿಂದುಗಳೊಡನೆ ವೈಮನಸ್ಯ. ಇನ್ನು ಮುಸ್ಲಿಮರ ಮಾತು—ಡಿಲ್ಲಿ ಬಾದ್‌ಷಾರನ್ನು ಅಲ್ಲಗಳೆದು ತಾವೇ ಪಾದ್‌ಷಾ ಎಂದುಕೊಂಡು ಕೆಲವರ ದ್ವೇಷ ಕಟ್ಟಿಕೊಂಡರು. ಹೈದರಾಬಾದಿನ ನಿಜಾಮರೊಡನೆ ವ್ಯವಹಾರ ಕೆಡಿಸಿಕೊಂಡು ಅವರನ್ನು ಇದಿರು ಹಾಕಿಕೊಂಡರು. ಇನ್ನು ಈ 'ಪೈಗಂಬರ್' ಹುಚ್ಚಿನ ಮಾತು ಹೇಳಲೇಬೇಕಾಗಿಲ್ಲ! ಸುಲ್ತಾನರು ತಾವೇ 'ಪೈಗಂಬರ್' ಎಂದುಕೊಂಡಿದ್ದು ಯಾವ ಮುಸ್ಲಿಮನ ಮನಸ್ಸು ನೋಯಿಸಿಲ್ಲ ಹೇಳು. ಹೀಗೆ ಸುತ್ತ ವೈರದ ವಿಷ ಹಬ್ಬಿಕೊಂಡರೆ—"

"ಬದುಕುವುದು ಕಷ್ಟ ದಿವಾನರೆ."

"ಅಧಿಕಾರಶಕ್ತಿ ಬಲವಾಗಿರುವವರೆಗೆ ಈ ವಿರೋಧವೆಲ್ಲ ಒಳಗಡಗಿರುತ್ತದೆ. ಆದರೆ ನಮ್ಮ ಅಧಿಕಾರಶಕ್ತಿ ಸ್ವಲ್ಪ ತಗ್ಗಿತೆಂದರಾಯಿತು ಈ ವಿರೋಧವೆಲ್ಲಾ ಮೇಲೆ ಬಂದು ನಮ್ಮನ್ನು ಮುಳುಗಿಸಿಬಿಡುತ್ತದೆ."

"ನಿಜ ದಿವಾನರೆ."

"ಈ ವಿರೋಧದ ಪ್ರವಾಹದಲ್ಲಿ ನಾವು ಮುಳುಗಿಹೋಗದ ಹಾಗೆ ನೋಡಿಕೊಳ್ಳುವುದು ಹೇಗೆ – ಅದೇ ನಮ್ಮ ಮುಂದಿರುವ ಪ್ರಶ್ನೆ; ನಿನ್ನೊಡನೆ ಚರ್ಚಿಸಬೇಕಾದ ಪ್ರಶ್ನೆ. ನಾವು ಒಂದು ವಿಚಾರ ಜ್ಞಾಪಕದಲ್ಲಿಡಬೇಕು ನಾದಿಮ್: ನಾವು ಸುಲ್ತಾನರ ಕೃಪೆಗೆ ಪಾತ್ರರಾಗಿದ್ದೆವಾಗಿ ಅವರ ತಪ್ಪುಗಳಿಗೆಲ್ಲಾ ನಾವು ಕಾರಣ ಎಂದು ಜನ ಭಾವಿಸಿಕೊಳ್ಳುತ್ತಾರೆ."

"ಖಂಡಿತವಾಗಿ. ಅವರು ಹಾಗೆ ಮಾತನಾಡುವುದು ನಮ್ಮ ಕಿವಿಗೇ ಬಿದ್ದಿದೆಯಲ್ಲ."

"ಆಯಿತು. ಅಂದರೆ ಜನರಿಗೆ ನಮ್ಮ ವಿಚಾರದಲ್ಲಿ ಅಷ್ಟು ಪ್ರೀತಿಯಿಲ್ಲ ಎಂದು ಒಪ್ಪುತ್ತೀಯಲ್ಲ."

"ಒಪ್ಪದೆ ವಿಧಿಯಿಲ್ಲ."

"ಈಗ ನೋಡು ನಾದಿಮ್. ಸುಲ್ತಾನರ ರಕ್ಷಣೆಯ ಕೈಯಿಲ್ಲದಿದ್ದರೆ,

ನಮ್ಮನ್ನು ಪ್ರೀತಿಸದ ಜನ ನಮ್ಮ ವಿಚಾರವಾಗಿ ಹೇಗೆ ನಡೆದುಕೊಂಡಾರು. – ಆಗ ನಮ್ಮ ಗತಿ ಏನು ? ಇದು ನಾವು ಯೋಚಿಸಬೇಕಾದ ಬಹುಮುಖ್ಯ ವಿಚಾರ."

" ನಿಜ."

" ಏನು ಮಾಡೋಣ ಹೇಳು ? – ಇಂಥ ಪರಿಸ್ಥಿತಿಯಲ್ಲಿ ನಾವು ಉಷ್ಟ್ರ ಪಕ್ಷಿಯಂತೆ ಮರಳಿನಲ್ಲಿ ತಲೆಮರೆಸಿಕೊಂಡು ಕುಳಿತರೆ ಏನೇನೂ ಲಾಭವಿಲ್ಲ. ನಮ್ಮನ್ನಟ್ಟಿಸಿಕೊಂಡು ಬರುವ ಬೇಡ ನಮ್ಮನ್ನು ಕಾಣದೆ ಇರುವುದಿಲ್ಲ; ಕೊಲ್ಲದೆ ಇರುವುದಿಲ್ಲ !"

" ಏನು ಮಾಡೋಣ ?"

" ನೀನೊಂದು ಮಾತು ಕೇಳಿದ್ದೀಯಾ ನಾದಿರ್ ? – ಹಡಗು ಮುಳುಗುವ ಲಕ್ಷಣ ತೋರಿದೊಡನೆಯೇ ಹಡಗಿನ ಉಗ್ರಾಣದಲ್ಲಿ ತಿಂದು ತಿಂದು ಕೊಬ್ಬಿ ಹಾಯಾಗಿರುತ್ತಿದ್ದ ಹೆಗ್ಗಣಗಳೆಲ್ಲಾ ಹಡಗನ್ನು ಬಿಟ್ಹೋಡಿ, ಬೇರೆಯೆಡೆಯಲ್ಲಿ ರಕ್ಷಣೆ ಪಡೆಯಲು ಪ್ರಯತ್ನಿಸುತ್ತವೆಯಂತೆ."

" ನಾನೂ ಕೇಳಿದ್ದೇನೆ, ದಿವಾನರೆ."

" ಆ ಹೆಗ್ಗಣಗಳಷ್ಟಾದರೂ ಬುದ್ಧಿ ಉಪಯೋಗಿಸಬೇಡವೆ, ಮನುಷ್ಯರು ಎನಿಸಿಕೊಂಡ ನಾವು !"

" ಅಂದರೆ, ಸುಲ್ತಾನರಿಗೆ ದ್ರೋಹ ?"

" ಛೆ. ಛೆ. ನಾನೆಂದಿಗೂ ಅಂಥ ಯೋಚನೆ ಮಾಡುವುದಿಲ್ಲ."

" ಅಂದರೆ ?"

" ಅಲ್ಲಾನ ಕೃಪೆಯಿಂದ ಸುಲ್ತಾನರು ವಿಜಯಿಗಳಾದರೆ – ಅವರಿಗೆ ವಿಜಯ ದೊರೆಯಬೇಕೆಂಬುದೇ ನನ್ನ ಆಸೆ ; ಹಾಗೆ ವಿಜಯ ದೊರೆಯಿತು ಅನ್ನು – ಆಗ ಖಂಡಿತವಾಗಿ ಸುಲ್ತಾನರ ಸೇವಕರಾಗಿ ಬಾಳೋಣ ; ಆದರೆ – ಇಂದಿನ ಪರಿಸ್ಥಿತಿಯಲ್ಲಾ ನಿನಗೆ ಗೊತ್ತೇಯಿದೆ – ನಾವು ಯೋಚನೆ ಮಾಡಿದ ಹಾಗೆ, ಸುಲ್ತಾನರಿಗೆ ವಿಜಯ ಲಭಿಸಲಿಲ್ಲ – ಪ್ರಮಾದವಾಗಿ ಹೋಯಿತು ಅನ್ನು – ಆಗ ?"

" ನಮ್ಮ ಗತಿ—"

"ಅಸಹನೀಯವಾಗದಂತೆ ನೋಡಿಕೊಳ್ಳಬೇಕು. ಅಲ್ಲವೆ, ಹೇಳು? ಇಲ್ಲದಿದ್ದರೆ ನಮ್ಮ ಪಾಡು—"

"ನಾಯಿ ಪಾಡು!"

"ಹಾಗಾಗದಂತೆ ನೋಡಿಕೊಳ್ಳುವುದು—"

"ಸಾಧ್ಯವಾದರೆ ಒಳ್ಳೆಯದೆ."

"ನಾನು ಹೇಳುತ್ತಿರುವುದಾದರೂ ಅದೇ ನಾದಿಮ್."

"ಸರಿ. ಅದಕ್ಕಾಗಿ ಏನು ಮಾಡಬೇಕು. ಅದನ್ನಾದರೂ ಹೇಳಿ ದಿವಾನರೆ. ಆ ಮಾರ್ಗ ಸರಿಯೆಂದು ತೋರಿದರೆ ಅದನ್ನೇ ಅನುಸರಿಸೋಣ."

"ಈ ವಿಚಾರವಾಗಿ ನಾನು ತುಂಬ ಆಲೋಚನೆ ಮಾಡಿದ್ದೇನೆ. ಈಗ ನೋಡು – ಇಂಗ್ಲಿಷರು ಗೆದ್ದರೆನ್ನು. ಆಮೇಲೇನಾದೀತು? ಮೈಸೂರು ರಾಜಮನೆತನದವರನ್ನು ಗಾದಿಗೇರಿಸುತ್ತಾರೆ. ಅಂಥ ಸಂದರ್ಭದಲ್ಲಿ ನಮಗೆ ಕೇಡಾಗದಂತೆ ನೋಡಿಕೊಳ್ಳಬೇಕು."

"ಮೈಸೂರು ರಾಜಮನೆತನ ಮತ್ತೆ ಅಧಿಕಾರಕ್ಕೆ ಬರುತ್ತದೆಯೆಂದು ಹೇಳುತ್ತೀರಾ."

"ಬಂದೀತೆಂದು ನನಗೆ ತೋರುತ್ತದೆ. ಅವರ ಮೂವತ್ತು ವರ್ಷದ ಪ್ರಯತ್ನ ವಿಫಲವಾಗಲಾರದು – ಇದಲ್ಲದೆ ಇನ್ನೊಂದು ಮಾತು ನಾದಿಮ್. ಇಂಗ್ಲಿಷರು ಭಾರಿ ತಂತ್ರಿಗಳು. ಸುಲ್ತಾನರನ್ನು ಕಾಲು ಕೆರದು ಯುದ್ಧಮಾಡಿ ಅವರನ್ನು ಅನ್ಯಾಯವಾಗಿ ನಾಶಮಾಡಿದರೆಂಬ ಕೆಟ್ಟ ಹೆಸರು ತಮ್ಮ ಮೇಲೆ ಬರದಿರಲಿ ಎಂದು ಆದಷ್ಟು ಪ್ರಯತ್ನಿಸುತ್ತಾರೆ. ಮೈಸೂರು ಅರಸುವಂಶಕ್ಕೆ ರಾಜ್ಯ ಕೊಟ್ಟರೆ, ಅವರಿಗೆ ಈ ಅಪಖ್ಯಾತಿ ಬರುವುದಿಲ್ಲ. ಅಲ್ಲದೆ, ಕೈ ತಪ್ಪಿದ್ದ ರಾಜ್ಯವನ್ನು ಮತ್ತೆ ತಮಗೆ ಕೊಡಿಸಿದರೆಂಬ ಅಭಿಮಾನದಿಂದ ಮೈಸೂರು ರಾಜವಂಶ ಇಂಗ್ಲಿಷರ ಪಕ್ಷ ವಹಿಸಿ ನಿಲ್ಲುತ್ತದೆ. ಫ್ರೆಂಚರಿಗೆ ಇಲ್ಲಿ ನಿಲ್ಲಲು ನೆರಳಿಲ್ಲದಂತಾಗುತ್ತದೆ. ಇಷ್ಟೊಂದು ಅನುಕೂಲಗಳನ್ನು ಇಂಗ್ಲಿಷರು ಸುಮ್ಮನೆ ಬಿಟ್ಟುಕೊಡುತ್ತಾರೆಯೆ?"

"ನಿಜ. ನೀವು ಹೇಳುವುದು ಸರಿ."

"ಇನ್ನೂ ಒಂದು ಮಾತು. ಈ ರಾಜ್ಯವನ್ನು ತಾವೇ ನುಂಗಬೇಕೆಂಬ ಆಸೆ ಇಂಗ್ಲಿಷರಿಗಿದೆ ಎಂದು ಇಟ್ಟುಕೋ. ಅದಕ್ಕೇನು? ಈ ಕೈಯಲ್ಲಿ ಕೊಟ್ಟಹಾಗೆ ಮಾಡಿ ಭೇಷ್ ಎನಿಸಿಕೊಳ್ಳುತ್ತಾರೆ; ಆಮೇಲೆ ಏನಾದರೊಂದು ಕಾರಣ ತೋರಿ ಕಿತ್ತುಕೊಳ್ಳುತ್ತಾರೆ!"

“ ಅದೂ ಸಾಧ್ಯ. ಅಂತು, ಸದ್ಯಕ್ಕಾದರೂ ಮೈಸೂರು ಅರಸುಮನೆತನಕ್ಕೆ ಒಳ್ಳೆಯ ಕಾಲ ಬರುತ್ತಿದೆ ಎಂದು ನಿಮ್ಮ ಊಹೆ.”

“ ಆ ವಿಚಾರದಲ್ಲಿ ನನಗೆ ಅನುಮಾನವೇ ಇಲ್ಲ ನಾದಿಮ್. ಆದ್ದರಿಂದ ನಮ್ಮ ಸದ್ಯದ ಹಿತಸಾಧನೆಗಾದರೂ ನಾವು ಆ ಮನೆತನವನ್ನು ಆಶ್ರಯಿಸಬೇಕು.”

“ ಹಾಗೆನ್ನುತ್ತೀರಾ ?”

“ ಅಷ್ಟೇ. ನನಗೆ ಇನ್ನಾವ ಮಾರ್ಗವೂ ತೋರುತ್ತಿಲ್ಲ.”

“ ನಿಮ್ಮ ಸೂಚನೆ ಒಪ್ಪಿಕೊಂಡೆ ಎನ್ನಿ. ನಮ್ಮ ಹಿಂಸೆಗಳಿಗೆ ಗುರಿಯಾಗಿರುವ ಆ ಅರಸುಮನೆತನದ ಆಶ್ರಯವನ್ನು ನಾವು ಸಾಧಿಸುವುದಾದರೂ ಹೇಗೆ ? – ಅದೊಂದು ದೊಡ್ಡ ಸಮಸ್ಯೆಯಲ್ಲವೆ ?”

“ ಮೇಲು ನೋಟಕ್ಕೆ ಸಮಸ್ಯೆಯೇ. ಆದರೆ, ಈ ವಿಚಾರವನ್ನೆಲ್ಲಾ ನಾನು ಬಹಳ ದಿನದಿಂದ ಆಲೋಚಿಸುತ್ತಿದ್ದೇನಾಗಿ, ನಮ್ಮ ದಾರಿಯನ್ನು ಸುಗಮ ಮಾಡಿಕೊಂಡಿದ್ದೇನೆ ನಾದಿಮ್.”

“ ನಿಜವಾಗಿ !”

“ ಅರಮನೆಯ ಲೂಟಿ ಮಾಡಿಸಲು ನಾನೇ ಹೋಗಬೇಕೆಂದು ಸುಲ್ತಾನರು ಸೂಚಿಸಿದಾಗ ನಾನೇಕೆ ಉಪಾಯವಾಗಿ ತಪ್ಪಿಸಿಕೊಂಡೆ ಮತ್ತೆ !”

“ ನೀವೇನೋ ತಪ್ಪಿಸಿಕೊಂಡಿರಿ. ನನಗೆ ಕೆಟ್ಟ ಹೆಸರು ಬಂತು.”

“ ಆ ಮಾತು ನಾನು ಒಪ್ಪುವುದಿಲ್ಲ. ನನ್ನ ಸೂಚನೆ ಅನುಸರಿಸಿ ನೀನು ಆ ಸಂದರ್ಭದಲ್ಲಿ ಸರಿಯಾಗಿಯೇ ನಡೆದುಕೊಂಡಿದ್ದೀಯೆ. ಆದ್ದರಿಂದ ಲೂಟಿಯ ವ್ಯವಹಾರದಲ್ಲಿ ನಿನ್ನ ವಿಚಾರವಾಗಿ ಕೆಟ್ಟ ಅಭಿಪ್ರಾಯ ಬರುವುದು ಶಕ್ಯವಿಲ್ಲ.”

“ ಏನೋ ಆ ಅಲ್ಲಾನಿಗೇ ಗೊತ್ತು.”

“ ಅಲ್ಲಾನಿಗೆ ಮಾತ್ರ ಏಕೆ ? ಅದು ನನಗೂ ಗೊತ್ತು ನಾದಿಮ್. ಈ ಮಾತು ಕೇಳು. ನಿನ್ನ ಮಾರ್ಗವನ್ನು ಇನ್ನೂ ಸುಗಮ ಮಾಡಲು ಒಂದು ಕಾರ್ಯಕ್ರಮ ಯೋಚಿಸಿದ್ದೇನೆ. ಹೆದರಬೇಡ. ಎಲ್ಲ ಸರಿಹೋಗುತ್ತದೆ.”

“ ಎಲ್ಲ ನಿಮ್ಮ ಕೃಪೆ.”

“ ಹಾಗೆಂದುಕೊಂಡು ಸುಮ್ಮನಿರು. ಈವರೆಗೆ ಆಡಿದ್ದನ್ನೆಲ್ಲಾ ಮರೆತುಬಿಡು. ಗೊತ್ತಾಯಿತು ತಾನೆ ನಾನು ಹೇಳಿದ್ದು.”

“ ನನ್ನ ವಿಚಾರವಾಗಿ ಕೂಡ ಅನುಮಾನವೇ ದಿವಾನರೆ.”

"ಸ್ವಲ್ಪ ಅನುಮಾನಕ್ಕೆ ಆಸ್ಪದವಿದ್ದರೂ ನಾನು ನಿನ್ನನ್ನು ಹತ್ತಿರಕ್ಕೆ ಸೇರಿಸುತ್ತಿರಲಿಲ್ಲ ನಾದಿಮ್. ನನ್ನ ಗರಡಿಯಲ್ಲಿ ಕುದುರಿದವ ನೀನು? ನಿನಗದು ತಿಳಿಯದೆ?"

"ನಾನದನ್ನು ಚೆನ್ನಾಗಿ ಬಲ್ಲೆ ದಿವಾನರೆ."

§

"ಅಂತು ಇಲ್ಲಿನ ಪರಿಸ್ಥಿತಿ ತುಂಬಾ ಬದಲಾಯಿಸಿರುವ ಹಾಗಿದೆಯಲ್ಲ. ಕಾಲ ಬದಲಾಯಿಸಿದ ಹಾಗೆ ಕಾಣುತ್ತದೆ."

"ಆ ಮಾತು ನಿಜ ದಾಸರೆ, ಕೆಟ್ಟ ಕಾಲ ಕಳೆಯಿತೆಂದರೆ, ಶತ್ರುಗಳೂ ಮಿತ್ರರಂತೆ ನಡೆದುಕೊಳ್ಳುತ್ತಾರೆ ಎಂದು ಹೇಳುವುದು ಸುಳ್ಳಲ್ಲ ನೋಡಿ."

"ಇಲ್ಲಿನ ವ್ಯವಹಾರ ನೋಡಿದೊಡನೆಯೆ ನನಗೂ ಹಾಗೆಯೇ ಎನಿಸಿತು ತಾಯಿ. ವಾಸ್ತವವಾಗಿ ಇಂದಿನ ಪರಿಸ್ಥಿತಿಯಲ್ಲಿ ನಿಮ್ಮ ಮೇಲೆ ಕಾವಲು, ಕಟ್ಟು ತುಂಬ ಬಲವಾಗಿರುತ್ತದೆ; ನಿಮ್ಮನ್ನು ಕಂಡು ಮಾತನಾಡುವುದೇ ದೊಡ್ಡ ಸಮಸ್ಯೆಯಾದೀತು ಎಂದುಕೊಂಡಿದ್ದೆ. ಆದರೆ ಚಾಮುಂಡಿ 'ಈಗ ಅಂಥ ತೊಂದರೆ ಯೇನೂ ಇಲ್ಲ. ಹಿಂದಿನ ಬಾಗಿಲಿನಿಂದ ಸುಲಭವಾಗಿ ಒಳಕ್ಕೆ ಹೋಗಬಹುದು' ಎಂದಾಗ ನನಗೂ ತುಂಬ ಆಶ್ಚರ್ಯವಾಯಿತು."

"ನಮಗೂ ಆಶ್ಚರ್ಯದ ವಿಚಾರವೇ ದಾಸರೇ. ಹೀಗಾಯಿತು ನೋಡಿ: ಈಗ್ಗೆ ಎಂಟು ಹತ್ತು ದಿವಸ ಇರಬಹುದು. ನಾವು ಇಲ್ಲೇ ಇದ್ದೆವು. ಹೊರಗೇನೋ ಸ್ವಲ್ಪ ಓಡಾಟ ಬಲವಾದಂತೆ ತೋರಿತು. ಚಾಮುಂಡಿಯನ್ನು ಕರೆದು 'ಸಂದರ್ಭ ಏನು ನೋಡಿಕೊಂಡು ಬಾ' ಎಂದೆವು. ಸ್ವಲ್ಪ ಹೊತ್ತಿನ ಮೇಲೆ ಅವಳು ಹಿಂದಕ್ಕೆ ಬಂದು 'ತಾಯಿ, ಮೀರ್ ಸಾದಕ್ ಸಾಹೇಬ ಇಲ್ಲಿಗೆ ಬರುತ್ತಾನಂತೆ. ಅದಕ್ಕಾಗಿ ಸಿಪಾಯಿಗಳೆಲ್ಲಾ ಚುರುಕಾಗುತ್ತಿದ್ದಾರೆ' ಅಂದಳು. ಇನ್ನೇನು ಹೊಸ ಕುತ್ತು ಬಂತೋ ಎನಿಸಿತು ನಮಗೆ. ಹಾಗೆ ಹೆದರಲು ಕಾರಣವೂ ಇತ್ತು ಅನ್ನಿ."

"ಏನು ತಾಯಿ ಅದು?"

"ಕಂಪನಿ ಬಹಾದ್ದೂರ್ ಸರ್ಕಾರದ ಕಡೆಯಿಂದ ಸುಲ್ತಾನನಿಗೆ ಏನೋ ಬಲವಾದ ಬೆದರಿಕೆ ಕಾಗದ ಬಂದಿದೆ. ಆದರಿಂದ ಅವನು ತುಂಬಾ ರೇಗಿದ್ದಾನೆ–ಎಂದು ಸುದ್ದಿ ಬಂದಿತ್ತು. ನಮಗೆ ಆ ಹೊತ್ತಿಗಾಗಲೇ."

"ಹಾಗೇನು?"

"ಆದರ ಪರಿಣಾಮವಾಗಿ ಈ ಸುಲ್ತಾನ ನಮಗೆ ಇನ್ನೇನು ಹಿಂಸೆ ಕೊಡಲು ನಿರ್ಧರಿಸಿದ್ದಾನೋ ಎಂದುಕೊಂಡೆವು."

"ಸರಿಯೇ."

"ಮೀರ್ ಸಾದಕ್ ಬಂದ. ಜೊತೆಯಲ್ಲಿ ಆ ಹುಡುಗ ನಾದಿರ್ ಕೂಡ ಇದ್ದನಂತೆ. – ಚಾಮುಂಡಿ ನಡೆದಿದ್ದನ್ನೆಲ್ಲಾ ಗಟ್ಟಾಗಿ ಕೇಳಿ, ನೋಡಿ ಬಂದು ನಮಗೆ ವರದಿ ಮಾಡಿದಳು ಅನ್ನಿ – ಮೀರ್ ಸಾದಕ್ 'ಯಾಕೆ ಇಲ್ಲಿ ಇಷ್ಟು ಜನ ಸಿಪಾಯಿಗಳು ? – ಏನು ಕಾವಲು ಕಾಯುವುದಕ್ಕೆ ? ದಂಡದ ಕೂಳು ತಿಂದು ಕೊಂಡು ತೂಕಡಿಸಿಕೊಂಡಿರುವುದಕ್ಕೆ! ಇವರನ್ನೆಲ್ಲಾ ಈಗಲೇ ಕೋಟೆ ಕಾಂಗಾರಿಗೆ ಕಳಿಸು. ಇಷ್ಟು ದಿನ ದಂಡದ ಕೂಳು ತಿಂದಿದ್ದಕ್ಕೆ ಅಲ್ಲಾದರೂ ನಾಲ್ಕು ದಿನ ಮೈ ಬಗ್ಗಿಸಿ ಕೆಲಸ ಮಾಡಲಿ' ಅಂತ ಗದರಿಸಿಕೊಂಡನಂತೆ. ಆಮೇಲೆ ಆ ಹುಡುಗ 'ಇಲ್ಲಿನ ಕಾವಲಿಗೆ ಏನಪ್ಪಣೆ' ಎಂದನಂತೆ. 'ಇಬ್ಬರು ಕಂದಾಚಾರದ ಜವಾನರು ಸಾಕು. ಇಲ್ಲಿ ಬಿದ್ದಿರಲಿ' ಎಂತ ಅವನು ಆಜ್ಞೆ ಮಾಡಿದನಂತೆ. ಆ ಹುಡುಗ ಏನು ಮಾಡಿಯಾನು ? ತಾನು ಆದುವರೆಗೆ ನಮ್ಮ ಮೇಲೆ ಬಲವಾದ ಕಾವಲು ಇಟ್ಟು ಹಿಂಸೆ ಮಾಡಿದ್ದು ತಪ್ಪಾಯಿತು ಅಂತ ಎಂದುಕೊಂಡನೋ ಏನೋ! ಚಾಮುಂಡಿಯನ್ನು ಕರೆಸಿಕೊಂಡು 'ರಾಣೀಸಾಹಿಬಾರವರಿಗೆ ಹೇಳು. ನಾನು ಚಾಕರ. ಯಾರ ಚಾಕರಿಯಲ್ಲಿ ಇರುತ್ತೇನೋ ಅವರ ಆಜ್ಞೆಯಂತೆ ನಡೆದುಕೊಳ್ಳುತ್ತೇನೆ. ಇನ್ನುಮೇಲೆ ರಾಣೀಸಾಹಿಬಾರವರ ಊಟ ಉಪಚಾರಕ್ಕೆ ಏನು ಬೇಕಾದರೂ ನನಗೆ ತಿಳಿಸು. ಅವನ್ನು ಕಳುಹಿಸಲು ಏರ್ಪಾಡು ಮಾಡುತ್ತೇನೆ. ರಾಣೀಸಾಹಿಬಾರವರಿಗೆ ಯಾವ ತೊಂದರೆಯೂ ಆಗದಂತೆ ನೋಡಿಕೋ ಎಂದು ದಿವಾನ್ ಸಾಹೇಬರು ಆಜ್ಞೆ ಮಾಡಿದ್ದಾರೆ' ಎಂದನಂತೆ. ಚಾಮುಂಡಿ ಇದೆಲ್ಲಾ ನನಗೆ ವರದಿ ಮಾಡಿದಳು. ನಾನು ಹೇಳಿದೆ – ಅವರಾಗಿ ಏನು ಕಳುಹಿಸುತ್ತಾರೋ ಅದು ಕಳುಹಿಸಲಿ. ನಾವಾಗಿ ಏನನ್ನೂ ಕೇಳುವುದು ಬೇಡ – ಎಂತ."

"ಒಳ್ಳೆಯ ಕೆಲಸ ಮಾಡಿದಿರಿ. ಅಂತು ಹೇಗೋ ಯಾವ ಕಾರಣದಿಂದಲೋ ಪರಿಸ್ಥಿತಿ ಉತ್ತಮವಾಯಿತಲ್ಲ. ಅಷ್ಟೇ ಸಂತೋಷ."

"ನಮ್ಮ ಕಥೆ ಹೇಳಿ ಆಯಿತಲ್ಲ. ಇನ್ನು ನಿಮ್ಮ ಸರದಿ."

"ಇಲ್ಲಿ ನಮ್ಮ ಯಾರ ಪ್ರಯತ್ನವೂ ಇಲ್ಲದೆ, ನಿಮ್ಮ ಬಂಧನದ ಸ್ಥಿತಿ ಉತ್ತಮಗೊಂಡಿದ್ದು, ಸನ್ನಿಧಾನದ ವ್ಯವಹಾರದಲ್ಲಿ ಶುಭವಾದ ಮಾರ್ಪಾಟು

ಆರಂಭವಾದುದರ ಚಿನ್ಹೆ ಎನ್ನಿಸುತ್ತದೆ ನನಗೆ. ಅಲ್ಲೂ ಹಾಗೇ ತಾಯಿ. ರಾಯರಿಗೆ ಹೊಸ ಪರಿಚಯಗಳಾದುವು. ಹೊಸ ಸ್ನೇಹಗಳಾದುವು. ಅವೆಲ್ಲಾ ನಮಗೆ ಅನುಕೂಲವಾಗಿ ಪರಿಣಮಿಸಿದುವು. ಒಟ್ಟಿನಲ್ಲಿ ನಾವೆಲ್ಲರೂ ಅಷ್ಟೊಂದು ದಿನ ಗಳಿಂದ ಅಪೇಕ್ಷಿಸುತ್ತಿದ್ದುದು ಶೀಘ್ರವಾಗಿ ಕೈಗೂಡುವಂತೆ ತೋರುತ್ತಿದೆ ತಾಯಿ."

"ಸಂತೋಷ ದಾಸರೆ. ತುಂಬ ಸಂತೋಷ. ಈಗ ನೀವು ಇಲ್ಲಿ ಎಷ್ಟು ಹೊತ್ತಾದರೂ ಇರಬಹುದು. ಮೊದಲಿನ ಹೆದರಿಕೆಯೇನೂ ಇಲ್ಲ. ಎಲ್ಲ ವಿಚಾರ ವಿವರವಾಗಿ ಹೇಳಬಹುದು."

"ಸನ್ನಿಧಾನದ ಅಪ್ಪಣೆಯಾದಂತೆ: ಈಗ್ಗೆ ಆರೇಳು ತಿಂಗಳ ಹಿಂದೆ ಕಂಪನಿ ಸರ್ಕಾರಕ್ಕೆ ಹೊಸ ಗೌರ್ನರ್ ಜನರಲ್ ಸಾಹೇಬರು ಬಂದರು, ಸೀಮೆಯಿಂದ."

"ಹೌದೇನು ?"

"ರಾಯರು ಚನ್ನಪುರಿಗೆ ಹೋಗಿ ಅವರನ್ನು ನೋಡಿದರು. ಎಲ್ಲ ವಿಚಾರ ವನ್ನೂ ತಿಳಿಸಿದರು. ಹೊಸ ಗೌರ್ನರ್ ಜನರಲ್ ಸಾಹೇಬರು ಹಿಂದಿದ್ದವರಂತಲ್ಲ ವಂತೆ. ಅವರು ಆಡಿದ ಮಾತುಕತೆ ನೋಡಿ ಅವರಿಂದ ನಮಗೆ ಸಹಾಯವಾಗ ಬಹುದು ಎಂದು ರಾಯರು ನಿರೀಕ್ಷಿಸಿದ್ದರು. ದೈವಕೃಪೆಯಿಂದ ರಾಯರಿಗೆ ಹೊಸ ಗೌರ್ನರ್ ಜನರಲ್ ಸಾಹೇಬರ ತಮ್ಮಂದಿರು ವೆಲ್ಲೆಸ್ಲಿ ಸಾಹೇಬರ ಪರಿಚಯ ವಾಯಿತು."

"ಅವರೂ ಈ ದೇಶದಲ್ಲೇ ಇದ್ದಾರೇನು ?"

"ಹೌದು ತಾಯಿ. ಕಂಪನಿ ಸೈನ್ಯದಲ್ಲಿ ಅಧಿಕಾರಿಯಾಗಿದ್ದಾರೆ. ಚಿನ್ನದಂಥ ಮನುಷ್ಯ. ಅವರ ಪರಿಚಯವಾದ ಮೇಲೆ ರಾಯರು ತಮ್ಮ ವಿಚಾರವನ್ನೆಲ್ಲಾ ಅವರಿಗೆ ತಿಳಿಸಿದರು. ಅವರಿಂದ ನಮ್ಮ ಕೆಲಸಕ್ಕೆ ತುಂಬ ಸಹಾಯವಾಯಿತು. ಅದೇನು ಕಾರಣವೋ ಚನ್ನಪುರಿಯ ಕಂಪನಿ ಸರ್ಕಾರದವರಿಗೆ ಸುಲ್ತಾನನ ಮೇಲೆ ಕೈ ಎತ್ತಲು ಅಷ್ಟಾಗಿ ಮನಸ್ಸಿರಲಿಲ್ಲ. ವೆಲ್ಲೆಸ್ಲಿ ಸಾಹೇಬರು ಅತ್ತ ತಮ್ಮ ಅಣ್ಣ ಮಾರ್ನಿಂಗ್‌ಟನ್ ಸಾಹೇಬರಿಗೆ ಇತ್ತ ತಮ್ಮ ಜೊತೆಯ ಅಧಿಕಾರಿಗಳಿಗೆ ಪ್ರೇರೇಪಣೆ ಮಾಡಿ ಅಂತೂ—"

"ಹೋರಾಟಕ್ಕೆ ಒಪ್ಪಿಸಿದರು ಅನ್ನಿ ! – ಅಬ್ಬ. ಅವರ ಹೊಟ್ಟೆ ತಣ್ಣಗಿರಲಿ. ಮಹರಾಯ ನಮ್ಮ ದೀನಸ್ಥಿತಿಗಾಗಿ ಮರುಗಿ ನಮ್ಮ ಸಹಾಯಕ್ಕೆ ಬಂದರಲ್ಲ !"

"ಅಂತೂ ಟಿಪ್ಪೂವನ್ನು ಕೊನೆಗಾಣಿಸುವ ತನಕ ಹೋರಾಟ ನಡೆಸಿಯೇ ತೀರಬೇಕೆಂದು ಗೌರ್ನರ್ ಜನರಲ್ ಸಾಹೇಬರು ತೀರ್ಮಾನ ಮಾಡಿದ್ದಾರಂತೆ.

ನೀವು ಹೇಳಿದಿರಲ್ಲ ಆ ಕಾಗದ ಆ ಸಂಬಂಧದ್ದೇ ಇರಬೇಕು. ಹೆಚ್ಚೆಂದರೆ ಇನ್ನು ಒಂದೆರಡು ತಿಂಗಳು–ಅಷ್ಟರಲ್ಲಿ ಕಂಪನಿ ದಂಡು ಈ ಕಡೆ ಹೊರಟುಬಿಡುತ್ತದೆ. ಇದು ತುಂಬಾ ಗುಟ್ಟಿನ ವಿಚಾರ. ವೆಲ್ಲೆಸ್ಲಿ ಸಾಹೇಬರು ಏನೋ ಸುತ್ತಿ ಬಳಸಿ ಆ ಮಾತು ಸೂಚನೆ ಮಾಡಿದರಂತೆ ರಾಯರಿಗೆ."

"ನಿಜವೇ ದಾಸರೆ ?"

"ಚನ್ನಕೇಶವನ ಆಣೆ ನಿಜ. ಸನ್ನಿಧಾನದವರು ಯಾವ ಅನುಮಾನವನ್ನೂ ಇಟ್ಟುಕೊಳ್ಳಬೇಕಾಗಿಲ್ಲ. ಕಂಪನಿ ಸೈನ್ಯದ ಜೊತೆಯಲ್ಲಿ ರಾಯರು ಕೂಡ ಬರುತ್ತಾರೆ."

"ಇದನ್ನೆಲ್ಲಾ ಕೇಳಿ ಸಂತೋಷವಾಯಿತು ದಾಸರೆ. ಈಗ್ಗೆ ಏಳು ವರ್ಷದ ಹಿಂದೆ ಕಂಪನಿ ದಂಡು ಬಂದು ಪಟ್ಟಣಕ್ಕೆ ಮುತ್ತಿಗೆ ಹಾಕಿದಾಗಲೂ ಹೀಗೇ ಸಂತೋಷಪಟ್ಟೆವು. ಆದರೆ ನೀವೇ ನೋಡಿದರಲ್ಲ ಕೊನೆಗೆ ಏನಾಯಿತು ಅಂತ—"

"ಈ ಸಾರಿ ಖಂಡಿತ ಹಾಗಾಗುವುದಿಲ್ಲ ತಾಯಿ. ನನ್ನ ಮಾತು ನಂಬಿ. 'ಮಾರ್ನಿಂಗ್‌ಟನ್ ಸಾಹೇಬರು ಕಾರನ್‌ವಾಲಿಸ್ ಸಾಹೇಬರ ಹಾಗಲ್ಲ. ಸುಲ್ತಾನನ ವಿಚಾರದಲ್ಲಿ ಅವರ ಅಭಿಪ್ರಾಯವೇ ಬೇರೆ' ಎಂದು ವೆಲ್ಲೆಸ್ಲಿ ಸಾಹೇಬರು ಎಷ್ಟೋ ಬಾರಿ ಹೇಳಿದ್ದಾರೆ – ರಾಯರ ಸಂಗಡ."

"ಆಯಿತು. ಒಳ್ಳೆಯದನ್ನೇ ಹಾರಯಿಸೋಣ."

"ಆ ಕಡೆಯಿಂದ ದಂಡೇನೋ ಬರುವುದು ನಿರ್ಧರವಾಯಿತಲ್ಲ. ಈ ಕಡೆ ಸನ್ನಿಧಾನದವರು ನಡೆಸಬೇಕಾದ ಕೆಲಸ ಇದೆ."

"ನಮ್ಮಿಂದಾಗಬೇಕಾದದ್ದು ?"

"ಹೌದು ತಾಯಿ."

"ಮಾಡಬೇಕಾದುದನ್ನೆಲ್ಲಾ ಮಾಡಲೇಬೇಕಲ್ಲ. ಹೇಳಿ. ನಮ್ಮ ಕೈಲಾದ ವ್ಯವಸ್ಥೆಯನ್ನೆಲ್ಲಾ ಮಾಡೋಣ. ಅಂತೂ ಆ ದೇವಿಯ ಕೃಪೆಯಿಂದ ಈಗ ಸ್ವಲ್ಪ ಕೈಕಾಲಾಡಿಸುವುದಕ್ಕೆ ನಮಗೆ ಅವಕಾಶ ದೊರೆತಿದೆಯಲ್ಲ."

"ಕಂಪನಿ ಸೈನ್ಯ ಈ ಕಡೆಗೆ ಹೊರಟೊಡನೆಯೇ ನಮಗೆ ಸುದ್ದಿ ಬರುತ್ತದೆ ತಾಯಿ."

"ಯಾರಿಂದ ?"

"ರಾಯರಿಂದ. ಅದಕ್ಕೋಸ್ಕರ ಅವರು ಈಗಾಗಲೇ ಬೇಕಾದಷ್ಟು ಜನರನ್ನು ಸಿದ್ಧಮಾಡಿದ್ದಾರೆ. ಈ ಜನ ಯದುಗಿರಿ, ಸಾಲಿಗ್ರಾಮುಗಳಿಗೆ ಯಾತ್ರೆ

ಹೋಗುವ ಶ್ರೀವೈಷ್ಣವರಂತೆ ವೇಷ ಮರೆಸಿಕೊಂಡು ಬೆಂಗಳೂರು ತಿರುಮಲೆಗಳ ಮೂಲಕ, ಕೊಳ್ಳೆಗಾಲ ಸೋಸಲೆಗಳ ಮಾರ್ಗವಾಗಿ, ಸತ್ಯಮಂಗಲ ತೆರಕಣಾಂಬಿಗಳ ಮೂಲಕ ಇಲ್ಲಿಗೆ ಬಂದು ಸುದ್ದಿ ಕೊಡುತ್ತಾರೆ. ನಮ್ಮ ಕೆಲಸ ಏನೆಂದರೆ – ಇವರು ಕೊಡುವ ಸುದ್ದಿಯನ್ನನುಸರಿಸಿ ಕಂಪನಿ ಸೈನ್ಯಕ್ಕೆ ಬೇಹು ಕೊಡಲು, ಸಾಮಾನು ಸರಂಜಾಮು ಒದಗಿಸಲು ನಮ್ಮ ಜನಗಳನ್ನು ಅಲ್ಲಲ್ಲಿಗೆ ಕಳುಹಿಸಬೇಕು. ಯದುಗಿರಿ, ಸಾಲಿಗ್ರಾಮಗಳ ಕಡೆಯಿಂದ ಹಿಂದಿರುಗುವ ಜನ ನಾವು ಮಾಡಿರುವ ವ್ಯವಸ್ಥೆಯ ಸುದ್ದಿ ತೆಗೆದುಕೊಂಡು ಹೋಗುತ್ತಾರೆ. ಇದು ರಾಯರು ಸೂಚಿಸಿರುವ ವ್ಯವಸ್ಥೆ. – ಅಂದರೆ ಇದಕ್ಕೆ—"

"ಹಣಬೇಕಲ್ಲ ಏನು ಮಾಡುವುದು ಎನ್ನುತ್ತೀರಾ ದಾಸರೆ."

"ಈ ವಿಚಾರದಲ್ಲಿ ಸನ್ನಿಧಾನಕ್ಕೆ ತಿಳಿಯದ್ದು ಏನಿದೆ ತಾಯಿ ? ಆದರೆ, ಈ ಸ್ಥಿತಿಯಲ್ಲಿ ಸನ್ನಿಧಾನದೊಡನೆ ಆ ಮಾತು ಆಡಬೇಕಾದರೆ ಕತ್ತುಹಿಡಿದಂತಾಗುತ್ತದೆ."

"ಚಿಂತಿಸಬೇಡಿ ದಾಸರೆ. ಏನಾದರೂ ವ್ಯವಸ್ಥೆ ಮಾಡೋಣ. ನಮ್ಮ ಕಷ್ಟ ನಮಗೆ ಇದ್ದೇಯಿರುತ್ತದೆ. ಹಾಗೆಂದುಕೊಂಡು ಎಣ್ಣೆ ಬಂದಾಗ ಕಣ್ಣುಮುಚ್ಚಿ ಕೂತರು ಎಂದ ಹಾಗೆ ಮಾಡಿಕೊಳ್ಳಬಾರದಲ್ಲ."

"ಹೌದು ತಾಯಿ. ಏನಾದರೂ ಮಾಡಲೇಬೇಕು. ಈಗ ನಾವು ತಟಸ್ಥರಾಗಿರುವುದು ಎಂದಿಗೂ ಹಿತವಲ್ಲ."

"ಮಹಾಮಾತೃಶ್ರೀಯವರು ಕ್ಷಣಕಾಲ ಮೌನವಾಗಿ ಕುಳಿತು ಆಲೋಚಿಸಿ ಹೇಳಿದರು :

"ಒಂದು ಕೆಲಸ ಮಾಡಿ ದಾಸರೆ. ಸಮ್ಮುಖದ ನಂಜರಾಜಯ್ಯನವರಲ್ಲಿಗೆ ಹೋಗಿ, ಅವರ ದರ್ಶನ ತೆಗೆದುಕೊಳ್ಳಿ – ನಾಳೆ ರಾತ್ರಿ. ಆ ಹೊತ್ತಿಗೆ ನಾನು ಚಾಮುಂಡಿಯೊಡನೆ ಮಾತು ಕಳುಹಿಸಿರುತ್ತೇನೆ. ನಿಮ್ಮ ಸಹಾಯಕ್ಕೆ ಯಾವ ಯಾವ ಯೋಗ್ಯತೆಯ ಜನ ಎಷ್ಟು ಎಷ್ಟು ಮಂದಿ ಬೇಕು ಎಂಬುದನ್ನು ಅವರಿಗೆ ತಿಳಿಸಿ. ಯಾಕೆ, ಏನು ಎಂದು ಮಾತು ಬಂದರೆ ಯಾವ ಅನುಮಾನಕ್ಕೂ ಎಡೆ ಕೊಡದ ಹಾಗೆ ಏನಾದರೊಂದು ಕತೆ ಹೇಳಿ ತೇಲಿಸಿಬಿಡಿ. ನಂಜರಾಜಯ್ಯ ನಿಮಗೆ ತಕ್ಕ ಜನರ ಪರಿಚಯ ಕುದುರಿಸುತ್ತಾರೆ."

"ಅಷ್ಟಾದರೆ ಎಷ್ಟೋ ಸಹಾಯ ಮಾಡಿದಹಾಗಾಯಿತು. ಹಾಗೆ

ಯಾರಾದರೂ ತಿಳಿದವರ ಕಡೆಯಿಂದ ನಮಗೆ ಜನ ದೊರೆತರೆ ಎಷ್ಟೋ ಒಳ್ಳೆಯದು."

"ನಂಜರಾಜಯ್ಯನವರಿಗೆ ನಿಮ್ಮ ಹೆಸರು ಗೊತ್ತಿದೆ. ಪರಿಚಯವೂ ಇದೆ. ಆದರೂ ರಾಜಕೀಯ ವ್ಯವಹರಣೆಯಲ್ಲಿ ಯಾವ ಕಾರಣದಿಂದಲೂ ಪರಸ್ಪರ ಅಪನಂಬಿಕೆ ಹುಟ್ಟಬಾರದು. ಆದ್ದರಿಂದ ನೀವು ನಮ್ಮವರು ಎಂಬ ಕುರುಹಿಗಾಗಿ ಜೊತೆಯಲ್ಲಿ ಇದನ್ನೂ ತೆಗೆದುಕೊಂಡು ಹೋಗಿ" ಎಂದು ಮಹಾಮಾತೃಶ್ರೀಯವರು ಒಂದು ಚೂರು ಕಾಗದದ ಮೇಲೆ "ಇವರು ನಮ್ಮ ಆಪ್ತರು. ಸಹಾಯಾರ್ಹರು" ಎಂದು ಬರೆದು ಅದರ ಕೆಳಗೆ ರಾಜಮುದ್ರೆಯನ್ನೊತ್ತಿ ಆ ಕಾಗದವನ್ನು ದಾಸರ ಕೈಗೆ ಕೊಡುತ್ತಾ :

"ಈ ಕಾಗದ ನಂಜರಾಜಯ್ಯನವರಿಗೆ ತೋರಿಸಿದೊಡನೆಯೇ ಅವರೆದುರಿನಲ್ಲಿಯೇ ಹರಿದು ಹಾಕಿ ಬಿಡಿ. ಅಲ್ಲಿಯವರೆಗೆ ಇದನ್ನು ತುಂಬ ಎಚ್ಚರಿಕೆಯಿಂದ ರಕ್ಷಿಸಿಕೊಂಡಿರಿ. ಇಂಥ ಪರಿಚಯ ಪತ್ರಗಳು ಬೇರೆಯವರ ಕೈಗೆ ಸಿಕ್ಕಿದರೆ ನಮಗೆ ಅರಿವಿಲ್ಲದ ರೀತಿಯಲ್ಲಿ ಎಲ್ಲೆಲ್ಲೋ ದುರುಪಯೋಗವಾಗಬಹುದು."

"ತುಂಬ ಎಚ್ಚರಿಕೆಯಿಂದಿರುತ್ತೇನೆ."

ಅಷ್ಟು ಹೇಳಿ ದಾಸರು ಸುಮ್ಮನಾದರು. ಮಹಾಮಾತೃಶ್ರೀಯವರು ಮಾತು ಮುಂದುವರಿಸುವರೆಂದು ನಿರೀಕ್ಷಿಸಿ ಒಂದರೆಕ್ಷಣ ಮೌನವಾಗಿ ಕುಳಿತರು. ಮಹಾಮಾತೃಶ್ರೀಯವರು ದಾಸರ ಮುಖ ನೋಡಿ ಲಘು ಹಾಸ್ಯ ಬೆರೆತ ಧ್ವನಿಯಲ್ಲಿ :

"ಇವೇನು ದಾಸರೆ, ಇದ್ದಕ್ಕಿದ್ದಂತೆ ಇಷ್ಟೊಂದು ಗಾಢವಾದ ಆಲೋಚನೆಯಲ್ಲಿ ತೊಡಗಿಬಿಟ್ಟಿರಿ. ಹೇಳಿ, ಅದೇನೆಂಬುದು ನಮಗೂ ಗೊತ್ತಾಗಲಿ."

ಈ ಅನಿರೀಕ್ಷಿತ ಪ್ರಶ್ನೆಯಿಂದ ದಾಸರ ಮನಸ್ಸು ಸ್ವಲ್ಪ ಅಸ್ತವ್ಯಸ್ತವಾಯಿತು. ಆ ಸ್ಥಿತಿಯಲ್ಲಿ ಅವರು :

"ಏನೂ ಇಲ್ಲವಲ್ಲ. ಸುಮ್ಮನೆ—"

"ಹಣದ ವಿಚಾರ ಹೇಗೆ ಎಂದು ಯೋಚಿಸುತ್ತಿದ್ದೀರೇನೋ ಎಂದುಕೊಂಡೆವು."

"ಹಾಗೇನಿಲ್ಲ – ಆದರೆ – ಅದೂ ಯೋಚನೆ ಮಾಡಬೇಕಾದ ವಿಚಾರವೇ."

"ಈ ಸಂಬಂಧದಲ್ಲಿ ಎಷ್ಟು ಖರ್ಚು ಬಂದೀತು ದಾಸರೆ."

"ನನಗೆ ಅನುಭವವಿಲ್ಲ ತಾಯಿ. 'ಇದು ಒಂದು ದೊಡ್ಡ ಖರ್ಚಿನ ಬಾಬು

ಆದರೂ ಆಗಬಹುದು. ಅಷ್ಟು ಖರ್ಚು ಆಗದೆ ಹೋದರೂ ಹೋಗಬಹುದು' ಎಂದು ರಾಯರು ಆಡಿದ ಮಾತು ಜ್ಞಾಪಕವಿದೆ. ಅಷ್ಟೇ ತಾಯಿ."

"ಸರಿ; ಎಷ್ಟು ಅವಶ್ಯಕವೋ ಅಷ್ಟು ಖರ್ಚು ಮಾಡೋಣ. ಕೃಪಣ ತನವೂ ಬೇಡ; ದುಂದುಗಾರಿಕೆಯೂ ಬೇಡ."

"ಹೌದು ತಾಯಿ. ಹಣ ಕೈಗೆ ಸಿಕ್ಕಿತೆಂದು ಅದನ್ನು ಖಂಡಿತ ಹಾಳು ಮಾಡಬಾರದು. ಕೃಪಣತನದಿಂದ ಇಂಥ ವಿಷಯಗಳಲ್ಲಿ ಕೆಲಸ ಕೆಟ್ಟರೂ ಕೆಡ ಬಹುದು."

"ಅಂತು ನಮ್ಮ ಜೊತೆ ಬಿದ್ದು ನಿಮಗೂ ರಾಜಕೀಯದ ವಾಸನೆ ಬಲವಾಗಿ ಹತ್ತುತ್ತಾ ಇದೆ."

"ಹತ್ತಲಿಬಿಡಿ ತಾಯಿ. ನಮ್ಮ ರಾಜ್ಯ ನಮ್ಮದಲ್ಲದೆ ಇರುವಾಗ, ಅದು ನಮ್ಮದಾಗಬೇಕು ಎನ್ನುವವರು ಯಾರೇ ಆಗಲಿ, ಅವರು ಮಹಾ ಯೋಗಿ ಗಳಾಗಲಿ, ಅವರಿಗೆ ರಾಜಕೀಯದ ವಾಸನೆ ಹತ್ತದೆ ವಿಧಿಯಿಲ್ಲ. ಆರ್ಯ ಚಾಣಕ್ಯರ ಕಾಲದಿಂದ ಹಿಡಿದು, ವಿದ್ಯಾರಣ್ಯರು ರಾಮದಾಸ ಸ್ವಾಮಿಗಳು ಇಲ್ಲಿಯವರೆಗೆ ಹಾಗೇ ನಡೆದಿದೆ ತಾಯಿ."

"ಸರಿ, ದಾಸರೆ. ಈ ಕಾರ್ಯಕ್ರಮ ಸಾಧನೆಗೆ ಬೇಕಾಗಬಹುದಾದ ಹಣದ ವಿಚಾರ – ನಾವು ಯೋಚನೆ ಮಾಡುತ್ತೇವೆ. ಆ ಚಿಂತೆ ನಿಮಗೆ ಬೇಡ. ಏನಾದರೂ ಮಾಡೋಣ. ನಂಜರಾಜಯ್ಯನವರನ್ನು ನೋಡಿದ ಮೇಲೆ, ಮತ್ತೆ ನಮ್ಮನ್ನು ನೋಡಿ. ಆ ದೇವಿಯಿದ್ದಾಳಲ್ಲ ನಮ್ಮ ಕೈ ಹಿಡಿದು ನಡೆಸಲು."

"ಅವಳು ಕೈ ಹಿಡಿದು ನಡೆಸದಿದ್ದರೆ, ಮತ್ತಿನ್ನಾರು ನಡೆಸಿಯಾರು ತಾಯಿ. ಸನ್ನಿಧಾನದ ಅಪ್ಪಣೆಯಾದರೆ.—"

"ಚಾಮುಂಡಿ, ದಾಸರು ಹೊರಟರು."

§

"ಚೆನ್ನಾಗಿ ನೋಡಿ ಹೇಳಿ ಜೋಯಿಸರೆ. ನನ್ನ ಮನಸ್ಸಿಗೆ ತುಂಬಾ ಬೇಜಾರಾಗಿದೆ. ವ್ಯವಹಾರ ಈ ಸಾರಿ ಹಾಗೋ ಹೀಗೋ ತೀರಿಹೋಗಬೇಕು. ಸುಮ್ಮನೆ ಎಳೆದಾಡುವುದರಲ್ಲಿ ಏನೂ ಪ್ರಯೋಜನವಿಲ್ಲ."

"ಖಾವಿಂದರು ಅಪ್ಪಣೆ ಕೊಡಿಸಿದ್ದು ಸರಿ. ಸುಮ್ಮನೆ ಎಳೆದಾಡುವುದರಲ್ಲಿ

ಏನೇನೂ ಪ್ರಯೋಜನವಿಲ್ಲ. ವ್ಯವಹಾರ ಒಂದು ನಿಲುಗಡೆಗೆ ಬರತಕ್ಕದ್ದು ಒಳ್ಳೆಯದು."

"ಆ ಮಾತು ಇರಲಿ. ಚೆನ್ನಾಗಿ ನೋಡಿ ಹೇಳಿ."

"ನೋಡಿದ್ದೇನೆ ಖಾವಿಂದ್. ಅಷ್ಟೆ. ಕಳೆದ ಒಂದು ತಿಂಗಳಿಂದ ಗ್ರಹಗತಿ ಸ್ವಲ್ಪ ವಕ್ರವಾಗಿದೆಯಾಗಿ, ಖಾವಿಂದರ ಮನಸ್ಸಿಗೆ ಬೇಜಾರಾಗುವಂಥ ಘಟನೆಗಳು ನಡೆದುವು. ಈ ಧಾವಂತವೆಲ್ಲ ಶೀಘ್ರವಾಗಿ ಕೊನೆಗಾಣುತ್ತದೆ. ನಾಳೆ ಅಮಾವಾಸ್ಯೆ. ಗ್ರಹಗತಿ ಸ್ವಲ್ಪ ಕಠಿಣ. ನಾಳೆ ಒಂದು ದಿನ ಕಳೆಯಬೇಕು. ಅಷ್ಟೆಯೆ. ಆಮೇಲೆ ಎಲ್ಲ ಸುಗಮವಾಗುತ್ತದೆ."

"ಆ ವಿಚಾರದಲ್ಲಿ ನನಗೆ ಅಷ್ಟೊಂದು ನಂಬಿಕೆಯಿಲ್ಲ ಜೋಯಿಸರೆ."

"ತಾವೇ ಹೀಗೆ ಹೇಳಿದರೆ ?"

"ನೀವೇನೋ ಜೋತಿಷ ಚೆನ್ನಾಗಿ ಬಲ್ಲಿರಿ ಎಂದಿಟ್ಟುಕೊಳ್ಳೋಣ. ಆದರೆ ನಾನು ನಿಮಗಿಂತ ಚೆನ್ನಾಗಿ ಇಂದಿನ ಯುದ್ಧಪರಿಸ್ಥಿತಿ ಬಲ್ಲವನು. ಆದ್ದರಿಂದ ಇಂಥ ವಿಚಾರ ನಿಮಗಿಂತ ಖಚಿತವಾಗಿ ಬಲ್ಲೆ."

"ಅದಿಲ್ಲವೆನ್ನಲಾದೀತೇ ! ಖಾವಿಂದರು ಯುದ್ಧತಂತ್ರ ವಿಶಾರದರು. ಆ ವಿಚಾರ ನನಗೆ ಏನೇನೂ ತಿಳಿಯದು. ನಾನು ಹೇಳುವುದೆಲ್ಲ ಜೋತಿಷ ಜ್ಞಾನ ವನ್ನು ಅವಲಂಬಿಸಿದ್ದು. ನನ್ನ ಅಭಿಪ್ರಾಯದಲ್ಲಿ—"

"ನಿಮಗೆ ತಿಳಿದಿದ್ದು ಸ್ಪಷ್ಟವಾಗಿ ಹೇಳಿ."

"ಅದೇ – ಹೇಳಿದೆನಲ್ಲ ಜಹಾಪನಾ. ಇನ್ನೂ ಹೆಚ್ಚು ಖಚಿತವಾಗಿ ಹೇಳುವುದಾದರೆ – ನಾಳೆ ಸಂಜೆಯವರೆಗೆ ವೈರಿ ಕೋಟೆಯೊಳಕ್ಕೆ ಹೆಜ್ಜೆ ಹಾಕದಂತೆ ನೋಡಿಕೊಂಡರೆ – ಆಮೇಲೆ ಭಯವಿಲ್ಲ."

"ಹಾಗನ್ನಿ. ಇದು ನಿಜವೋ."

"ನಿಜ, ಖಾವಿಂದ್."

"ಇನ್ನೊಂದು ಸಲ ನೋಡಿ ಹೇಳಿ."

"ಎಷ್ಟು ನೋಡಿದರೂ ಅಷ್ಟೇ. ಶಾಸ್ತ್ರ ಬದಲಾಯಿಸುವಂತಿಲ್ಲವಲ್ಲ."

"ಸರಿ. ಇವತ್ತು ರಾತ್ರಿ ನಾವು ತುಂಬ ಎಚ್ಚರಿಕೆಯಿಂದಿದ್ದರಾಯಿತಲ್ಲ. ನಾಳೆ ಬೆಳಗಿನ ಹೊತ್ತಿನಲ್ಲಿ ಭಯವೇನೂ ಇಲ್ಲ. ಕೋಟೆಯ ಮೇಲೆ ಹಲ್ಲಾ ನಡೆಯುವುದಾದರೆ ಅದು ಕತ್ತಲೆಯ ಹೊತ್ತಿನಲ್ಲೇ – ಸರಿ – ನಾಳೆ ಅಮಾವಾಸ್ಯೆ ಎಂದಿರಲ್ಲ ! ತಿಳಿಯಿತು. ನಾಳೆ ರಾತ್ರೆ ಕೋಟೆಯ ಮೇಲೆ ಹಲ್ಲಾ ಮಾಡ

ಬೇಕೆಂದು ಅವರು ನಿರ್ಧರಿಸಿರುತ್ತಾರೆ. – ಅಮಾವಾಸ್ಯೆ ಕತ್ತಲೆಯಲ್ಲಿ. ಇರಲಿ – ನಾಳೆ ಸಂಜೆಯವರೆಗೆ ಕೋಟೆ ರಕ್ಷಿಸಿಕೊಂಡರೆ ಭಯವಿಲ್ಲ ತಾನೆ ?"

"ಹೌದು ಖಾವಿಂದ್. ಈ ಧಾವಂತವಿಲ್ಲ."

"ಸರಿ. ಕೋಟೆಯ ದಕ್ಷಿಣದ ಭಾಗದ ಬುರುಜಿನಲ್ಲಿ ಹಾಕಿಸಿರುವ ನಮ್ಮ ಡೇರಾದಲ್ಲೇ ಈ ರಾತ್ರಿಯನ್ನೆಲ್ಲಾ ಕಳೆಯುತ್ತೇವೆ. ನಮ್ಮ ಇಡೀ ಸೈನ್ಯ ರಾತ್ರಿಯೆಲ್ಲಾ ರೆಪ್ಪೆಗೆ ರೆಪ್ಪೆ ತಾಗಿಸದಂತೆ ಕಣ್ಣಲ್ಲಿ ಕಣ್ಣಿಟ್ಟು ಕಾದುಕೊಂಡಿರಬೇಕೆಂದು ಆಜ್ಞೆಮಾಡುತ್ತೇವೆ. – ಇಷ್ಟು ವ್ಯವಸ್ಥೆ ಸಾಕು ತಾನೆ."

"ಲಡಾಯಿಯ ವಿಚಾರದಲ್ಲಿ ನಾನು ಖಾವಿಂದರಿಗೆ ಹೇಳುವುದೇನಿದೆ ? ಆದರೆ ಜೋತಿಷಕ್ಕೆ ಸಂಬಂಧಪಟ್ಟ ವಿಚಾರ ಒಂದು ಬಿನ್ನವಿಸಿಕೊಳ್ಳಬಹುದು."

"ಹೇಳಿ, ಜೋಯಿಸರೆ. ಧೈರ್ಯವಾಗಿ ಹೇಳಿ."

"ಗ್ರಹಗತಿಗಳು ಕ್ರೂ ರ ವಾ ಗಿ ರು ವಾ ಗ ಅವುಗಳ ಶಾಂತ್ಯರ್ಥವಾಗಿ ಹೋಮಾದಿಗಳನ್ನು ಮಾಡತಕ್ಕದ್ದು, ಆಚಾರವಂತರಿಗೆ ದಾನಗಳನ್ನು ಕೊಡುವುದು ಇದು ಆರ್ಷೇಯ ಪದ್ಧತಿ. ಈ ವಿಚಾರದಲ್ಲಿ ಖಾವಿಂದರ ಅಭಿಪ್ರಾಯ—"

"ಇನ್ನೇನು ಅಭಿಪ್ರಾಯ ಇದ್ದೀತು. ಒಂದು ಶಾಸ್ತ್ರದ ಒಂದು ಭಾಗ ನಂಬಿ ಇನ್ನೊಂದರಲ್ಲಿ ಅಪನಂಬಿಕೆ ತೋರಿಸುವುದಕ್ಕಾಗುತ್ತದೆಯೆ ಜೋಯಿಸರೆ. ಶಾಸ್ತ್ರ ರೀತ್ಯಾ ಶಾಂತಿ ನಡೆಸುವುದರಿಂದ ಒಳ್ಳೆಯದಾಗುವ ಹಾಗಿದ್ದರೆ, ನಡೆಸೋಣ."

"ನಾಳೆ ಬೆಳಗ್ಗೆ ಮೊದಲನೆಯ ಯಾಮ ಮುಗಿಯುವ ಹೊತ್ತಿಗೆ ಈ ಶಾಂತಿ ಕರ್ಮ ಮುಗಿದರೆ ಒಳ್ಳೆಯದು. ಆಮೇಲೆ ಕಾಲ ಅಷ್ಟು ಪ್ರಶಸ್ತವಾಗಿಲ್ಲ."

"ಆಗಲಿ, ಮೊದಲನೆಯ ಜಾಮ ಮುಗಿಯುವ ಹೊತ್ತಿಗೆ ಈ ಕೆಲಸ ಆಗ ಮಾಡಿಸಿಬಿಡಿ. – ನಾದಿರ್—"

"ಪಾದ್‌ಷಾರವರು ಅಪ್ಪಣೆ ಮಾಡಬೇಕು."

"ನಮ್ಮ ಜೋಯಿಸರು ಕೇಳುವ ಸಾಮಾನುಗಳನ್ನೆಲ್ಲಾ ಕೊಡಿಸು. ಅವರು ಹೇಳುವ ಇತರ ವ್ಯವಸ್ಥೆಗಳನ್ನೆಲ್ಲಾ ಮಾಡು. ಜೋಯಿಸರೆ, ನಾವು ನಾಳೆ ಬೆಳಗೆ ಡೇರೆಯಿಂದ ಮಹಲ್‌ಗೆ ಬಂದು ಸ್ನಾನ ಮುಗಿಸುವ ಹೊತ್ತಿಗೆ ಎಲ್ಲ ಸಿದ್ಧವಾಗಿರಬೇಕು."

"ಅಪ್ಪಣೆ. ಹೋಮಾದಿಗಳನ್ನು ರಂಗನಾಥಸ್ವಾಮಿಯ ದೇವಾಲಯದಲ್ಲಿ ನೆರವೇರಿಸುತ್ತೇನೆ. ದಾನವನ್ನು, ಖಾವಿಂದರು ಸ್ವಹಸ್ತದಿಂದ ಇಲ್ಲೇ – ಮಹಲ್ ನಲ್ಲೇ – ಕೊಡಬಹುದು."

"ಹಾಗೆಯೇ ಆಗಲಿ."

"ಬನ್ನಿ ಜೋಯಿಸರೆ. ಏನೇನು ಸಾಮಾನು ಬೇಕು ಕೊಡಿಸುತ್ತೇನೆ."

ಜೋಯಿಸರು, ಸುಲ್ತಾನರಿಗೆ ಕೈ ಮುಗಿದು ನಾದಿರ್ಷ್‌ನ ಹಿಂದೆ ಹೊರಟರು.

§

ಟಿಪ್ಪೂ ಸುಲ್ತಾನರು ತಮ್ಮ ಡೇರಾದಲ್ಲಿ ಊಟ ಮಾಡುತ್ತಿದ್ದರು. ಒಂದು ತುತ್ತು ಬಾಯಲ್ಲಿತ್ತು. ಇನ್ನೊಂದು ಕೈಯಲ್ಲಿತ್ತು. ಆಗ ಸುದ್ದಿ ಬಂತು—ಕಂಪನಿಯ ಸೇನೆಗಳು ನಟ್ಟನಡುಹಗಲಿನಲ್ಲಿಯೇ ಕೋಟೆಯ ಉತ್ತರಭಾಗದ ಮೇಲೇರಿ ಬಂದು ಲಗ್ಗೆಮಾಡಿ ಮುನ್ನುಗ್ಗುತ್ತಿವೆಯೆಂದೂ ಆ ದಾಳಿಯನ್ನೆದುರಿಸಿ ವೀರಾವೇಶದಿಂದ ಹೋರಾಡುತ್ತಾ ಸೇನಾನಿ ಅಬ್ದುಲ್ ಗಫಾರ್ ಸಾಹೇಬರು ರಣರಂಗದಲ್ಲಿ ಮಡಿದರು ಎಂದೂ!

ಆ ಸುದ್ದಿ ಕಿವಿಯ ಮೇಲೆ ಬಿದ್ದಿದ್ದೇ ತಡ ಸುಲ್ತಾನರು ಬಾಯಲ್ಲಿದ್ದ ತುತ್ತನ್ನು ಕೂಡ ನುಂಗದೆ ಉಗುಳಿ ಊಟ ಬಿಟ್ಟೆದ್ದು ಕೈತೊಳೆದುಕೊಂಡು ಕೋಟೆಯ ಉತ್ತರ ಭಾಗದ ಕಡೆಗೆ ಧಾವಿಸಿದರು.

ಕಣ್ಣುಮುಚ್ಚಿ ಬಿಡುವುದರೊಳಗಾಗಿ ಈ ಸುದ್ದಿ ಶ್ರೀರಂಗಪಟ್ಟಣದ ಮೂಲೆ ಮೂಲೆಗಳಿಗೂ ಹಬ್ಬಿತು. ಜನರಲ್ಲಿ ಹಾಹಾಕಾರವೆದ್ದಿತು. ದಾಸರ ಕಿವಿಯ ಮೇಲೆ ಈ ಸುದ್ದಿ ಬಿದ್ದೊಡನೆಯೇ ಅವರು ಮಹಾಮಾತೃಶ್ರೀಯವರು ವಾಸಿಸುತ್ತಿದ್ದ ಕಾಂತರಾಯರ ಮನೆಗೆ ಓಡಿದರು. ಮಹಾಮಾತೃಶ್ರೀಯವರನ್ನು ಒಡನೆಯೇ ಕಂಡು ಬಿನ್ನವಿಸಿಕೊಂಡರು:

"ಸನ್ನಿಧಾನದವರು ಪರಿವಾರ ಸಮೇತ ಈ ಕ್ಷಣ ಇಲ್ಲಿಂದ ಹೊರಡಬೇಕು."

"ಎಲ್ಲಿಗೆ? ಏನು ಸಮಾಚಾರ ದಾಸರೆ."

"ನಮ್ಮ ಕೆಲಸ ಕೈಗೂಡಿತು ತಾಯಿ. ಕಂಪೆನಿ ಸೈನ್ಯ ಕೋಟೆಯೊಳಕ್ಕೆ ಬಂದಿದೆ. ಅದನ್ನಿದಿರಿಸಲು ಸುಲ್ತಾನ ತಾನೇ ಅಲ್ಲಿಗೆ ಹೋಗಿದ್ದಾನಂತೆ."

"ಈಗತಾನೆ ನಮ್ಮ ಕಿವಿಗೂ ಬಿದ್ದಿತ್ತು ಈ ಸುದ್ದಿ. ಆದರೆ ಫಲಾಫಲ ಹೇಗೋ?"

"ಅದು ನಿರ್ಣಯವಾದ ಹಾಗೆಯೇ ತಾಯಿ. ವಿವರ ಆಮೇಲೆ ಬಿನ್ನವಿಸಿ ಕೊಳ್ಳುತ್ತೇನೆ. ಸನ್ನಿಧಾನದವರು ಮೊದಲು ಇಲ್ಲಿಂದ ಹೊರಡಬೇಕು. ಹೋರಾಟ

ಕೋಟೆಗೋಡೆಯಿಂದ ಪೇಟೆ, ಬೀದಿಗಳಿಗೆ ಇಳಿದರೆ ನಮ್ಮೆಲ್ಲರಿಗೂ ಅಪಾಯ ವಾದೀತು. ಸನ್ನಿಧಾನ ನನ್ನ ಮಾತು ಲಾಲಿಸಬೇಕು, ತಡಮಾಡಕೂಡದು."

"ಕಾವಲಿನವರು ?"

"ಆ ಚಿಂತೆ ನಿಮಗೇಕೆ ತಾಯಿ. ಸಾಮ, ದಾನ ಅವೆರಡಕ್ಕೂ ಬಗ್ಗದಿದ್ದರೆ ಇದ್ದೇ ಇದೆ ದಂಡ. ತಾವು ಒಡನೆಯೇ ಸಿದ್ಧರಾಗಬೇಕು. ವಾಹನಗಳನ್ನು ಕೂಡ ನಿರೀಕ್ಷಿಸುವ ಹಾಗಿಲ್ಲ. ಗುರುತು ಸಿಗದಂತೆ ಮುಖದ ಮೇಲೆ ಮುಸುಕೆಳೆದು ಕೊಂಡು, ನಡೆಯತಕ್ಕದ್ದು."

"ಎಷ್ಟು ದೂರ?"

"ಇಲ್ಲೇ. ಸ್ವಲ್ಪ ದೂರ. ಹೊರಡಬೇಕು ; ತಡವಾಯಿತು."

"ಇನ್ನೊಂದು ಕ್ಷಣದಲ್ಲಿ ಸಿದ್ಧವಾಗುತ್ತೇವೆ" ಎಂದು ಮಹಾಮಾತೃಶ್ರೀ ಯವರು ಹೊರಟುಹೋದರು.

ದಾಸರು ಚಾಮುಂಡಿಯನ್ನು ಕರೆದು "ಕಾವಲುಗಾರರು ಏನು ಮಾಡು ತ್ತಿದ್ದಾರೆಂಬುದನ್ನು ನೋಡಿಕೊಂಡು ಬಾ" ಎಂದು ಹೇಳಿದರು. ಅವಳು ನೋಡಿ ಕೊಂಡು ಬಂದು "ಒಬ್ಬನೇ ಒಬ್ಬ ಇದ್ದಾನೆ. ಅವನೂ ತುಂಬ ಗಾಬರಿ ಯಾಗಿದ್ದಾನೆ" ಎಂದಳು. ದಾಸರು ತಾವೇ ತಲೆಬಾಗಿಲಿಗೆ ಹೋಗಿ ಅವನನ್ನು ಕುರಿತು :

"ಯುದ್ಧದ ಸುದ್ದಿ ಗೊತ್ತಿರಬೇಕಲ್ಲ ನಿನಗೆ."

"ಕಂಪನಿ ಸೈನ್ಯ ಕೋಟೆ ಒಡೆದುಕೊಂಡು ಊರೊಳಕ್ಕೆ ನುಗ್ಗುತ್ತಾಯಿದೆ ಯಂತೆ ಬುದ್ಧಿ."

"ನಿಜ. ಅಂದಮೇಲೆ ನಾವು ಇಲ್ಲಿರುವುದು ಹಿತವಲ್ಲ. ಹೆಚ್ಚು ರಕ್ಷಣೆ ಯಿರುವ ಸ್ಥಳಕ್ಕೆ ಹೋಗಬೇಡವೆ ?"

"ಹೋಗಬೇಕು – ಆದರೆ—"

"ಅವರಿವರಿಂದ ಆಜ್ಞೆ ಬರಬೇಕು ಎಂದು ಕಾದು ಕೂರುವಂಥಾ ಕಾಲವಲ್ಲ ಇದು. ಈಗ ನಮ್ಮ ನಮ್ಮ ಸ್ವಂತ ಬುದ್ಧಿ ಉಪಯೋಗಿಸಿ ಅಪಾಯಕ್ಕೆ ಸಿಕ್ಕದಂತೆ ನೋಡಿಕೊಳ್ಳಬೇಕು. ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯಸ್ಸು ಎಂದು ದೊಡ್ಡವರು ಹೇಳಿರುವ ಮಾತು ನೆನಪಿನಲ್ಲಿಟ್ಟುಕೊಂಡು ನಡೆಯಬೇಕು."

"ನಿಜ, ಅಣ್ಣಿ. ಅಲ್ಲಿ ನಮ್ಮ ಹಟ್ಟಿ ಕಡೆ ಏನಾಗಿದೆಯೋ ?"

"ಹೋಗಿ ನೋಡಿಕೊಂಡು ಬಾ."

ಕಾವಲುಗಾರ ಆ ಸಲಹೆಯನ್ನೊಪ್ಪಿಕೊಳ್ಳಲು ಹಿಂದುಮುಂದು ನೋಡಿದ. ಅದನ್ನು ತಿಳಿದು ದಾಸರು ಹೇಳಿದರು :

"ಯಾವ ವಿಧವಾದ ಅನುಮಾನವನ್ನೂ ಇಟ್ಟುಕೊಳ್ಳಬೇಡ. ಯಾರೂ ಇಲ್ಲಿಂದ ಓಡಿಹೋಗುವುದಿಲ್ಲ. ಈಗ ಈ ಮನೆ ಬಿಟ್ಟರೂ ಈ ಊರು ಬಿಟ್ಟು ಹೋಗುವಂತಿಲ್ಲವಲ್ಲ."

"ಅದೀತಾ ಬುದ್ಧಿ."

"ನನ್ನ ಮಾತು ಕೇಳು. ಇಲ್ಲಿರುವುದರ ಬದಲು ರಂಗನಾಥಸ್ವಾಮಿಯ ದೇವಸ್ಥಾನದಲ್ಲಿರೋಣ. ಎಷ್ಟೇ ಆದರೂ ಇಲ್ಲಿಗಿಂತ ಅಲ್ಲಿ ರಕ್ಷಣೆ ಹೆಚ್ಚು."

"ಅದೇನೋ ನಿಜ."

"ಸನ್ನಿಧಾನದವರೂ ಅಲ್ಲಿಗೆ ಬರುತ್ತಾರೆ. ಅಲ್ಲಿ ಅವರನ್ನು ಬಿಟ್ಟು, ನಿನ್ನ ಮನೆಗೆ ಹೋಗಿ ಅವರನ್ನೂ ಅಲ್ಲಿಗೆ ಕರೆದುಕೊಂಡು ಬಂದುಬಿಡು. ಅವರೂ ನಿನ್ನ ಕಣ್ಣೆದುರಿಗಿರಲಿ. ಇನ್ನೊಬ್ಬ ಕಾವಲುಗಾರನೂ ಹಾಗೆ ಮಾಡಲಿ."

"ಅದೇ ಒಳ್ಳೆಯದು ಎಂತಿರಾ."

"ಅದು ಬಿಟ್ಟು ಬೇರೆ ಮಾರ್ಗವಿಲ್ಲ" ಎಂದು ದಾಸರು ಮನೆಯ ಒಳಕ್ಕೆ ಹೋದರು. ಸನ್ನಿಧಾನದವರು ಪರಿವಾರ ಸಮೇತ ಹೊರಡಲು ಸಿದ್ಧರಾಗಿರುವುದನ್ನು ತಿಳಿದು ಹೊರಗೆ ಬಂದು ಕಾವಲುಗಾರನಿಗೆ :

"ಸನ್ನಿಧಾನ ಹೊರಟಿದ್ದಾರೆ. ನಡಿ ಮುಂದೆ" ಎಂದರು. ಅವನು ಮರು ಮಾತಿಲ್ಲದೆ ತನ್ನ ಕೋವಿಯನ್ನೆತ್ತಿಕೊಂಡು ಹೊರಟ. ಸನ್ನಿಧಾನದವರು ಪರಿವಾರ ಸಮೇತರಾಗಿ ಶ್ರೀರಂಗನಾಥನ ಸನ್ನಿಧಿಗೆ ಹೊರಟರು.

§

"ಸನ್ನಿಧಾನದವರು ಇಲ್ಲಿ ವಿಶ್ರಮಿಸಿಕೊಳ್ಳಬೇಕು. ಸನ್ನಿಧಾನದ ಪರಿವಾರ ರಾಜಮನೆತನಕ್ಕೆ ಆಪ್ತರಾದ ಕೆಲವರು – ಇಷ್ಟೇ ಮಂದಿ ಗುಡಿಯಲ್ಲಿರುವುದು. ಇನ್ನು ಕೆಲವು ಮಂದಿ ಪ್ರಾಕಾರದ ಮಂಟಪಗಳಲ್ಲಿರುತ್ತಾರೆ. ಇಬ್ಬರು ಕಾವಲುಗಾರರೂ ಸಂಸಾರ ಸಮೇತ ಇಲ್ಲಿಗೇ ಬಂದಿದ್ದಾರೆ. ಅವರು ಮಹಾದ್ವಾರವನ್ನು ರಕ್ಷಿಸುವಂತೆ ವ್ಯವಸ್ಥೆ ಮಾಡಿದ್ದೇನೆ. ಸನ್ನಿಧಾನದ ಊಟೋಪಚಾರಗಳನ್ನು ದೇವಾಲಯದ ಅರ್ಚಕರು ನೋಡಿಕೊಳ್ಳುತ್ತಾರೆ. ಅವರ ಸಂಸಾರ ಕೂಡ ಪಾಕ ಶಾಲೆಯ ಪಕ್ಕದ ಮಂಟಪಕ್ಕೆ ಬಂದಿದೆ. ಈ ಪ್ರಾಕಾರದಲ್ಲಿ ಇನ್ನು ಯಾರೂ ಇಲ್ಲ."

"ನಿಂತುಕೊಂಡೇ ಮಾತನಾಡುತ್ತಿದ್ದೀರಲ್ಲ. ಕುಳಿತುಕೊಳ್ಳಿ ದಾಸರೆ.– ಈ ವ್ಯವಸ್ಥೆಯನ್ನೆಲ್ಲಾ ನೋಡಿದರೆ ನನಗೇಕೋ ಅನುಮಾನ ಬರುತ್ತಿದೆ.—"

"ತಾಯಿ, ನನ್ನಲ್ಲೂ ಅನುಮಾನವೇ!"

"ಹಾಗಲ್ಲ. ನೀವು ನಮಗೆ ಸುಳಿವೇ ಕೊಡದೆ ತುಂಬ ಹಿಂದಿನಿಂದಲೇ ಈ ವ್ಯವಸ್ಥೆಯನ್ನು ನಿರ್ಣಯಿಸಿದ್ದಿರಿ ಎಂತ ಅನುಮಾನ."

"ನೀವು ಹೇಳಿದ್ದು ನಿಜ ತಾಯಿ. ಮುತ್ತಿಗೆ ನಡೆದಾಗ ಕಂಪನಿಯ ಸೈನ್ಯಕ್ಕೆ ವಿಜಯ ದೊರೆತ ಕೋಲಾಹಲದಲ್ಲಿ ತಮಗೂ ತಮ್ಮ ಪರಿವಾರದವರಿಗೂ ಯಾವ ವಿಧವಾದ ಅಪಾಯವೂ ಆಗದಂತೆ ನೋಡಿಕೊಳ್ಳಬೇಕೆಂದು ರಾಯರು ನನಗೆ ಆಜ್ಞೆ ಮಾಡಿದರು. ನಾನು ಹೇಳಿದೆ: 'ಇಂಥ ವಿಚಾರದಲ್ಲಿ ನಾನು ಅನನುಭವಸ್ಥ. ನೀವು ಪಳಗಿದವರು. ಈ ವಿಚಾರವಾಗಿ ನೀವು ಆಲೋಚನೆ ಮಾಡಿ, ಹೀಗೆ ಹೀಗೆ ಮಾಡಬೇಕೆಂದು ಹೇಳಿ. ಅದರಂತೆ ನಡೆದುಕೊಳ್ಳುತ್ತೇನೆ' ಎಂತ. ರಾಯರ ಮನಸ್ಸಿಗೂ ಪರಿಹಾರ ಸರಿಯಾಗಿ ಹೊಳೆಯಲಿಲ್ಲವೋ ಏನೋ?– ಅಂತು ಇಂಥ ವಿಚಾರಗಳಲ್ಲಿ ಸ್ವಂತ ಅನುಭವವುಳ್ಳ ವೆಲ್ಲೆಸ್ಲಿ ಸಾಹೇಬರರೊಡನೆ ಮಾತನಾಡಿದರೆಂದು ತೋರುತ್ತದೆ. ಇದೆಲ್ಲ ಅವರ ಸೂಚನೆ."

"ದಾಸರೆ, ನಾವವರಿಗೆ ಎಷ್ಟು ಋಣಿಗಳಾಗಿದ್ದರೂ ಸಾಲದು. ನಮ್ಮಿಂದ ಅವರಿಗೆ ಕುರುಡು ಕಾಸಿನ ಪ್ರಯೋಜನವೂ ಇಲ್ಲ! ಆದರೂ ನಮ್ಮ ಕಷ್ಟದ ಸುದ್ದಿ ಕೇಳಿಯೇ ಇಷ್ಟೊಂದು ಮರುಗಿ—"

"ಅವರ ಸ್ವಭಾವವೇ ಹೀಗೆ: ಕಷ್ಟದಲ್ಲಿರುವವರನ್ನು ಕಂಡರೆ ಮರುಗಿ ಸಹಾಯ ಮಾಡುವುದು. ದುಷ್ಟರನ್ನು ಕಂಡರೆ ಪ್ರಯತ್ನಪಟ್ಟಾದರೂ ಅವರನ್ನು ನಾಶಮಾಡುವುದು. ಇದೇ ಬುದ್ಧಿ. ಇಷ್ಟಾಯಿತಲ್ಲ. ಲಂಚ ತಿನ್ನದೆಯಿರುವ ಇಂಗ್ಲಿಷ್ ಸರದಾರ ಚನ್ನಪುರಿಯಲ್ಲಿ ಯಾವನೂ ಇಲ್ಲ ಅನ್ನಬಹುದು. ರಾಯರ ಕೈಯಿಂದ ಲಂಚ ತಿನ್ನದೆಯಿರುವವನು ಯಾವನಿದ್ದಾನೆ ಅಲ್ಲಿ? ಆದರೆ ವೆಲ್ಲೆಸ್ಲಿ ಸಾಹೇಬರ ವಿಚಾರದಲ್ಲಿ ಮಾತ್ರ ಆ ಉಸಿರೆತ್ತುವಹಾಗಿಲ್ಲ ತಾಯಿ. ವಾಸ್ತವವಾಗಿ ರಾಯರು ಇತರರಿಗೆ ಲಂಚ ಕೊಡತಾರೆ ಅಂತ ಆವರಿಗೆ ರಾಯರ ಮೇಲೆ ಕೋಪ!"

"ರಂಗನಾಥನ ದಯೆಯಿಂದ ಆತ ನೂರು ವರ್ಷ ಮಹಾರಾಜನ ಹಾಗೆ ಬಾಳಲಿ.– ಆ್ಞ!—

"ಒಂದು ಮಾತು ಹೇಳುವುದು ಮರೆತಿದ್ದೆ ದಾಸರೆ. ನಂಜರಾಜಯ್ಯನವರು ಅವರ ಸಂಸಾರ ಇಲ್ಲಿಗೇ ಬರಲಿ. ಅವರೂ ನಮ್ಮೊಡನೆ ಇರಬೇಕಾದವರೇ."

"ಅದಕ್ಕೂ ವ್ಯವಸ್ಥೆ ಮಾಡುತ್ತೇನೆ ತಾಯಿ."

"ದಾಸರೆ, ನೋಡಿ ಅದುಯಾರೋ ಬಂದಹಾಗಿದೆ."

"ನಮ್ಮ ಆಪ್ತರೇ. ಸನ್ನಿಧಾನದ ದರ್ಶನಕ್ಕಾಗಿ ಬಂದಿದ್ದಾರೆ. —ದಯಮಾಡಿಸಬೇಕು."

"ಅವರು ಯಾರೋ ? ನೋಡಿದ ನೆನಪಿಲ್ಲ ದಾಸರೆ."

"ಸನ್ನಿಧಾನಕ್ಕೆ ಪರಿಚಯ ಮಾಡಿಕೊಡಬೇಕೆಂದೇ ಅವರನ್ನಿಲ್ಲಿಗೆ ಕರೆಸಿದ್ದೇನೆ."

"ಸಂತೋಷ."

ದೇವಾಲಯದ ಒಳಹೊಕ್ಕ ವ್ಯಕ್ತಿ ನೇರವಾಗಿ ದಾಸರ ಹತ್ತಿರ ಬಂದು ನಿಂತು, ಅವರ ಸಂಜ್ಞೆಯಂತೆ, ಮಹಾಮಾತೃಶ್ರೀಯವರಿಗೆ ನಮಸ್ಕರಿಸಿದ. ದಾಸರು ಹೇಳಿದರು:

"ಇವರು ಜೋತಿಷದಲ್ಲಿ ಘನವಿದ್ವಾಂಸರು. ಸನ್ನಿಧಾನದ ಆಶ್ರಯಬೇಡಿ ಬಂದಿದ್ದಾರೆ."

"ನಮ್ಮ ಆಶ್ರಯವೇ ?"

"ಹೌದು ತಾಯಿ."

"ತಮ್ಮ ನಾಮಧೇಯ ?"

"ಕರೂರು ಶ್ರೀನಿವಾಸಾಚಾರ್ಯ."

"ಈಗೊಂದು ಹತ್ತು ಹದಿನೈದು ವರ್ಷಗಳ ಹಿಂದೆ, ಕರೂರು ನಮ್ಮ ವಶಕ್ಕೆ ಬಂದಾಗ ಅದು ರಾಯರ ಆಡಳಿತದಲ್ಲಿತ್ತಲ್ಲ ತಾಯಿ ಕೆಲವು ಕಾಲ."

"ಹೌದು."

"ಆಗ, ಆಚಾರ್ಯರು ರಾಯರ ಕಣ್ಣಿಗೆ ಬಿದ್ದರಂತೆ."

"ರಾಯರ ಮನೆಯಲ್ಲಿ ದೇವತಾರ್ಚನೆ ಮಾಡುತ್ತಿದ್ದೆ ತಾಯಿ."

"ಸರಿ. ಸರಿ."

"ಇವರ ನಡತೆ ರಾಯರಿಗೆ ಮೆಚ್ಚಿತ್ತು. ಜೋತಿಷ ಕಲಿಯಬೇಕೆಂಬ ಹುಚ್ಚು ಇವರಿಗೆ ಹತ್ತಿತು. ಸರಿ, ರಾಯರ ಹಿಂದೆ ಹೊರಟರು. ದಕ್ಷಿಣದಲ್ಲೆಲ್ಲಾ ತಿರುಗಿದರು. ಜೋತಿಷ, ಸಾಮುದ್ರಿಕ ಚೆನ್ನಾಗಿ ಕಲಿತರು. ರಾಯರು ಇವರ ವಿದ್ವತ್ತನ್ನು ಮೆಚ್ಚಿ ಜೊತೆಯಲ್ಲಿಯೇ ಉಳಿಸಿಕೊಂಡರು."

“ಹಾಗೇನು ? – ಈಗ ಇಲ್ಲಿಗೆ ಬಂದಿದ್ದು.”

“ಈಗ್ಗೆ ಏಳೆಂಟು ವರ್ಷಗಳಿಂದ ಇಲ್ಲೇ ಇದ್ದೇನೆ ತಾಯಿ.”

“ರಾಯರ ಕಡೆಯುವರಾದರೂ, ಏಳೆಂಟು ವರ್ಷಗಳಿಂದ ಇಲ್ಲೇ ಇದ್ದರೂ ಇವರು ನಮ್ಮ ಕಣ್ಣಿಗೆ ಕೂಡ ಬೀಳಲಿಲ್ಲ ನೋಡಿ!”

“ಅದು ಅವರ ತಪ್ಪಲ್ಲ.”

“ರಾಯರ ಆಜ್ಞೆಯೋ ?”

“ಹಾಗೆನ್ನಬಹುದು. ಸನ್ನಿಧಾನ ಇವರನ್ನು ಮುಖತಃ ಕಾಣದಿದ್ದರೂ ಇವರ ಪರಿಚಯ—”

“ಯಾರು – ಹಾಗಾದರೆ ?”

“ನಾವೊಂದು ದಿವಸ – ನಾನು ತಂಜಾವೂರಿನಿಂದ ಹಿಂದಿರುಗಿದಾಗ – ಅರಮನೆಯಲ್ಲಿ – ನವರಾತ್ರಿ ಏಕಾದಶಿ—”

“ಓ !”– ಮಾತೃಶ್ರೀಯವರು ತಮ್ಮೆದುರಿಗಿದ್ದ ಆಗಂತುಕನನ್ನು ದಿಟ್ಟಿಸಿ ನೋಡಿದರು. ಅವರ ಮನಸ್ಸಿನಲ್ಲಿ ಆಲೋಚನೆಗಳ ಕೋಲಾಹಲ ನಡೆದಿದೆ ಯೆಂಬುದು ಅವರ ಮುಖದ ಮೇಲೆ ಕಾಣುತ್ತಿತ್ತು.

“ಅವರೇ ತಾಯಿ – ಸುಲ್ತಾನರ ಸಮೀಪದಲ್ಲಿದ್ದು—”

“ಸುಲ್ತಾನ್ ಜೋಯಿಸ !—”

“ಹೌದು ತಾಯಿ. ಸುಲ್ತಾನರ ಸಮೀಪದಲ್ಲಿದ್ದು ನಮ್ಮ ಹಿತರಕ್ಷಣೆಗಾಗಿ ತುಂಬ ಶ್ರಮಿಸಿದ್ದಾರೆ!”

“ಇವರೇ ಏನು ?”

“ನಾನೇ. ನನ್ನಿಂದ ಏನು ತಪ್ಪಾಗಿದ್ದರೂ ಸನ್ನಿಧಾನದವರು ಕ್ಷಮಿಸಿ, ಹೊಟ್ಟೆಯಲ್ಲಿ ಹಾಕಿಕೊಂಡು ನನ್ನನ್ನು ಕಾಪಾಡಬೇಕು.”

“ನಾನೆಲ್ಲಾ ವಿವರವಾಗಿ ಬಿನ್ನವಿಸಿಕೊಳ್ಳುತ್ತೇನೆ ತಾಯಿ. ಆಚಾರ್ಯರು ತುಂಬ ಚೆನ್ನಾಗಿ ನಮ್ಮ ಹಿತರಕ್ಷಣೆ ಮಾಡಿದ್ದಾರೆ. ಇಂದಿನ ಸಂದರ್ಭದಲ್ಲಿ ಅವರು ಬೇರೆಯೆಡೆಯಲ್ಲಿರುವುದು ಸುರಕ್ಷಿತವಲ್ಲವೆಂದು ಇಲ್ಲಿಗೆ ಕರೆಸಿಕೊಂಡಿದ್ದಾಯಿತು.”

“ಇದೂ ರಾಯರ ಸೂಚನೆಯೇ ಇದ್ದೀತು ?”

“ಹೌದು ತಾಯಿ—”

“ಇವರ ಸಂಸಾರ—”

" ಇನ್ನುಮೇಲೆ ಇವರ ತಲೆಗೆ ಕಟ್ಟಬೇಕು – ಇನ್ನು ಸ್ವಲ್ಪ ಕೆಲಸ ಉಳಿದಿದೆ. ಅದನ್ನು ಮುಗಿಸಿ ಬರುತ್ತೇನೆ ತಾಯಿ."

" ಇನ್ನೆಲ್ಲಿಗಾದರೂ ಹೋಗಬೇಕಾಗಿದೆಯೇನು ?"

" ಅಂಥದೇನೂ ಅಲ್ಲ. ಒಂದು ಉದ್ದನೆಯ ಬಿದುರರಿನ ಗಳು ಬೇಕೆಂದು ಅರ್ಚಕರನ್ನು ಕೇಳಿಕೊಂಡಿದ್ದೆ."

" ಗಳು ?"

" ಎಲ್ಲರಿಗೂ ಕಾಣುವಂತೆ ಇಲ್ಲೊಂದು ಬಿಳಿ ಬಾವುಟ ಹಾರಿಸಬೇಕಾಗಿದೆ."

" ಬಿಳಿ ಬಾವುಟ ?"

" ಇದು ಯುದ್ಧಬಾಹಿರವಾದ ಸ್ಥಾನ ಎಂದು ತೋರಿಸುವುದಕ್ಕೆ ತಾಯಿ. ನಾವು ಬೀಡು ಮಾಡಿರುವ ಕಡೆ ಈ ಬಾವುಟ ಹಾಕಬೇಕೆಂದೂ ಅದಿದ್ದರೆ ಕಂಪನಿ ಸೈನಿಕರಿಂದ – ಅವರು ಈ ಕಡೆ ನುಗ್ಗಿ ಬಂದಾಗ – ನಮಗೆ ತೊಂದರೆಯಾಗುವುದಿಲ್ಲವೆಂದೂ ವೆಲ್ಲೆಸ್ಲಿ ಸಾಹೇಬರು—"

" ಸರಿ. ಸರಿ, ತಿಳಿಯಿತು."

" ಜೊತೆಗೊಂದು ರಕ್ಷಣಾ ಪತ್ರವನ್ನೂ ಬರೆಸಿಕೊಟ್ಟಿದ್ದಾರೆ."

" ಒಳ್ಳೆಯದು ನೀವು ಹೋಗಿಬನ್ನಿ."

" ಆಚಾರ್ಯರೇ, ಧ್ವಜಾರೋಹಣಕ್ಕೆ ಮುಹೂರ್ತ ಸರಿಯಾಗಿದೆಯೋ ?"

ಆಚಾರ್ಯರು ತಮ್ಮ ಕಕ್ಷಪಾಲಿಕೆಯಿಂದ ಮರಳು ಗಡಿಯಾರವೊಂದನ್ನು ತೆಗೆದು ತಮ್ಮ ಮುಂದಿಟ್ಟುಕೊಂಡು ನೋಡುತ್ತಾ :

" ದಾಸರೆ, ಗಳುವಿಗೆ ಬಿಳಿ ಬಾವುಟ ಕಟ್ಟಿಸಿ. ನಾನು ಕೂಗಿ ಹೇಳಿದಾಗ ಬಾವುಟ ಮೇಲೆತ್ತಿಬಿಡಿ. ಹೊರಡಿ ಹೊರಡಿ....ಏಟು ಬಿದ್ದಿದೆ – – – – –

" ಅವತಾರ ಮುಗಿಯಿತು ದಾಸರೆ. ಬಾವುಟ ಏರಿಸಿಬಿಡಿ."

" ಏನೆಂದಿರಿ ಜೋಯಿಸರೆ."

" ಸುಲ್ತಾನನ ಅವತಾರ ಮುಗಿಯಿತು ತಾಯಿ."

" ಆ್ಞ."

" ನನ್ನ ಲೆಕ್ಕಾಚಾರದಂತೆ ಹೀನವ್ಯಕ್ತಿಯೊಬ್ಬನ ಅಸ್ತ್ರಘಾತದಿಂದ ಈಗತಾನೆ ಅವನ ಅವತಾರ ಮುಗಿಯಿತು. ತಾಯಿ."

" ಅಬ್ಬಾ ! ಮುಗಿಯಿತೆ ! – ರಂಗನಾಥನ ಅನುಗ್ರಹ."

"ಸನ್ನಿಧಾನದ ಮೇಲೆ, ಕುಮಾರರ ಮೇಲೆ ರಂಗನಾಥನ ಅನುಗ್ರಹ ಸಂಪೂರ್ಣವಾಗಿದೆ. ಇನ್ನು ಯಾವ ಚಿಂತೆಗೂ ಕಾರಣವಿಲ್ಲ. ಯವನ ರಾಹು ಗ್ರಸ್ಥವಾಗಿದ್ದ ಯದುವಂಶಚಂದ್ರನಿಗೆ ಇದೀಗ ಮೋಕ್ಷವಾಯಿತು. ಇನ್ನು ನಿಶ್ಚಿಂತೆಯಿಂದಿರಬಹುದು ತಾಯಿ."

§

"ಪೂರ್ಣಯ್ಯನವರೇ ನೀವು ತುಂಬ ಅನುಭವಶಾಲಿಗಳು. ಆಡಳಿತ, ಹೋರಾಟ ಎರಡರಲ್ಲೂ ಪಳಗಿದವರು. ಈ ಸಂದರ್ಭದಲ್ಲಿ ತುಂಬ ಮುಂಜಾಗರೂಕತೆಯಿಂದ ವರ್ತಿಸಿದ್ದೀರಿ. ಅದರಿಂದ ನಮಗೆ ಸಹಾಯವೂ ಆಗಿದೆ. ಅದನ್ನೆಲ್ಲಾ ನಾನು ನೆನಪಿನಲ್ಲಿಟ್ಟಿರುತ್ತೇನೆ. ಈಗ ನನಗೆ ಖಚಿತವಾಗಿ ತಿಳಿಸಿಬಿಡಿ. ಇನ್ನು ಮುಂದೆ ಯಾವ ರೀತಿ ವ್ಯವಸ್ಥೆ ಮಾಡಬೇಕು. ಯಾವ ಅಂಶವನ್ನೂ ಮರೆಮಾಚಬೇಕಿಲ್ಲ. ನೀವು ಹೇಳಿದ್ದನ್ನೆಲ್ಲಾ ನಾನು ಜಾಗರೂಕತೆಯಿಂದ ಗಮನಿಸುತ್ತೇನೆ."

"ಆಗಲಿ ಹ್ಯಾರಿಸ್ ಸಾಹೇಬರೆ. ನನ್ನ ಅಭಿಪ್ರಾಯ ಇಷ್ಟೆಯೆ : ನಾವು ಗಮನಿಸಬೇಕಾದ ಮೊದಲನೆಯ ಪ್ರಶ್ನೆ : ಟಿಪ್ಪೂ ಸುಲ್ತಾನರ ಮರಣದಿಂದ ಅವರ ಸರ್ಕಾರ ಮುಗಿಯಿತು. ಯುದ್ಧದಲ್ಲಿ ಗೆದ್ದ ನೀವು ಇಲ್ಲಿ ಒಂದು ಸರ್ಕಾರದ ವ್ಯವಸ್ಥೆ ಮಾಡಬೇಕು."

"ಸರಿ, ಅದು ಮೊದಲನೆಯ ಪ್ರಶ್ನೆ."

"ಒಂದು – ಕಂಪನಿ ಸರ್ಕಾರವೇ ಇಲ್ಲಿಯ ಆಡಳಿತ ವಹಿಸಿಕೊಳ್ಳಬಹುದು."

"ಆಯಿತು. ಹಾಗಾದರೆ ಯಾವ ಚಿಂತೆಯೂ ಇಲ್ಲ. ಒಂದು ವೇಳೆ ಹಾಗಾಗದಿದ್ದರೆ ?—"

"ಗೊತ್ತೇಯಿದೆಯಲ್ಲ – ಟಿಪ್ಪೂ ಸುಲ್ತಾನರ ಮಕ್ಕಳಲ್ಲಿ ಯಾರಿಗಾದರೂ ಪಟ್ಟಕಟ್ಟಬಹುದು."

"ಸುಲ್ತಾನರ ಮಕ್ಕಳಲ್ಲಿ ಯಾರನ್ನು ಆರಿಸಬಹುದು ?"

"ವಯಸ್ಸಿನಿಂದ ದೊಡ್ಡವ; ತಕ್ಕಮಟ್ಟಿನ ಅನುಭವವೂ ಇದೆ. ಒಳ್ಳೆ ಹುಡುಗ – ಫತ್ತೆ ಹೈದರ್‌ನನ್ನು ಆರಿಸಬಹುದೆಂದು ತೋರುತ್ತದೆ."

"ಆಯಿತು. ಯಾವ ಷರತ್ತಿನ ಮೇಲೆ ?"

"ವರ್ಷಕ್ಕೆಷ್ಟು ಪೊಗದಿ ಕೊಡಬೇಕು ಎಂದು ನಿರ್ಣಯಿಸಬಹುದು."

"ಅದು ಹಣದ ವಿಚಾರವಾಯಿತು. ಅದಿರಲಿ. ರಾಜ್ಯದ ರಕ್ಷಣೆಯ ವಿಚಾರ ?"

"ರಾಜ್ಯದ ರಕ್ಷಣೆಗಾಗಿ ಎಲ್ಲೆಲ್ಲಿ ತಮ್ಮ ಸೈನ್ಯಗಳಿರುವುದು ಆವಶ್ಯಕವೆಂದು ಕಂಪನಿ ಬಹಾದ್ದೂರ್ ಸರ್ಕಾರಕ್ಕೆ ತೋರುತ್ತದೆಯೋ ಅಂಥಾ ಸ್ಥಳಗಳಲ್ಲೆಲ್ಲಾ ಕಂಪನಿ ಠಾಣೆಗಳನ್ನಿಡಬಹುದು."

"ಆಯಿತು. ಫತ್ತೆ ಹೈದರ್ ಎಂದರೆ, ನೀವು ಕರಿಘಟ್ಟದಿಂದ ನಮ್ಮಲ್ಲಿಗೆ ಕರೆದುಕೊಂಡು ಬಂದಿರಲ್ಲ—"

"ಅವನೇ, ಆ ದೊಡ್ಡ ಹುಡುಗ."

"ಗೊತ್ತಾಯಿತು. ಆದರೆ ಸ್ವತಂತ್ರವಾಗಿ ಆಡಳಿತ ನಡೆಸುವ ಶಕ್ತಿ ಅವನಿಗಿದೆಯೆ ಪೂರ್ಣಯ್ಯನವರೆ."

"ಇನ್ನೂ ಸ್ವಲ್ಪ ಅನುಭವಬೇಕು. ಕಂಪನಿ ಬಹಾದ್ದೂರ್ ಸರ್ಕಾರಕ್ಕೆ ನನ್ನಲ್ಲಿ ನಂಬಿಕೆಯಿದ್ದರೆ ನಾನು ಆಡಳಿತದ ಜವಾಬ್ದಾರಿ ವಹಿಸುತ್ತೇನೆ. ನನ್ನನ್ನು ದಿವಾನನನ್ನಾಗಿ ಮಾಡಿ, ಹಣಕಾಸಿನ ವ್ಯವಹಾರ ನನಗೆ ವಹಿಸಿದರೆ, ಯಾವ ವಿಧವಾದ ತಕರಾರಿಗೂ ಅವಕಾಶವಿಲ್ಲದಂತೆ ನೋಡಿಕೊಳ್ಳುತ್ತೇನೆ."

"ತಮ್ಮ ಆಡಳಿತಾನುಭವದ ವಿಚಾರದಲ್ಲಿ ನನಗೆ ಯಾವ ಅನುಮಾನವೂ ಇಲ್ಲ ಪೂರ್ಣಯ್ಯನವರೆ. ಆದರೆ– ರಾಜ್ಯದ ಹಕ್ಕುದಾರಿ ವ್ಯವಸ್ಥೆಯಲ್ಲಿ ಬೇರೆ ಇನ್ನಾವುದಾದರೂ—"

"ಬೇರೆಯಿನ್ನಾವ ವ್ಯವಸ್ಥೆಯೂ ಸರಿಹೋಗುವುದಿಲ್ಲ ಹ್ಯಾರಿಸ್ ಸಾಹೇಬರೇ."

"ನಿಮ್ಮ ಅಭಿಪ್ರಾಯ ಸರಿಯಿದ್ದೀತು. – ಆದರೆ – ನಾವು ಇನ್ನೊಂದು ಅಂಶವನ್ನೂ ಗಮನಿಸಬೇಕು ನೋಡಿ. ನಿಮಗೂ ಗೊತ್ತಿರಬಹುದಲ್ಲ. ಹಿಂದಿನ ರಾಜವಂಶದ ಹಕ್ಕು. ರಾಣೀ ಸಾಹಿಬಾರವರು ತಿರುಮಲರಾವ್ ಮೂಲಕ ಬಹಳ ಹಿಂದಿನಿಂದ ಈ ವಿಚಾರವಾಗಿ ಕಂಪನಿ ಸರ್ಕಾರದೊಡನೆ ವ್ಯವಹರಿಸಿದ್ದಾರೆ."

"ಇದ್ದೀತು ಹ್ಯಾರಿಸ್ ಸಾಹೇಬರೆ: ಆದರೆ ನಾವು ಮಾಡುವ ವ್ಯವಸ್ಥೆ ಸರಿಯಾಗಿ ನಡೆಯಬೇಕಲ್ಲ. ಸುಲ್ತಾನರು ಸತ್ತರು. ಆದರೆ ಅವರ ಸೈನಿಕರೆಲ್ಲಾ ಸತ್ತರೆ ? ಸುಲ್ತಾನರ ಮಕ್ಕಳು ಪಟ್ಟಕ್ಕೆ ಬಂದರೆ ಆಗ ಅದರ ಮಾತು ಬೇರೆ. ಹಾಗಲ್ಲದಿದ್ದರೆ ಈ ಸೈನಿಕರು ಶಾಂತವಾಗಿರುತ್ತಾರೆಯೆ ? – ಅವರನ್ನು ಶಾಂತವಾಗಿ

ಡುವುದು ಎಷ್ಟು ಶ್ರಮಸಾಧ್ಯವಾದ ಕೆಲಸ ಅನ್ನುವ ವಿಚಾರ ಸೇನಾಪತಿಗಳಾದ ತಮಗೆ ನಾನು ಹೇಳಬೇಕಾಗಿಲ್ಲ."

"ನಿಮ್ಮ ಅಭಿಪ್ರಾಯ ತುಂಬ ಗಮನಾರ್ಹವಾದದ್ದು. ಏನೇ ಆಗಲಿ ರಾಜ್ಯದಲ್ಲಿ ಅಶಾಂತಿ, ಅವ್ಯವಸ್ಥೆಗೆ ಎಡೆ ಕೊಡಕೂಡದು. ನಾನದನ್ನು ಒಪ್ಪುತ್ತೇನೆ. ಅಂದಹಾಗೆ – ಸುಲ್ತಾನರ ಸೈನ್ಯದ ಸಮಸ್ಯೆ – ದೊಡ್ಡ ಸಮಸ್ಯೆಯೇ. ಅದನ್ನು ಹೇಗೆ ಬಗೆಹರಿಸೋಣ."

"ಖಾವಿಂದರು ಅಪ್ಪಣೆ ಕೊಡಿಸಬೇಕು."

"– ಹೀಗೆ ಮಾಡೋಣವೆ ಪೂರ್ಣಯ್ಯ ? ಫತ್ತೆ ಹೈದರ್, ಸುಲ್ತಾನರ ಅರಮನೆಗೆ ಹಿಂದಿರುಗಲಿ ; ಸುಲ್ತಾನರ ಸೈನಿಕರು ಶಾಂತವಾಗಿ ವರ್ತಿಸುವಂತೆ, ಇಲ್ಲಿ ಕೆಲಸವಿಲ್ಲದವರು ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಮುಂದಿನ ಆಜ್ಞೆಗಾಗಿ ಅಲ್ಲಿ ಕಾಯುತ್ತಿರುವಂತೆ ವ್ಯವಸ್ಥೆ ಮಾಡಲಿ. ಫತ್ತೆ ಹೈದರ್‌ರವರ ಈ ನೆರವನ್ನು ಕುರಿತು ನಾನು ಗೌರ್ನರ್ ಜನರಲ್ ಸಾಹೇಬರಿಗೆ ಬರೆದು, ಜೊತೆಯಲ್ಲೇ ನಿಮ್ಮ ಅಭಿಪ್ರಾಯಗಳನ್ನೂ ತಿಳಿಸುತ್ತೇನೆ. ಹೋಗೋಣ ಬನ್ನಿ. ಫತ್ತೆ ಹೈದರ್‌ರವರನ್ನು ನಿಮ್ಮೊಡನೆ ಕಳುಹಿಸಿ ಕೊಡುತ್ತೇನೆ."

"ಅಪ್ಪಣೆ ಖಾವಿಂದ್."

§

"ಪರಿಸ್ಥಿತಿ ನಮಗೆ ಹಿತಕರವಾಗಿ ಕಾಣುತ್ತಿಲ್ಲ ದಾಸರೆ. ಕೈಗೆ ಬಂದ ತುತ್ತು ಬಾಯಿಗೆ ಬರದ ಹಾಗಾಗುತ್ತದೆಯೇನೋ ! ಕಳೆದ ಬಾರಿಯೂ ಹೀಗೆ ಆಯಿತಲ್ಲ ! ಒಂದು ವ್ಯತ್ಯಾಸ – ಕಳೆದ ಬಾರಿ ಆ ಯವನ ರಾಕ್ಷಸ ಬದುಕಿ ಕೊಂಡಿದ್ದ. ಈಗ ಸತ್ತಿದ್ದಾನೆ ! ಅಷ್ಟಕ್ಕಾಗಿ ನಾವು ಸಂತೋಷಪಟ್ಟುಕೊಳ್ಳ ಬಹುದು. ಉಳಿದ ವಿಚಾರವೆಲ್ಲ ಯಥಾಸ್ಥಿತಿ. ಸುಲ್ತಾನನ ಸಿಪಾಯಿಗಳು ನಮ್ಮ ಬಿಡಾರವನ್ನು ಕಾಯುತ್ತಿದ್ದುದರ ಬದಲು ಕಂಪನಿ ಸರ್ಕಾರದ ಸಿಪಾಯಿಗಳು ಕಾವಲು ಕಾಯುತ್ತಿದ್ದಾರೆ. ಸುಲ್ತಾನನ ಉಗ್ರಾಣದಿಂದ ನಮಗೆ ಪಡಿಭತ್ಯ ಬರುತ್ತಿದ್ದುದರ ಬದಲು ಕಂಪನಿ ಸೈನ್ಯದ ಕಛೇರಿಯಿಂದ ಬರುತ್ತಿದೆ. ಇದಕ್ಕಿಂತ ಹೆಚ್ಚಿನ ವ್ಯತ್ಯಾಸವೇನೂ ಆಗಿಲ್ಲವಲ್ಲ ನಮ್ಮ ಸ್ಥಿತಿಗತಿಗಳಲ್ಲಿ. ಕುಮಾರರಿಗೆ ರಾಜ್ಯ ಕೊಡುವ ಮಾತೇ ಹೊರಟಿಲ್ಲವಲ್ಲ – ಸುಲ್ತಾನ ಸತ್ತು ಒಂದು ತಿಂಗಳಾದರೂ !"

"ಇಂಥಾ ವಿಚಾರಗಳಲ್ಲಿ ಕೊನೆಯ ನಿರ್ಣಯ ಪ್ರಕಟಿಸುವುದಕ್ಕೆ ಮೊದಲು ವಿವೇಚಿಸಬೇಕಾದ ಅಂಶಗಳು ಎಷ್ಟೆಷ್ಟೋ ಇರುತ್ತವೆ ತಾಯಿ."

"ನನ್ನ ಭಯವೂ ಅದೇ ದಾಸರೆ. ಇಂಥ 'ವಿವೇಚನೆ' ನಡೆಯುತ್ತಿರುವಾಗ ಚಾಲೂಕಾದ ಮನುಷ್ಯ ಸಂಬಂಧಪಟ್ಟವರೆಲ್ಲರ ಕಿವಿಯನ್ನೂ ತನ್ನ ಕಡೆಗೇ ತಿರುಗಿಸಿಕೊಂಡು ಬಿಡಬಹುದು. ಅಲ್ಲಿ ಅವನ ಓಡಾಟ ಬಲವಾಗಿದೆಯಂತೆ. ನಮ್ಮ ವಂಶಕ್ಕೆ ರಾಜ್ಯ ಕೊಡುವುದೇ ಬೇಡ. ಸುಲ್ತಾನನ ಮಗನಿಗೆ ರಾಜ್ಯ ಕೊಡಿ ಅಂದನಂತೆ."

"ಪೂರ್ಣಯ್ಯನವರು ಹಾಗೆ ಹೇಳಿದ್ದುಂಟು ಅಂತ ಸುದ್ದಿಯೇನೋ ಇದೆ ತಾಯಿ."

"ಸುದ್ದಿಯಿರುವುದೇನು ಬಂತು ದಾಸರೆ. ಎಲ್ಲ ಕಣ್ಣೆದುರಿಗೆ ನಿಚ್ಚಳವಾಗಿ ಕಾಣುತ್ತಿದೆಯಲ್ಲ. ಕಂಪನಿ ಸೇನಾಪತಿಗಳು ಹಿಡಿದಿಟ್ಟಿದ್ದ ಸುಲ್ತಾನನ ಮಗನನ್ನು ಬಿಡಿಸಿಕೊಂಡು ಬಂದು ಮಹಲಿನಲ್ಲಿ ಕೂರಿಸಿದ. ಆ ಹುಡುಗ ರಾಜ್ಯದ ಅರಸನ ಹಾಗೇ ವ್ಯವಹಾರ ಮಾಡುತ್ತಾಯಿದಾನೆ. ತನ್ನ ಸೈನ್ಯದ ಅಧಿಕಾರಿಗಳನ್ನು ಕರೆಸಿಕೊಳ್ಳುತ್ತಾ ಇದಾನೆ. ಅವರಿಗೆ ಆಜ್ಞೆ ಮಾಡುತ್ತಾ ಇದಾನೆ. – ಇನ್ನೇನು ಬೇಕು! ಮುಖ್ಯ ನನ್ನದು ಹೀನ ಅದೃಷ್ಟ. ನಾನು ಕೈಯಿಟ್ಟ ಕೆಲಸ ಯಾವಾಗಲೂ ಹೀಗೆಯೇ. ಇನ್ನೇನು ಕೈಗೂಡಿತು ಕೈಗೂಡಿತು ಅನ್ನುತ್ತಿರುವಷ್ಟರಲ್ಲಿ ಏನಾದರೂ ಒಂದು ಅಡಚನೆ ಎದ್ದು ಕೂರುತ್ತದೆ! – ನೀವು ಹೇಳಿದ್ದಿರಿ. ಕಂಪನಿ ಸೈನ್ಯದ ಜೊತೆಯಲ್ಲಿ ತಿರುಮಲರಾಯರು ಬರುತ್ತಾರೆ ಅಂತ. ಏನಾಯಿತೋ ಏನೋ ಬರಲಿಲ್ಲವಲ್ಲ. ಅವರಾದರೂ ಈಗ ಇಲ್ಲಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ನಮ್ಮ ಕೈ ಬಲವಾಗುತ್ತಿತ್ತು. ಈಗ ಕಂಪನಿ ಸೇನಾಪತಿಗಳ ಮುಂದೆ ನಮ್ಮ ಪಕ್ಷ ಹಿಡಿದು ಮಾತನಾಡುವವರು ಕೂಡ ಇಲ್ಲವಾಗಿದೆ!—"

"ಇದಾರಲ್ಲ ತಾಯಿ, ವೆಲ್ಲೆಸ್ಲಿ ಸಾಹೇಬರು."

"ಆದರೆ ತಿರುಮಲರಾಯರು ಇದ್ದ ಹಾಗಾಯಿತೆ? ಅವರು ನಮ್ಮ ವಿಚಾರ ಚೆನ್ನಾಗಿ ಬಲ್ಲವರು. ಪೂರ್ಣಯ್ಯ ನಮ್ಮ ವಿರುದ್ಧವಾಗಿ ಮಾತನಾಡಿದರೆ ಅವನ ಬಾಯಿ ಮುಚ್ಚಿಸುವ ಶಕ್ತಿ ಅವರಿಗಿತ್ತು. ವೆಲ್ಲೆಸ್ಲಿ ಸಾಹೇಬರಿಗೆ ನಮ್ಮ ಮೇಲೆ ಅಭಿಮಾನವಿದೆ. ಆದರೆ ನಮ್ಮ ವಿಚಾರ ಚೆನ್ನಾಗಿ ಗೊತ್ತಿಲ್ಲವಲ್ಲ. ಆದ್ದರಿಂದಲೇ ಸೇನಾಪತಿಗಳ ಹತ್ತಿರ ಪೂರ್ಣಯ್ಯನ ಕೈವಾಡ ಅಷ್ಟು ಬಲವಾಗಿರುವುದು.

'ಒಡನೆಯೇ ತಿರುಮಲರಾಯರನ್ನು ಇಲ್ಲಿಗೆ ಕರೆಸಿಕೊಳ್ಳುವುದಕ್ಕೆ ಏನಾದರೊಂದು ಏರ್ಪಾಡು ಮಾಡಿ' ಎಂದು ಹೇಳಿದ್ದೆವಲ್ಲ – ಆ ವಿಚಾರ—"

"ವೆಲ್ಲೆಸ್ಲಿ ಸಾಹೇಬರೊಡನೆ ಮಾತನಾಡಿದೆ ತಾಯಿ."

"ಯಾವಾಗ?"

"ಇವತ್ತು ಬೆಳಗ್ಗೆ."

"ಏನೆಂದರು? – – – ಅನುಮಾನವೇಕೆ ಹೇಳಿ ದಾಸರೆ."

"'ಅವರು ಇಲ್ಲಿಗೇಕೆ ಬರಬೇಕು?' ಎಂದರು."

"ನೀವು ಅವರಿಗೆ ಸರಿಯಾಗಿ ತಿಳಿಸಿ ಹೇಳಲಿಲ್ಲವೆ?"

"ಹೇಳಿದೆ ತಾಯಿ. ರಾಯರು ಮಹಾರಾಣಿಯವರ ಪ್ರಧಾನರು. ಅನೇಕ ವರ್ಷಗಳಿಂದ ರಾಣಿಯವರ ಪರವಾಗಿ ಕಂಪನಿ ಸರ್ಕಾರದೊಡನೆ ವ್ಯವಹರಿಸಿದವರು. ಮೈಸೂರು ರಾಜಮನೆತನದ ವಿಚಾರವಾಗಿ ಎಲ್ಲ ವಿವರಗಳನ್ನೂ ಬಲ್ಲವರು. ಆದ್ದರಿಂದ ಅವರು ಇಲ್ಲಿದ್ದರೆ, ಮಹಾರಾಣಿಯವರ ಪರವಾಗಿ ಚರ್ಚೆಗಳಲ್ಲಿ ಭಾಗ ವಹಿಸಲು ಅನುಕೂಲವಾಗುತ್ತದೆ. ಇಲ್ಲದಿದ್ದರೆ, ಬೇರೆಯವರ ಮಾತೇ ಸೇನಾಪತಿಗಳಲ್ಲಿ ದೊಡ್ಡದಾಗಿ ತೋರಿ, ರಾಜವಂಶಕ್ಕೆ ಅನ್ಯಾಯವಾಗಬಹುದು – ಎಂತ ಹೇಳಿದೆ."

"ಅದಕ್ಕೆ—"

"ವೆಲ್ಲೆಸ್ಲಿ ಸಾಹೇಬರು ಹೇಳಿದರು. 'ನೀವು ಹೇಳುವುದೆಲ್ಲಾ ಸರಿ. ಆದರೆ ತಿರುಮಲರಾವ್ ಈಗ ಇಲ್ಲಿಗೆ ಬರಬೇಕಾದ ಆವಶ್ಯಕತೆ ತೋರುವುದಿಲ್ಲ. ನನ್ನ ಮಾತು ಕೇಳಿ: ಈ ರಾಜ್ಯದ ಪುನರ್‌ವ್ಯವಸ್ಥೆಗೆ ಸಂಬಂಧಿಸಿದಂತೆ ಯಾವುದೇ ವಿಚಾರವಾಗಿ ಸೇನಾಪತಿಗಳು ಸಲಹೆಗಳನ್ನು ಕೊಡಬಹುದೇ ಹೊರತು, ಕೊನೆಯ ನಿರ್ಣಯ ಮಾಡುವ ಅಧಿಕಾರವಿಲ್ಲ. ಆ ಅಧಿಕಾರ ಗೌರ್ನರ್ ಜನರಲ್ ಸಾಹೇಬರಿಗೆ ಸೇರಿದ್ದು. ವಿಚಾರ ಮದರಾಸಿನಲ್ಲಿ ನಿರ್ಣಯವಾಗುತ್ತದೆ. ರಾವ್ ಅಲ್ಲಿದ್ದರೇ ಒಳ್ಳೆಯದು. ಕೊನೆಯ ನಿರ್ಣಯವನ್ನು ಪ್ರೇರೇಪಿಸುವ ಅವಕಾಶ ಅವರಿಗಿರುತ್ತದೆ' ಎಂದರು."

"ನೀವು ಈ ಮಾತು ಒಪ್ಪಿದಿರಾ ದಾಸರೆ?"

"ಕೊನೆಯ ನಿರ್ಣಯದ ವಿಚಾರವಾಗಿ ಅವರು ಹೇಳಿದ್ದರಲ್ಲಿ ಸತ್ಯಾಂಶ ಇರಬಹುದು. ಆದರೆ ಅವರ ಮಾತಿನ ಧೋರಣೆ ನೋಡಿದರೆ, ರಾಯರು ಇಲ್ಲಿಗೆ ಬರಬೇಕಾಗಿಲ್ಲ ಎಂದು ಸೂಚಿಸಿದ ಹಾಗೆ ತೋರಿತು."

"ಹೌದಲ್ಲ. ಯಾಕಿದ್ದೀತು? ರಾಯರಿಗೂ ವೆಲ್ಲೆಸ್ಲಿ ಸಾಹೇಬರಿಗೂ ಸ್ನೇಹ ಎಂದಿರಿ. ಅವರು ಈಗ ಇಲ್ಲಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!"

"ತುಂಬ ಚೆನ್ನಾಗಿರುತ್ತಿತ್ತು. ಆದ್ದರಿಂದಲೇ ನಾನು ವೆಲ್ಲೆಸ್ಲಿ ಸಾಹೇಬರ ಹತ್ತಿರ ವಾದ ಮಾಡಿದೆ: ಮಹಾರಾಣಿಯವರು ರಾಯರನ್ನು ನೋಡಿ ಅನೇಕ ವರ್ಷಗಳಾದುವು. ಮುಖ್ಯತಃ ಅವರೊಡನೆ ಮಾತನಾಡಬೇಕಾದ ವಿಚಾರಗಳಿವೆ: ಸ್ವಂತದ್ದು, ರಾಜಮನೆತನದ ಹಕ್ಕಿಗೆ ಸಂಬಂಧಿಸಿದ್ದು – ಎಂದೆ. ಅದಕ್ಕೆ ಅವರು ಹೇಳಿದರು: 'ರಾಜಮನೆತನದ ಹಕ್ಕಿನ ವಿಚಾರದಲ್ಲಿ ರಾಯರು ಎಲ್ಲ ವಿಚಾರ ವನ್ನೂ ಈಗಾಗಲೇ ಸ್ಪಷ್ಟಪಡಿಸಿದ್ದಾರೆ. ಹೊಸದಾಗಿ ಹೇಳಬೇಕಾದ್ದು ಇನ್ನೇನಿದೆ' ಎಂದು ತೇಲಿಸಿಬಿಟ್ಟರು."

"ಅಂದರೆ, ರಾಯರು ಇಲ್ಲಿಗೆ ಬರುವುದು ಅವರಿಗೆ ಏನೇನೂ ಇಷ್ಟವಿಲ್ಲ ಅಂದಹಾಗಾಯಿತು. ಏಕೆ?"

"ನನಗೂ ಅದೇ ಸಮಸ್ಯೆಯಾಗಿದೆ. ಅವರವರಿಗೆ ಎಷ್ಟೊಂದು ಸ್ನೇಹವಿತ್ತು! – ಆದರೂ ಈಗ—"

"ವೆಲ್ಲೆಸ್ಲಿ ಸಾಹೇಬರು ಈ ರೀತಿ ನಡೆದುಕೊಳ್ಳುವುದೆಂದರೆ, ಅದಕ್ಕೆ ಏನೋ ಪ್ರಬಲವಾದ ರಾಜಕೀಯ ಕಾರಣವಿರಬೇಕು ದಾಸರೆ. ಅದೇನೊ ಗೊತ್ತಾಗ ಲೊಲ್ಲದಲ್ಲ! – ಒಂದು ವೇಳೆ ಪೂರ್ಣಯ್ಯನ ಕಿತಾಪತಿ – ಏನಾದರೂ—"

"ಅಂಥದೇನೂ ಇರಲಾರದು ತಾಯಿ. ನಾನು ವೆಲ್ಲೆಸ್ಲಿ ಸಾಹೇಬರ ಹತ್ತಿರ ಇನ್ನೂ ಸ್ವಲ್ಪ ಮಾತನಾಡಿ, ರಾಜಕೀಯದ ಮಾತುಕತೆಗಳ ಸಂಬಂಧದಲ್ಲಿ ಅಲ್ಲದಿದ್ದರೂ, ಮಹಾರಾಣಿಯವರನ್ನು ಕಂಡು ಮಾತನಾಡುವುದಕ್ಕಾದರೂ ರಾಯರು ಇಲ್ಲಿಗೆ ಬರಬೇಡವೆ? ಮಹಾರಾಣಿಯವರು ಅವರನ್ನು ನೋಡಲು ತುಂಬಾ ಅಪೇಕ್ಷೆಪಡುತ್ತಿದ್ದಾರೆ. ಅವರನ್ನು ಆದಷ್ಟು ಶೀಘ್ರವಾಗಿ ಇಲ್ಲಿಗೆ ಕರೆಯಿಸಲು ಏರ್ಪಾಡು ಮಾಡಬೇಕೆಂದು ಮಹಾರಾಣಿಯವರು ಹೇಳಿ ಕಳುಹಿಸಿ ದ್ದಾರೆ ಎಂದೆ. ಆದಕ್ಕವರು 'ನೋಡೋಣ. ಮದರಾಸಿಗೆ ಪತ್ರ ಬರೆಸುತ್ತೇವೆ. ಅವರು ಮದರಾಸಿನಲ್ಲೇ ಇರಬೇಕಾದ ಸಂದರ್ಭವಿಲ್ಲದಿದ್ದರೆ ಅವರನ್ನು ಒಡನೆಯೇ ಇಲ್ಲಿಗೆ ಕಳುಹಿಸಿಕೊಡತಕ್ಕದ್ದು ಎಂದು ತಿಳಿಸುತ್ತೇನೆ' ಅಂದರು."

"ಅವರ ಮಾತಿನ ಧಾಟಿ ನೋಡಿದರೆ ಎಲ್ಲೋ ಏನೋ ತಕರಾರು ಎದ್ದು ಕೂತಿದೆ ಎನಿಸುತ್ತದಲ್ಲ. ಅದನ್ನು ಗೊತ್ತು ಹಚ್ಚಿ ನಿವಾರಿಸದಿದ್ದರೆ ಮುಂದೆ

ಇನ್ನೇನೇನು—ಸರಿ, ದಾಸರೆ, ಒಡನೆಯೇ ಇಲ್ಲಿಗೆ ಬರುವಂತೆ ನಂಜರಾಜಯ್ಯ ನವರಿಗೆ ಹೇಳಿಕಳುಹಿಸಿ."

" ದೊಡ್ಡಯ್ಯ."

" ಇವನೆಲ್ಲಿ ಬಂದ ?"

" ಇಲ್ಲೇ ಬಾಗಿಲಲ್ಲಿದ್ದಾನೆ ತಾಯಿ."

" ಯಾವತ್ತಿನಿಂದ ?"

" ಈಗೊಂದು ತಿಂಗಳಿಂದ."

" ನಮಗೆ ತಿಳಿಯದೇಯಿರಲಿಲ್ಲ!"

" ಕ್ಷಮಿಸಬೇಕು ತಾಯಿ. ಅಂದಿನ ಗಲಭೆಯಲ್ಲಿ ಬಿನ್ನವಿಸಿಕೊಳ್ಳುವುದನ್ನು ಮರೆತುಬಿಟ್ಟೆ. ಅವತ್ತು ತಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದವನು – ದೊಡ್ಡಯ್ಯನೇ !"

" ಆಶ್ಚರ್ಯ! – ಅವನು ಯಾರೋ ಮುಸಲರವನೆಂದಿದ್ದೆ."

" ಅವನ ಗಡ್ಡ ಮೀಸೆ ಎಲ್ಲ ಹಾಗೇಯಿತ್ತು."

" ಅದೇನು ಅವಸ್ಥೆ ಬಂದಿತ್ತು ಅವನಿಗೆ."

" ಅಂಥದೇನಿಲ್ಲ ತಾಯಿ. ಮುತ್ತಿಗೆ ಬಲವಾದ ಮೇಲೆ ಸ್ಥಿತಿಗತಿ ಹೇಗಿರುತ್ತದೆಯೋ – ಸನ್ನಿಧಾನದ ಕಾವಲಿನಲ್ಲಿ ನಮ್ಮವರಿದ್ದರೆ ಒಳ್ಳೆಯದು ಎನಿಸಿತು. ಏನು ಮಾಡುವುದೆಂದು ಯೋಚಿಸಿದೆ. ಸಂದರ್ಭ ಸಾಧಿಸಿ, ಆ ಮುಸ್ಲಿಂ ಕಾವಲುಗಾರರಿಬ್ಬರನ್ನೂ ಹಿಡಿಸಿ ಬಂಧನದಲ್ಲಿರಿಸಿದೆ. ಅವರ ಬದಲು ದೊಡ್ಡಯ್ಯ ಚಿಕ್ಕಣ್ಣ ಇಬ್ಬರೂ ಕಾವಲಿಗೆ ಬಂದರು. ಯಾವ ವಿಧವಾದ ಅನುಮಾನಕ್ಕೂ ಆಸ್ಪದವಿಲ್ಲದಿರಲೆಂದು ಅವರಿಬ್ಬರ ಮುಖಕ್ಕೂ ಗಡ್ಡ ಮೀಸೆ ಜೋಡಿಸಬೇಕಾಯಿತು. ಈಗ ಅವನು ಮಾಮೂಲಾಗಿಯೇ ಇದಾನೆ. – ಬಾ, ದೊಡ್ಡಯ್ಯ ; ಒಡನೆಯೇ ಬರಬೇಕೆಂದು ಸನ್ನಿಧಾನದ ಆಜ್ಞೆಯಾಗಿದೆಯೆಂದು ತಿಳಿಸಿ ಸಮ್ಮುಖದ ನಂಜರಾಜಯ್ಯನವರನ್ನು ಕರೆದುಕೊಂಡು ಬಾ."

" ಅಪ್ಪಣೆ."

" ದಾಸರೆ, ನಮ್ಮ ಬೆನ್ನಹಿಂದೆ, ನಮ್ಮ ವಿರುದ್ಧವಾದ ತಂತ್ರ ಏನೋ ನಡೆಯುತ್ತಿದೆಯೆಂದು ನನಗೆ ತುಂಬ ಅನುಮಾನ ಹುಟ್ಟಿದೆ. ಅದು ಏನೆಂಬುದನ್ನು ನಾವು ಪತ್ತೆ ಹಚ್ಚಬೇಕು. ಅದರಿಂದ ನಮ್ಮ ಹಿತಕ್ಕೆ ಧಕ್ಕೆಯಾಗದಂತೆ ನೋಡಿ

ಕೊಳ್ಳಬೇಕು. ನಮ್ಮ ವಿರೋಧಿಗಳು ಬೇರು ಬಿಡುವುದಕ್ಕೆ ಅವಕಾಶ ಕೊಡ ಕೂಡದು."

"ಸನ್ನಿಧಾನದ ಅಭಿಪ್ರಾಯ ಸರಿಯಾದದ್ದೇ. ಅದನ್ನು ಸಾಧಿಸಲು—"

"ಒಂದು ಕಾರ್ಯಕ್ರಮ ಯೋಚನೆ ಮಾಡಿದ್ದೇವೆ. ನಂಜರಾಜಯ್ಯ ಬರಲಿ. ಮಾತನಾಡೋಣ. ಅನಂತರ ನೀವಿಬ್ಬರೂ ಕಂಪನಿಸೇನಾಪತಿಗಳನ್ನು ನೋಡಿ ಮಾತನಾಡಬೇಕು."

"ಅಪ್ಪಣೆ ತಾಯಿ."

§

"ತಿರುಮಲರಾಯರ ವಿಚಾರವಾಗಿ ಪತ್ರ ಬರೆಯುತ್ತೇನೆಂದು ವೆಲ್ಲೆಸ್ಲಿ ಸಾಹೇಬರು ಹೇಳಿ ಇಪ್ಪತ್ತು ದಿವಸವಾಯಿತು. ಇನ್ನೂ ರಾಯರು ಬರುವ ಸುದ್ದಿಯೇ ಇಲ್ಲವಲ್ಲ, ದಾಸರೆ."

"ಇಲ್ಲ ತಾಯಿ."

"ವೆಲ್ಲೆಸ್ಲಿ ಸಾಹೇಬರು ಪತ್ರ ಬರೆದರೋ ಇಲ್ಲ, ನಮ್ಮ ಸಮಾಧಾನ ಕ್ಕಾಗಿ—"

"ಅವರ ವಿಚಾರದಲ್ಲಿ ಅಂಥ ಅಪನಂಬಿಕೆ ಕಾರಣವಿಲ್ಲ ತಾಯಿ. ಬರೆಯು ತ್ತೇನೆ ಎಂದಮೇಲೆ ಬರೆದೇಯಿರುತ್ತಾರೆ. ವೆಲ್ಲೆಸ್ಲಿ ಸಾಹೇಬರು ಹೇಳಿದ ಹಾಗೆ ರಾಯರು ಚನ್ನಪುರಿಯಲ್ಲಿ ಇರಬೇಕಾದ ಆವಶ್ಯಕತೆಯೇನಾದರೂ ಇದೆಯೋ ಹೇಗೋ ?"

"ಇದ್ದೀತು. ಗೌರ್ನರ್ ಜನರಲ್ ಸಾಹೇಬರು ಚನ್ನಪುರಿಯಲ್ಲೇ ಇದ್ದಾರಂತೆ. ಹ್ಯಾರಿಸ್ ಸಾಹೇಬ ನಮ್ಮೊಡನೆ ಮಾತನಾಡಿದ್ದು ನೋಡಿದರೆ, ಯಾವ ವಿಚಾರದಲ್ಲೂ ಅವನು ಸ್ವತಂತ್ರವಾಗಿ ವರ್ತಿಸುತ್ತಿಲ್ಲ ಎಂಬಂತೆ ಕಾಣುತ್ತದೆ."

"ನಮಗೂ ಹಾಗೆಯೇ ತೋರುತ್ತದೆ. ಈಗೊಂದು ಸಲಹೆಗಾರ ಮಂಡಲಿ ಏರ್ಪಡಿಸಿದ್ದಾರಂತೆ ತಾಯಿ. ಅದರಲ್ಲಿ ವೆಲ್ಲೆಸ್ಲಿ ಸಾಹೇಬರೂ ಇದಾರಂತೆ. ಇಲ್ಲಿಯ ವ್ಯವಹಾರಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳೂ ಆ ಮಂಡಲಿ ಮುಂದೆ ಚರ್ಚೆಗೆ ಬಂದು ನಿರ್ಣಯವಾಗಬೇಕಂತೆ. ಆ ನಿರ್ಣಯ ಬದಲಾಯಿಸಬಹುದಾದ

ಅಧಿಕಾರಯಿರುವುದು ಗೌರ್ನರ್ ಜನರಲ್ ಸಾಹೇಬರೊಬ್ಬರಿಗೇ ಎಂದು ಕೇಳಿದೆ ತಾಯಿ."

"ಹಾಗಿದ್ದರೆ, – ಅದಕ್ಕಾಗಿಯೇ ರಾಯರು ಚನ್ನಪುರಿಯಲ್ಲಿ ಉಳಿದು ಕೊಂಡಿದ್ದಾರೇನೋ ? – ಆದರೂ ಅವರಿಂದ ಒಂದು ಕಾಗದ ಬಂದಿದ್ದರೆ—"

"ಏನದು ವಿಚಾರಿಸಿ ದಾಸರೆ."

"ಏನದು ದೊಡ್ಡಯ್ಯ."

"ನಂಜರಾಜಯ್ಯನವರು ಭಕ್ಷಿ ಪೂರ್ಣಯ್ಯನವರನ್ನು ಕರೆದುಕೊಂಡು ಬಂದಿದಾರೆ. – ಸನ್ನಿಧಾನದ ದರ್ಶನಕ್ಕೆ."

"ನಾಲ್ಕು ಕ್ಷಣ ಬಿಟ್ಟು ಬರಲಿ."

"ಸನ್ನಿಧಾನದ ಅಪ್ಪಣೆಯಾದೊಡನೆ ತಿಳಿಸುತ್ತೇನೆ ದೊಡ್ಡಯ್ಯ."

"ಕಾದಿರುತ್ತೇನೆ ಬುದ್ಧಿ."

"ಇವನೇಕೆ ಇಲ್ಲಿಗೆ ಬಂದ ದಾಸರೆ – ಈ ಪೂರ್ಣಯ್ಯ ?"

"ಸೇನಾಪತಿಯ ಕಡೆಯಿಂದ ಬಂದಿರಬಹುದು – ಏನಾದರೂ ಸುದ್ದಿ ತಿಳಿಸು ವುದಕ್ಕೆ. ಇವನೆಂದರೆ ಅವನಿಗೆ ತುಂಬ ಅಚ್ಚುಮೆಚ್ಚು."

"ನಮ್ಮ ಮೇಲೇನಾದರೂ ತಂತ್ರ ಹೂಡಿದ್ದಾನೋ ?"

"ನೋಡಬೇಕು. ಅನುಮಾನಾಸ್ಪದವಾಗಿ ಕಂಡು ಬಂದರೆ ಸನ್ನಿಧಾನ ದವರು ಆಲೋಚನೆ ಮಾಡಿ ತಿಳಿಸುವುದಾಗಿ ಅಪ್ಪಣೆ ಕೊಡಿಸಿದರಾಯಿತು. ನಂಜರಾಜಯ್ಯನವರೂ ಇರುತ್ತಾರಲ್ಲ."

"ನೀವೂ ಇರಿ ದಾಸರೆ. ಏನಾದರೊಂದು ಸತ್ಕಥಾ ಕಾಲಕ್ಷೇಪ ನಡೆಯು ತ್ತಿರಲಿ ಅವರು ಇಲ್ಲಿಗೆ ಬರುವ ಹೊತ್ತಿಗೆ" ಎಂದು ಮಹಾಮಾತೃಶ್ರೀಯವರು ಗಂಭೀರ ಮುದ್ರೆಯನ್ನು ತಾಳಿ ಕುಳಿತರು.

"ದೊಡ್ಡಯ್ಯ, ಅವರು ಬರಲಿ" ಎಂದು ಹೇಳಿ, ದಾಸರು ತಮ್ಮ ಗೀತಾ ವ್ಯಾಖ್ಯಾನವನ್ನಾರಂಭಿಸಿದರು :

"ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ"

ಭಗವಾನ್ ಶ್ರೀಕೃಷ್ಣಸ್ವಾಮಿಯವರು ಅಪ್ಪಣೆ ಕೊಡಿಸಿದ ಮಾತು ಇದು : ತಾವು ಈ ಭೂಲೋಕದಲ್ಲಿ ಅವತಾರ ಮಾಡತಕ್ಕದ್ದು ಏತಕ್ಕಾಗಿ ಅನ್ನೋದನ್ನ ವಿವರಿಸುತ್ತಾ ಇದ್ದಾರೆ : ಈ ರೀತಿ :

"ಎಚ್ಚರಿಕೆ; ಮಹಾಸನ್ನಿಧಾನದಲ್ಲಿ ಎಚ್ಚರಿಕೆ"–ದೊಡ್ಡಯ್ಯನ ಘೋಷಣೆ ಕೇಳಿಬಂತು.

"ಸನ್ನಿಧಾನಕ್ಕೆ ಬರುತ್ತಿದ್ದಾರೆ ತಾಯಿ."

"ವ್ಯಾಖ್ಯಾನ ನಡೆಯುತ್ತಿರಲಿ."

"ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ"–ಬನ್ನಿ, ಬನ್ನಿ ನಂಜರಾಜಯ್ಯನವರೆ."

ನಂಜರಾಜಯ್ಯನವರೂ ಪೂರ್ಣಯ್ಯನವರೂ ಒಳಕ್ಕೆ ಬಂದು ಮಹಾ ಮಾತೃಶ್ರೀಯವರಿಗೆ ನಮಸ್ಕರಿಸಿದರು. ಅನಂತರ ನಂಜರಾಜಯ್ಯನವರು ಬಿನ್ನವಿಸಿದರು :

"ಪೂರ್ಣಯ್ಯನವರು ಸನ್ನಿಧಾನದ ದರ್ಶನಕ್ಕೆ ಬಂದಿದ್ದಾರೆ."

"ನಾವು ಬಂದಿದ್ದು ಸನ್ನಿಧಾನದ ಸತ್ಕಥಾಕಾಲಕ್ಷೇಪಕ್ಕೆ ಭಂಗತಂದಂತಾಯಿತೇನೋ" ಎಂದರು ಪೂರ್ಣಯ್ಯನವರು; ಸನ್ನಿಧಾನದ ಕ್ಷಮೆ ಬೇಡುವಂತೆ.

"ಹಾಗೇನೂ ಇಲ್ಲ. ದಾಸರೆ, ಆ ಶ್ಲೋಕದ ಅರ್ಥ ಹೇಳಿಬಿಡಿ. ಆಮೇಲೆ ಮಾತನಾಡೋಣ."

"ಪರಿತ್ರಾಣಾಯ ಸಾಧೂನಾಂ – ಸಾಧುಗಳನ್ನು ರಕ್ಷಿಸುವುದಕ್ಕಾಗಿ, ವಿನಾಶಾಯ ಚ ದುಷ್ಕೃತಾಂ–ದುಷ್ಟರನ್ನು ನಾಶಪಡಿಸುವುದಕ್ಕಾಗಿ, ಧರ್ಮಸಂಸ್ಥಾಪನಾರ್ಥಾಯ – ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಅಂದರೆ ಧರ್ಮವನ್ನು ಬಲಪಡಿಸುವುದಕ್ಕಾಗಿ, – ಸಂಭವಾಮಿ ಯುಗೇ ಯುಗೇ – ಯುಗ ಯುಗಗಳಲ್ಲೂ – ಅಂದರೆ ಪದೇ ಪದೇ, ನಾನು ಹುಟ್ಟುತ್ತೇನೆ – ಅಂದರೆ ವಿಶಿಷ್ಟವಾದ ಮತ್ಸ್ಯ ಕೂರ್ಮ, ವರಾಹ, ನಾರಸಿಂಹಾದಿ ಅವತಾರಗಳ ಮೂಲವಾಗಿಯಾಗಲೀ, ವಿಶೇಷ ಧಾರ್ಮಿಕ ಶಕ್ತಿಯುಳ್ಳ ವ್ಯಕ್ತಿಗಳ ರೂಪದಲ್ಲಿಯಾಗಲೀ ಆವಿರ್ಭವಿಸುತ್ತೇನೆ, ಅಂದರೆ ಹುಟ್ಟುತ್ತೇನೆ, ಪ್ರಕಟವಾಗುತ್ತೇನೆ.–ಎಂದು ಅರ್ಥ. ಇನ್ನು ಸಂಭಾಷಣೆ ನಡೆಯಲಿ. ಅನಂತರ ನಾನು ಬಂದು ವ್ಯಾಖ್ಯಾನ ಮುಂದುವರಿಸುತ್ತೇನೆ."

"ನೀವೂ ಇಲ್ಲೇ ಇರಿ ದಾಸರೆ. ಮಾತುಕತೆ ಮುಗಿದ ಮೇಲೆ ವ್ಯಾಖ್ಯಾನ ಮುಂದುವರಿಸುವಿರಂತೆ."

"ಸನ್ನಿಧಾನದ ಅಪ್ಪಣೆ ಆದಂತೆ."

"ಸನ್ನಿಧಾನದಲ್ಲಿ ಬಿನ್ನವಿಸಿಕೊಳ್ಳಿ ಪೂರ್ಣಯ್ಯನವರೆ." ಎಂದರು ನಂಜರಾಜಯ್ಯ.

"ನಾನು ಕಂಪನಿಯ ಸೇನಾಪತಿಗಳು ಜನರಲ್ ಹಾರಿಸ್ ಸಾಹೇಬರವರ ಕಡೆಯಿಂದ ಬಂದಿದ್ದೇನೆ. ಅವರ ಆಜ್ಞೆಯ ಪ್ರಕಾರ ಮಹಾರಾಣಿಯವರ ಸನ್ನಿಧಾನದಲ್ಲಿ ಕೆಲವು ಅಂಶಗಳನ್ನು ಬಿನ್ನವಿಸಿಕೊಳ್ಳಬೇಕಾಗಿದೆ."

"ನೀವು ಕಂಪನಿ ಸರ್ಕಾರದ ದುಬಾಷಿಗಳೇನು ?"

"ಹಾಗೇನು ಅಲ್ಲ. ನಾನು ಮೈಸೂರು ಸರ್ಕಾರದ ಚಾಕರ. ಆ ಸಂಸ್ಥಾನದ ಅಧಿಕಾರ ಯಾರ ಕೈಯಲ್ಲಿರುತ್ತದೆಯೋ ಅವರ ಆಜ್ಞೆಯಂತೆ ನಡೆಯ ತಕ್ಕದ್ದು ನನ್ನ ಕರ್ತವ್ಯ. ಆದ್ದರಿಂದ ಅವರ ಆಜ್ಞೆಯಂತೆ ಸನ್ನಿಧಾನಕ್ಕೆ ಬಂದಿದ್ದೇನೆ."

"ಸಂತೋಷ ಪೂರ್ಣಯ್ಯನವರೆ. ಹ್ಯಾರಿಸ್ ಸಾಹೇಬರು ಏನು ಹೇಳಿ ಕಳುಹಿಸಿದ್ದಾರೆ ?"

"ಕಂಪನಿ ಸರ್ಕಾರದವರು ವಿಜಯಿಗಳಾದ ಮೇಲೆ, ಆ ವಿಜಯದ ಪರಿಣಾಮವಾಗಿ ಉದ್ಭವಿಸುವ ಎಲ್ಲ ಸಮಸ್ಯೆಗಳನ್ನೂ ವಿವೇಚಿಸಿ, ಅವನ್ನು ಸರಿಯಾದ ರೀತಿಯಲ್ಲಿ ಪರಿಹರಿಸುವ ಉದ್ದೇಶದಿಂದ ಮೆಹರ್‌ಬಾನ್ ಗೌರ್ನರ್ ಜನರಲ್ ಸಾಹೇಬರು ಒಂದು ಸಲಹೆಗಾರ ಮಂಡಲಿಯನ್ನು ರಚಿಸಿದ್ದಾರೆ. ಈ ಮಂಡಲಿಯವರು ಈಗ್ಗೆ ಹತ್ತು ಹನ್ನೆರಡು ದಿವಸಗಳಿಂದ ಸಮಾಲೋಚನೆ ನಡೆಸುತ್ತಿದ್ದಾರೆ. ನಾಳೆ ಪ್ರಾತಃಕಾಲ ಸನ್ನಿಧಾನದ ಮತ್ತು ಕುಮಾರರ ದರ್ಶನ ತೆಗೆದುಕೊಳ್ಳಬೇಕೆಂದು ಅವರು ಅಪೇಕ್ಷಿಸಿದ್ದಾರೆ.—"

"ಈ ಮಂಡಲಿಯಲ್ಲಿ ಯಾರು ಯಾರು ಇದ್ದಾರೆ ಪೂರ್ಣಯ್ಯನವರೆ ?"

"ಎಂಟು ಮಂದಿ ಇಂಗ್ಲಿಷ್ ಸರದಾರರಿದ್ದಾರೆ: ಜನರಲ್ ಹ್ಯಾರಿಸ್ ಸಾಹೇಬರು."

"ಅಂದರೆ, ಕಂಪನಿ ಸೇನಾಪತಿಗಳು."

"ಕರ್ನಲ್ ವೆಲ್ಲೆಸ್ಲಿ ಸಾಹೇಬರು."

"ಈಗ ಈ ಕೋಟೆಯ ಗೌರ್ನರ್ ಸಾಹೇಬರು."

"ಹೆನ್ರಿ ವೆಲ್ಲೆಸ್ಲಿ ಸಾಹೇಬರು."

"ಯಾರು ?"

"ಗೌರ್ನರ್ ಜನರಲ್ ಸಾಹೇಬರ ಆಪ್ತ ಕಾರ್ಯದರ್ಶಿಗಳು – ಬಂಧುತ್ವದಲ್ಲಿ ಅವರ ಸಹೋದರರು."

"ಸರಿ ಸರಿ. ಕರ್ನಲ್ ವೆಲ್ಲೆಸ್ಲಿ ಸಾಹೇಬರ ಸಹೋದರರು ಅನ್ನಿ."

"ಲೆಫ್ಟಿನೆಂಟ್ ಕರ್ನಲ್ ಕಿರ್ಕ್‌ಪ್ಯಾಟ್ರಿಕ್ ಸಾಹೇಬರು, ಬಾರಿಕ್ಲೋಸ್ ಸಾಹೇಬರು – ಈ ಐದು ಜನ ಸದಸ್ಯರು. ಕ್ಯಾಪ್ಟನ್ ಮಾಲ್ಕಮ್, ಮನ್ರೋ ಸಾಹೇಬರುಗಳು ಕಾರ್ಯದರ್ಶಿಗಳು. ಇವರೆಲ್ಲ ಸೈನ್ಯದ ಅಧಿಕಾರಿಗಳು. ಇನ್ನೊಬ್ಬರು ಎಡ್ವರ್ಡ್ ಗೋಲ್ಡಿಂಗ್ ಅಂತ, ಅವರು ಸಹಕಾರ್ಯದರ್ಶಿಗಳು."

"ಒಳ್ಳೆಯದು. ಈ ಸರದಾರ ಮಂಡಲಿಯವರು ನಮ್ಮಲ್ಲಿಗೆ ಬರುವ ಉದ್ದೇಶ?"

"ಅದು ನನಗೆ ತಿಳಿಯದು."

"ಅವರೊಡನೆ ನೀವೂ ಬರುತ್ತೀರಲ್ಲವೆ?"

"ಕರೆದರೆ ಬರುತ್ತೇನೆ."

"ಕರೆಯದೆ ಇರುತ್ತಾರೆಯೆ?"

"ನಾನು ಹೇಗೆ ಹೇಳಲಿ ತಾಯಿ. ಅದು ಅವರ ಚಿತ್ತ."

"ಆಯಿತು. ನಮ್ಮ ಸಮ್ಮುಖದ ಸರ್ವಾಧಿಕಾರಿಗಳನ್ನು ಅವರೆಡೆಗೆ ಕಳುಹಿಸಿಕೊಡುತ್ತೇವೆ. ನಮ್ಮನ್ನು ಕಾಣುವುದಕ್ಕಾಗಿ ಅವರಿಲ್ಲಿಗೇಕೆ ಬರಬೇಕು?"

"ಈ ವಿಚಾರ ನಾನು ಹೇಗೆ ನಿರ್ಣಯಿಸಲಿ. ಹ್ಯಾರಿಸ್ ಸಾಹೇಬರು ನನಗೆ ಆಜ್ಞಾಪಿಸಿದ್ದಷ್ಟನ್ನು ಸನ್ನಿಧಾನದಲ್ಲಿ ಬಿನ್ನವಿಸಿಕೊಳ್ಳಬಲ್ಲೆ. ಮಂಡಲಿಯವರ ಅಪೇಕ್ಷೆಯನ್ನು ನಿಮ್ಮಲ್ಲಿ ಬಿನ್ನವಿಸಿಕೊಂಡು, ಸನ್ನಿಧಾನ ಎಲ್ಲಿ, ಎಷ್ಟು ಹೊತ್ತಿನಲ್ಲಿ ಅವರಿಗೆ ದರ್ಶನ ಕೊಡಬಹುದೆಂಬುದನ್ನು ತಿಳಿದು ಬರಬೇಕೆಂಬುದು ಅವರ ಆಜ್ಞೆ."

"ಒಳ್ಳೆಯದು. ನಂಜರಾಜಯ್ಯ ಪೂರ್ಣಯ್ಯನವರಿಗೆ ವೀಳಯ ಕೊಡಿಸಿ. ಅವರು ಹೋಗಿ ಬರಲಿ; ಪೂರ್ಣಯ್ಯನವರೆ, ನಮಗೆ ಯಾವ ಹೊತ್ತು ಅನುಕೂಲ ವೆಂಬುದನ್ನು ಇನ್ನೆರಡು ಗಳಿಗೆಯೊಳಗಾಗಿ ನಂಜರಾಜಯ್ಯನವರೊಡನೆ ಹೇಳಿ ಕಳುಹಿಸುತ್ತೇವೆಂದು ಹ್ಯಾರಿಸ್ ಸಾಹೇಬರಿಗೆ ತಿಳಿಸಿ."

"ಅಪ್ಪಣೆ."

"ವೀಳಯ ತೆಗೆದುಕೊಳ್ಳಿ. – ನಂಜರಾಜಯ್ಯನವರೆ, ಭಕ್ಷಿಯವರನ್ನು ಕಳುಹಿಸಿಕೊಟ್ಟು ಬನ್ನಿ."

"ಅಪ್ಪಣೆ."

ನಂಜರಾಜಯ್ಯನವರೂ ಪೂರ್ಣಯ್ಯನವರೂ ಮಹಾಮಾತೃಶ್ರೀ ಸನ್ನಿಧಾನ ದವರಿಗೆ ನಮಸ್ಕರಿಸಿ ಹೊರಟರು.

ಅನಂತರ ಸನ್ನಿಧಾನದವರು :

" ದಾಸರೆ, ಇನ್ನು ನಿಮ್ಮ ವ್ಯಾಖ್ಯಾನ ಆರಂಭವಾಗಲಿ " ಎಂದರು.

" ಸನ್ನಿಧಾನದವರ ಅಭಿಪ್ರಾಯ ವ್ಯಕ್ತವಾದಲ್ಲಿ ಅದರ ಮೇಲೆ ನನ್ನ ವ್ಯಾಖ್ಯಾನ ಹೇಳಬಹುದು."

" ನೋಡಿ ದಾಸರೆ, ಪೂರ್ಣಯ್ಯ ಏನಾದರೂ ಗುಟ್ಟು ಬಿಟ್ಟುಕೊಟ್ಟನೆ ? – ನನಗೆ ಖಂಡಿತವಾಗಿ ಗೊತ್ತು ಸಂದರ್ಭ ಏನು ಎಂಬುದು ಅವನಿಗೆ ತಿಳಿದಿದೆ. ಅದರೂ ಅದನ್ನು ನಮ್ಮೊಡನೆ ಮರೆಮಾಜಿದ್ದಾನೆ."

" ಏನೋ ತಾಯಿ, ಈ ವಿಚಾರದಲ್ಲಿ ನಾನೇನೂ ಹೇಳಲಾರೆ."

" ಸುಲ್ತಾನನ ಮಗನಿಗೆ ಪಟ್ಟಕಟ್ಟಿ ; ಮೈಸೂರು ರಾಜಮನೆತನ ಮೂಲೆಗೆ ಕೂರಿಸಿ – ಎಂತ ಹ್ಯಾರಿಸ್ ಸಾಹೇಬನಿಗೆ ಸಲಹೆ ಮಾಡಿದ ಈ ಪೂರ್ಣಯ್ಯ ನಮ್ಮ ಮನೆಯ ಬಾಗಿಲಿಗೆ ಬರಬೇಕಾದರೆ ಏನೋ ವಿಶೇಷವಿದೆ ದಾಸರೆ. ಆದರೂ, ಎಷ್ಟು ನಯವಾಗಿ ನಡೆದುಕೊಂಡ ನಮ್ಮೊಡನೆ, ನೀವೇ ನೋಡಿದಿರಲ್ಲ. ಅವನ ಮಾತಿರಲಿ. ಸಂದರ್ಭ ಏನಿದ್ದೀತು. ಏನಾದರೂ ಭೀತಿಯುಂಟೆ ? ಶಾಸ್ತ್ರ ನೋಡಿ ಹೇಳಿ."

" ಆ ಕೆಲಸಕ್ಕೆ ಶ್ರೀನಿವಾಸಾಚಾರ್ಯರಿದ್ದಾರಲ್ಲ ಈಗ. ಅವರು ಅರ್ಚಕರ ಮನೆಯಲ್ಲಿರಬೇಕು. ಕರೆದು ತರುತ್ತೇನೆ. – ನಂಜರಾಜಯ್ಯನವರೂ ಬಂದರು."

" ಅವ ಇನ್ನೇನು ಹೇಳಿದ ನಂಜರಾಜಯ್ಯ."

" ' ಶೀಘ್ರವಾಗಿ ಹೇಳಿಕಳುಹಿಸಿ. ಮಂಡಲಿಯವರು ವೃಥಾ ಕಾಯುವಂತೆ ಮಾಡಬೇಡಿ ' ಅಂದ."

" ಸಂದರ್ಭ ಏನಿದ್ದೀತು ಎಂದು ಯೋಚಿಸುತ್ತಿದ್ದೆವು."

" ನನಗೂ ಅದು ಸ್ಪಷ್ಟವಾಗಿ ಗೊತ್ತಾಗಲಿಲ್ಲ ತಾಯಿ. ಇಲ್ಲಿಗೆ ಬರುವುದಕ್ಕೆ ಮೊದಲು ಅವನು ನನ್ನನ್ನು ಕಂಡಾಗ, ನಾನೂ ಕೇಳಿದೆ – ಸಂದರ್ಭ ಏನು ಅಂತ. ' ನನಗೇನೂ ತಿಳಿಯದು. ರಾಜ್ಯವ್ಯವಸ್ಥೆಯ ವಿಚಾರ ಇದ್ದೀತು ' ಎಂದ."

" ಆ ಮಾತು ಅಡ್ಡಗೋಡೆಯ ಮೇಲಿನ ದೀಪ ಇದ್ದ ಹಾಗೆ. ಹೇಗೆ ಬೇಕಾದರೂ ಅರ್ಥಮಾಡಬಹುದು. ಮಂಡಲಿಯವರು ' ರಾಜ್ಯ ' ನಿಮಗೆ ಕೊಟ್ಟಿದ್ದೇವೆ ' ಎನ್ನಬಹುದು ; ' ನಿಮಗಲ್ಲ ; ಸುಲ್ತಾನನ ಮಗನಿಗೇ ಕೊಟ್ಟಿದ್ದೇವೆ. ನೀವು ಇನ್ನು ಮೇಲೆ ಸುಖಭತ್ಯ ತಿಂದುಕೊಂಡು ಮೂಲೆಯಲ್ಲಿ ಬಿದ್ದಿರಿ ' ಎನ್ನಬಹುದು – ಎರಡೂ ರಾಜ್ಯವ್ಯವಸ್ಥೆಯ ವಿಚಾರ ತಾನೆ ! – ಈ ಪೂರ್ಣಯ್ಯ ಆ

ಸತ್ತ ರಾವಣನಿಗೆ ಸರಿಯಾದ ಶಿಷ್ಯ. ಈ ತಲೆ ಕತ್ತರಿಸಿದರೆ ಆ ತಲೆ ಎತ್ತಿಕೊಂಡು ಬರತಾನೆ."

"ನಿಜ ತಾಯಿ. ಹ್ಯಾರಿಸ್ ಸಾಹೇಬನ ಹತ್ತಿರ ನಮ್ಮ ಹಿತಕ್ಕೆ ವಿರುದ್ಧವಾಗಿ ಮಾತನಾಡಿ ಯಾವ ಮುಖದಿಂದ ಸನ್ನಿಧಾನದ ದರ್ಶನಕ್ಕೆ ಬಂದ!"

"ಆದರೂ ನೋಡಿ ಹೇಗಿದ್ದ! – ಏನೂ ತಿಳಿಯದ ಸಾಧು ಪ್ರಾಣಿಯಂತೆ!"

"ಆಯಿತು. ಜೋಯಿಸರು ಬಂದೊಡನೆಯೇ ಮಂಡಲಿಯವರನ್ನು ನಾಳೆ ಎಷ್ಟು ಹೊತ್ತಿಗೆ ನೋಡಿದರೆ ಒಳ್ಳೆಯದೆಂಬುದನ್ನು ನಿರ್ಧರಿಸೋಣ. ನೀವು ಹ್ಯಾರಿಸ್ ಸಾಹೇಬನಿಗೆ ಆ ವಿಚಾರ ತಿಳಿಸುವುದಕ್ಕೆ ಮುಂಚೆ, ಹೀಗೆ ಹೇಳಿ – 'ತಮ್ಮನು ನೋಡಲು ಬರುವವರು ಏತಕ್ಕಾಗಿ ಬರುತ್ತಾರೆ ಎಂಬುದನ್ನು ತಿಳಿದುಕೊಳ್ಳದೆ, ಮ ಹಾ ರಾ ಣಿ ಯ ವ ರು ಯಾರನ್ನೂ ನೋಡುವುದಿಲ್ಲ. ಇದು ಅರಮನೆಯ ಪದ್ಧತಿ' ಎನ್ನಿ. ಅವನೇ ಬಾಯಿಬಿಡಬಹುದು. ಥಟ್ಟನೆ ಬಾಯಿ ಬಿಡದಿದ್ದರೆ, ಸಂದರ್ಭ ನೋಡಿ ಒಂದೆರಡು ಬಾರಿ ಪ್ರಯತ್ನಮಾಡಿ ನೋಡಿ. ದಾಸರನ್ನು ವೆಲ್ಲೆಸ್ಲಿ ಸಾಹೇಬರ ಹತ್ತಿರಕ್ಕೆ ಕಳುಹಿಸುತ್ತೇವೆ. ಈ ಎರಡು ಕಡೆಗಳಿಂದಲೂ ಬರುವ ಸುದ್ದಿ ತಿಳಿದು ಮುಂದಿನ ಕಾರ್ಯ ನಿರ್ಧರಿಸೋಣ."

"ಹಾಗೇ ಮಾಡಬಹುದು ತಾಯಿ."

§

"ಬನ್ನಿ ತಿರುಮಲರಾವ್ ; ನೆನ್ನೆ ರಾತ್ರಿ ಇಲ್ಲಿಗೆ ಬಂದಿರಂತೆ."

"ಹೌದು ಜನರಲ್ ಹ್ಯಾರಿಸ್ ಸಾಹೇಬರೆ. ದೀರ್ಘಪ್ರಯಾಣದಿಂದ ಆಯಾಸವಾಗಿತ್ತು. ಒಡನೆಯೇ ನೋಡಲಾಗಲಿಲ್ಲ."

"ಏನೂ ಚಿಂತೆಯಿಲ್ಲ. ಆರೋಗ್ಯತಾನೆ ? ತಾವು ಮದರಾಸ್ ಬಿಟ್ಟದ್ದು ಯಾವಾಗ ?"

"ಹದಿನೈದು ದಿವಸವಾಗುತ್ತ ಬಂತು."

"ಗೌರ್ನರ್ ಜನರಲ್‌ರವರು, ಅವರ ಪರಿವಾರ ಎಲ್ಲ ಕ್ಷೇಮವಷ್ಟೆ."

"ಕ್ಷೇಮವಾಗಿದ್ದಾರೆ. ನಿಮ್ಮಿಂದ ಒಂದು ಸಹಾಯವಾಗಬೇಕಾಗಿದೆ."

" ನನ್ನಿಂದಲೇ ? ಸಾಧ್ಯವಾದದ್ದನ್ನೆಲ್ಲಾ ಮಾಡುತ್ತೇನೆ. ನಿಮಗೆ ಇಲ್ಲವೆನ್ನುತ್ತೇನೆಯೆ ?"

" ನಾನು ಕೋಟೆಯೊಳಕ್ಕೆ ಹೋಗಬೇಕಾಗಿದೆ. ಅದಕ್ಕೆ ನಿಮ್ಮ ಅನುಮತಿ ಬೇಕಂತೆ."

" ಹೌದು, ನನ್ನ ಅನುಮತಿ ಬೇಕು."

" ಅದನ್ನು ದಯಪಾಲಿಸಬೇಕು."

" ಆ ವಿಚಾರ ಅಷ್ಟು ಸುಲಭವಲ್ಲವಲ್ಲ ತಿರುಮಲರಾವ್ ?"

" ತಾವು ಮನಸ್ಸು ಮಾಡಿದರೆ ಯಾವ ಕಷ್ಟವೂ ಇರಲಾರದು."

" ನಾನು ಮನಸ್ಸು ಮಾಡಿದರೇನು ? ಇಲ್ಲಿನ ವ್ಯವಹಾರಗಳನ್ನೆಲ್ಲಾ ನೋಡಿಕೊಳ್ಳಲು ಒಂದು ಮಂಡಲಿ ರಚಿಸಿದ್ದಾರೆ – ಗೌರ್ನರ್ ಜನರಲ್ಲರು. ಆ ಮಂಡಲಿ ಈಗ ಒಂದೂವರೆ ತಿಂಗಳಿನಿಂದ ಕೆಲಸ ಮಾಡುತ್ತಿದೆ. ಅದಕ್ಕೆ ಮೊದಲು ನಾನೇ ಸ್ವತಂತ್ರವಾಗಿ ಇಂಥ ಅನುಮತಿ ಕೊಡಬಹುದಾಗಿತ್ತು. ಆದರೆ ಈಗ ಮಂಡಲಿಯ ಒಪ್ಪಿಗೆ ಪಡೆಯದೆ ನಾನು ಸ್ವತಂತ್ರಿಸಿ ಕೆಲಸ ಮಾಡುವಹಾಗಿಲ್ಲ."

" ನನ್ನ ಪ್ರಾರ್ಥನೆ, ತಮ್ಮ ಶಿಫಾರಸ್ಸಿನೊಡನೆ ಮಂಡಲಿಗೆ ಹೋಗಬಹುದಲ್ಲ."

" ಆ ಕಾರ್ಯವಿಧಾನ ಮಂಡಲಿಗೆ ಒಪ್ಪಿಗೆಯಾಗದೆ ಹೋಗಬಹುದು. ಈ ವಿಚಾರದಲ್ಲಿ ನೀವೇ ಮಂಡಲಿಯ ಕಾರ್ಯದರ್ಶಿಗಳನ್ನು ನೋಡಿ."

" ಯಾರು ?"

" ಕ್ಯಾಪ್ಟನ್ ಮಾಲ್ಕಂ, ಇಲ್ಲವೇ ಕ್ಯಾಪ್ಟನ್ ಮನ್ರೋ – ಇಬ್ಬರೂ ಕಾರ್ಯದರ್ಶಿಗಳು. ಅವರಿಬ್ಬರೂ ನಿಮ್ಮ ಪರಿಚಯಸ್ಥರೇ ಆಯಿತಲ್ಲ."

" ತಮ್ಮ ಸಲಹೆಯಂತೆ ಮಾಡುತ್ತೇನೆ. ನಾನು ಇಲ್ಲಿಗೆ ಬಂದ ಉದ್ದೇಶ –"

" ನನಗೆ ತಿಳಿಯದು."

" ಅದನ್ನು ಬಿನ್ನವಿಸಿಕೊಳ್ಳಬೇಕಾಗಿದೆ."

" ಹೇಳಿ."

" ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ದರ್ಶನ ಮಾಡುವುದಕ್ಕೆ."

" ಅದಕ್ಕೋಸ್ಕರ ಕೋಟೆಯೊಳಗೆ ಹೋಗಬೇಕಾಗಿದೆ ?"

" ಹೌದು."

" ಸರಿ. ಮಂಡಲಿಯ ಕಾರ್ಯದರ್ಶಿಯವರಿಗೆ ಮೊದಲೇ ಈ ವಿಚಾರವನ್ನು

ತಿಳಿಸಿಬಿಡಿ. ಇಲ್ಲದಿದ್ದರೆ ನೀವು 'ಕೋಟೆಯೊಳಗೆ ಹೋಗಬೇಕಾದ ಆವಶ್ಯಕತೆ ಯೇನು ?' ಎಂದು ಪ್ರಶ್ನೆ ಮಾಡುತ್ತಾರೆ. ಆಗಲಾದರೂ ಉತ್ತರ ಹೇಳಲೇ ಬೇಕಾಗುತ್ತದಲ್ಲ."

"ಅದಕ್ಕೇನು ಮೊದಲೇ ತಿಳಿಸುತ್ತೇನೆ."

"ಹಾಗೆಯೇ, ನೀವು ರಾಣೀಸಾಹಿಬಾರವರನ್ನು ಏತಕ್ಕಾಗಿ ನೋಡ ಬೇಕಾಗಿದೆ ಎಂಬ ಅಂಶವನ್ನೂ ತಿಳಿಸಿಬಿಡಿ. ಆ ವಿಚಾರ ತಿಳಿಯದೆ, ಮಂಡಲಿ ನಿಮ್ಮ ಪ್ರಾರ್ಥನೆಯನ್ನು ಗಮನಕ್ಕೆ ತಂದುಕೊಳ್ಳುವುದಿಲ್ಲ."

"ಅದು ಎಲ್ಲರಿಗೂ ತಿಳಿದ ವಿಚಾರವೇ. ನಾನು ಮಹಾರಾಣಿಯವರ ಪ್ರಧಾನ. ಈ ಸಂದರ್ಭದಲ್ಲಿ ನಾನು ಅವರನ್ನು ನೋಡತಕ್ಕದ್ದು ಸಹಜವೇ ಆಗಿದೆಯಲ್ಲ!"

"ಅದು ಸರಿ ತಿರುಮಲರಾವ್. ಅವರನ್ನು ನೀವು ನೋಡಿಯೇ ತೀರ ಬೇಕಾದಂಥ ಕೆಲಸ ಏನಿದೆ ಎಂಬುದನ್ನು ನೀವು ಮಂಡಲಿಗೆ ತಿಳಿಸಬೇಕಾಗುತ್ತದೆ. ಈ ಅಂಶವನ್ನು ಅವರು ಪರ್ಯಾಲೋಚಿಸಿ, ನೀವು ರಾಣೀಸಾಹಿಬಾರವರನ್ನು ಕಾಣತಕ್ಕದ್ದು ಆವಶ್ಯಕವೆಂದು ತೋರಿಬಂದರೆ, ನೀವು ಅವರನ್ನು ನೋಡಲು ಅನುಮತಿ ಕೊಡಬಹುದು."

"ನಾನು ಮಹಾರಾಣಿಯವರ ಪ್ರಧಾನಿಯಾಗಿ ಎಷ್ಟೊಂದು ಜವಾಬು ದಾರಿಯ ಕೆಲಸಗಳನ್ನು ನಿರ್ವಹಿಸಿದ್ದೇನೆಂಬುದು ನಿಮಗೆ ತಿಳಿದಿಲ್ಲವೆ ಹ್ಯಾರಿಸ್ ಸಾಹೇಬರೆ! ಆ ಸಂಬಂಧದಲ್ಲಿ ನಾವು ನಾವು ಮಾತನಾಡಬೇಕಾದ ಅನೇಕ ವಿಚಾರಗಳಿವೆ."

"ಅದನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ ತಿರುಮಲರಾವ್. ಆದರೆ ಅದನ್ನೆಲ್ಲಾ ರಾಣೀಸಾಹಿಬಾರವರೊಡನೆ ಮಾತನಾಡುವುದಕ್ಕೆ ಈಗ ಅವಕಾಶ ವುಂಟೆಂದು ನನಗೆ ತೋರುವುದಿಲ್ಲ. ಅವರು ಯಾವ ಕ್ಷಣವೆಂದರೆ ಆ ಕ್ಷಣದಲ್ಲಿ ಇಲ್ಲಿಂದ ಹೊರಡಬೇಕಾಗಿದೆ. ಅದಕ್ಕಾಗಿ ಅವರೂ ಸಿದ್ಧತೆಗಳನ್ನು ಮಾಡಿಕೊಳ್ಳು ತ್ತಿದ್ದಾರೆ. ಮಂಡಲಿಯವರೂ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಾರೆ."

"ಆ ವಿಚಾರ ನನಗೂ ಸುದ್ದಿ ಬಂದಿದೆ ಹ್ಯಾರಿಸ್ ಸಾಹೇಬರೇ. ಮೈಸೂರಿ ನಲ್ಲಿ ಕುಮಾರರ ಪಟ್ಟಾಭಿಷೇಕ ನಡೆಯುಲು ಮುಹೂರ್ತ ಗೊತ್ತಾಗಿದೆ ಎಂದು ಕೇಳಿದೆ. ಮಹಾರಾಣಿಯವರೊಡನೆ ಇಲ್ಲಿ ಮಾತನಾಡುವುದು ಸಾಧ್ಯವಿಲ್ಲದಿದ್ದಲ್ಲಿ ಮೈಸೂರಿಗೆ ಹೋಗಿ ಅಲ್ಲಿ ಅವರ ದರ್ಶನ ತೆಗೆದುಕೊಂಡು ಮಾತನಾಡುತ್ತೇನೆ."

"ಅದೂ ಸಾಧ್ಯವಿಲ್ಲ ಎಂದೆನಿಸುತ್ತಿದೆ ನನಗೆ. ಮಂಡಲಿಯವರ ಅನುಮತಿ ಯಿಲ್ಲದೆ ಯಾರೂ ರಾಣಿಯವರನ್ನಾಗಲೀ ಅವರ ಹತ್ತಿರದ ಅಧಿಕಾರಿಗಳನ್ನಾಗಲಿ ನೋಡಲು ಸಾಧ್ಯವಿಲ್ಲ. ಪಟ್ಟಾಭಿಷೇಕ ಮುಗಿಯುವವರೆಗಂತೂ ಖಂಡಿತ ವಾಗಿಯೂ ಆ ಅವಕಾಶ ದೊರೆಯುವುದೆಂದು ನನಗೆ ನಂಬಿಕೆಯಿಲ್ಲ. ನಾನೂ ಆ ಮಂಡಲಿಯ ಸದಸ್ಯನಾಗಿದ್ದೇನಲ್ಲ. ಸಂದರ್ಭ ಏನೆಂಬುದು ನನಗೂ ಗೊತ್ತು."

"ಮಹಾರಾಣಿಯವರನ್ನು ನೋಡಲು ನನಗೆ ಅವಕಾಶ ದೊರೆಯುವುದಿಲ್ಲ ವೆಂದು ನೀವು ಅಭಿಪ್ರಾಯ ಪಡುತ್ತೀರಿ ಅಲ್ಲವೆ ಹ್ಯಾರಿಸ್ ಸಾಹೇಬರೆ."

"ಸರಿಯಾಗಿ ಹೇಳಿದಿರಿ."

"ಹಾಗಾದರೆ ನೀವು – ಕ್ಷಮಿಸಿ, ಮಂಡಲಿಯವರು ಅನ್ಯೋನ್ಯ – ನನಗೆ ತುಂಬಾ ಅನ್ಯಾಯ ಮಾಡಿದಂತಾಗುತ್ತದೆ."

"ನಾನದನ್ನು ಒಪ್ಪಲಾರೆ. ಯಾರಿಗೇ ಆಗಲಿ ಅನ್ಯಾಯ ಮಾಡ ಬೇಕೆಂಬುದು ನನ್ನ ಅಥವಾ ಮಂಡಲಿಯವರ ಉದ್ದೇಶವಲ್ಲ. ಟಿಪ್ಪೂ ಸುಲ್ತಾನನ ಮರಣಾನಂತರ ದೇಶದ ಪರಿಸ್ಥಿತಿ ತುಂಬ ಅಲ್ಲೋಲ ಕಲ್ಲೋಲವಾಗಿದೆ. ಅದರಿಂದ ಯಾವ ಅಪಾಯಕರವಾದ ಪರಿಸ್ಥಿತಿಯೂ ಉಂಟಾಗದಂತೆ, ಇಲ್ಲಿ ಸುಭದ್ರವಾದ ಆಡಳಿತವನ್ನು ಸ್ಥಾಪಿಸಬೇಕೆಂಬುದು ಮಂಡಲಿಯ ಉದ್ದೇಶ. ಈ ಉದ್ದೇಶ ಸಾಧನೆಗಾಗಿ ಅವರು ಅವಶ್ಯ ಕಾರ್ಯಕ್ರಮಗಳನ್ನು ಕೈಗೊಳ್ಳದೆ ವಿಧಿಯಿಲ್ಲ. ಈ ಕರ್ತವ್ಯ ನಿರ್ವಹಣೆಯಲ್ಲಿ ಯಾರಿಗಾದರೂ ಅಸಂತೃಪ್ತಿಯಾದರೆ—"

"ಇದು ಅಸಂತೃಪ್ತಿಯ ಮಾತಲ್ಲ ಹ್ಯಾರಿಸ್ ಸಾಹೇಬರೆ. ನನ್ನ ಹಕ್ಕಿನ ವಿಚಾರ. ಇಲ್ಲಿನ ಸಂದರ್ಭಗಳನ್ನೆಲ್ಲಾ ನೋಡಿದರೆ, ಮಂಡಲಿ, ತನಗೆ ತಿಳಿದೋ ತಿಳಿಯದೆಯೋ – ನನ್ನ ಹಕ್ಕನ್ನು ಬದಿಗೊತ್ತುವ ಪ್ರಯತ್ನ ಮಾಡುತ್ತಿದೆಯೆಂದು ನನಗೆ ತೋರುತ್ತದೆ. ಆದ್ದರಿಂದ ನನ್ನ ಹಕ್ಕನ್ನು ಸ್ಥಾಪಿಸುವುದಕ್ಕಾಗಿ ನಾನು ಹೋರಾಡಿದರೆ—"

"ನನ್ನ ಅಭ್ಯಂತರವೇನೂ ಇಲ್ಲ. ನಿಮ್ಮ ಯಾವ ಹಕ್ಕಿಗೆ ಧಕ್ಕೆ ಬಂದಿದೆ ತಿಳಿಸಿ. ನಿಮ್ಮ ವಾದವೇನು ಹೇಳಿ. ನೋಡೋಣ. ಅವನ್ನು ಪರಿಶೀಲಿಸೋಣ."

"ಕಂಪನಿ ಸರ್ಕಾರದೊಡನೆ ಮಹಾರಾಣಿಯವರ ಪ್ರತಿನಿಧಿಯಾಗಿ ವ್ಯವಹಾರ ಮಾಡಲು ಸನ್ನಿಧಾನದವರು ನನ್ನನ್ನು ನಿಯಮಿಸಿಕೊಂಡಾಗ, ನನಗೂ ಅವರಿಗೂ ಒಪ್ಪಂದವಾಗಿತ್ತು."

"ಏನೆಂದು ?"

"ಯದುವಂಶಕ್ಕೆ ಮತ್ತೆ ರಾಜ್ಯಾಧಿಕಾರ ದೊರೆತರೆ, ಆನುವಂಶಿಕವಾದ ಪ್ರಧಾನತ್ವ ನನಗೆ ಸಲ್ಲಬೇಕು – ಎಂದು."

"ಮಂಡಲಿಗೆ ಆ ಅಂಶ ಗೊತ್ತಿದೆ ತಿರುಮಲರಾವ್. ಒಂದು ಗುಪ್ತವಾದ ವಿಚಾರ ನಿಮ್ಮಲ್ಲಿ ನಾನು ಹೇಳಬಹುದಾದರೆ – ಮಂಡಲಿ ಆ ಅಂಶವನ್ನು ಕುರಿತು ದೀರ್ಘವಾಗಿ ಚರ್ಚೆ ಮಾಡಿದೆ."

"ಈ ವಿಚಾರ ತಿಳಿದು ನನಗೆ ತುಂಬ ಸಂತೋಷವಾಯಿತು. ಮಂಡಲಿ ನನ್ನ ಈ ಹಕ್ಕನ್ನು ಒಪ್ಪಿದ ಮೇಲೆ, ನಾನು ಮಹಾರಾಣಿಯವರನ್ನು ಕಂಡು ಮಾತನಾಡುವುದಕ್ಕೆ ಅಡಚಣೆಯೇನು ?"

"ಒಪ್ಪಿದ್ದರೆ ಖಂಡಿತ ಅಡಚಣೆಯಿರುತ್ತಿರಲಿಲ್ಲ."

"ಅಂದರೆ – ಮಂಡಲಿ ನನ್ನ ಈ ಹಕ್ಕನ್ನು ನಿರಾಕರಿಸಿದೆಯೇನು ?"

"ಹಾಗೆಂದು ಇಟ್ಟುಕೊಳ್ಳಿ."

"ಹಾಗಾದರೆ ಅದೇ ನನಗಾಗಿರುವ ಅನ್ಯಾಯ. ಈ ವಿಚಾರ ಸ್ವಯಂ ಸ್ಪಷ್ಟ. ತಾವು ನನ್ನನ್ನು ಅಪಾರ್ಥಮಾಡಿಕೊಳ್ಳದಿದ್ದರೆ ನಾನು ತಮ್ಮನ್ನೊಂದು ಪ್ರಶ್ನೆ ಕೇಳಲೆ ?"

"ಕೇಳಿ ತಿರುಮಲರಾವ್."

"ಒಪ್ಪಂದವಾದದ್ದು ನನ್ನ ಮತ್ತು ಮಹಾರಾಣಿಯವರ ನಡುವೆ."

"ಹೌದು; ಅಂದಿನ ಸಂದರ್ಭದಲ್ಲಿ."

"ಈ ಒಪ್ಪಂದದಿಂದ ನನಗೆ ದೊರೆತಿರುವ ಹಕ್ಕನ್ನು ನಿರಾಕರಿಸಲು ಮಂಡಲಿಗೆ ಇರುವ ಅಧಿಕಾರ ಯಾವುದು – ನನಗೆ ಅರ್ಥವಾಗುತ್ತಿಲ್ಲ."

"ಈ ವಿಚಾರ ನಾನು ವಿವರಣೆ ಕೊಡಬಲ್ಲೆ. ನನ್ನ ಮಾತನ್ನು ಕೇಳಿ: – ನಾವು ಟಿಪ್ಪೂಸುಲ್ತಾನನ ಮೇಲೆ ಯುದ್ಧಮಾಡಿ ವಿಜಯಿಗಳಾದ ಕಾರಣದಿಂದ, ಅವನ ರಾಜ್ಯ ನಮ್ಮ ಹಸ್ತಗತವಾಯಿತು. ಅಂದರೆ ನಮ್ಮ ಅಧಿಕಾರವ್ಯಾಪ್ತಿಗೊಳಗಾಯಿತು. – ಈ ಅಂಶ ಒಪ್ಪಿಕೊಳ್ಳುತ್ತೀರಿ ತಾನೆ."

"ವಾದಾರ್ಥವಾಗಿ ಒಪ್ಪಿಕೊಳ್ಳೋಣ."

"ತಾವು ಗೆದ್ದು ಸ್ವಾಧೀನಪಡಿಸಿಕೊಂಡಿರುವ ರಾಜ್ಯವನ್ನು ತಮಗೆ ಸರಿ ತೋರಿದ ನಿಯಮಗಳನ್ನನುಸರಿಸಿ ವ್ಯವಸ್ಥೆಮಾಡುವುದಕ್ಕೆ ಕಂಪನಿ ಸರ್ಕಾರಕ್ಕೆ ಅಧಿಕಾರವಿದೆ ತಾನೆ ?"

"ಇದೆ ಎಂದು ಒಪ್ಪಿಕೊಂಡರೂ, ಕಂಪನಿಯವರು ವಿಜಯ ಗಳಿಸುವುದಕ್ಕೆ ಮುಂಚೆ ಆಗಿರುವ ಒಪ್ಪಂದಗಳನ್ನು ಅವರು ಗೌರವಿಸಬೇಕು ತಾನೆ ?"

"ಗೌರವಿಸಬೇಕು."

"ಹಾಗಾದರೆ ನನ್ನ ಹಕ್ಕನ್ನು ಮಂಡಲಿ ಏಕೆ ನಿರಾಕರಿಸಿತು ?"

"ನಿಮ್ಮ ಹಕ್ಕನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಹಕ್ಕು ಅವರಿಗಿದ್ದರಿಂದ."

"ನಿಮ್ಮ ವಾದ ಪರಸ್ಪರ ವಿರುದ್ಧವಾಗಿದೆ ಹ್ಯಾರಿಸ್ ಸಾಹೇಬರೆ."

"ಹಾಗೇನಿಲ್ಲ. ನೀವು ನನ್ನ ಮಾತನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ ಅಷ್ಟೆ! – ವಿವರಿಸಿ ಹೇಳುತ್ತೇನೆ ಕೇಳಿ : ನಿಮ್ಮ ಒಪ್ಪಂದವಾದದ್ದು ರಾಣೀ ಸಾಹಿಬಾರವರೊಡನೆ."

"ಹೌದು."

"ಆದ್ದರಿಂದ ನಾವು ಅದರ ನಿಯಮಗಳಿಗೆ ಬದ್ಧರಲ್ಲ."

"ಸರಿ. ನಾನು ಮಹಾರಾಣಿಯವರನ್ನು ನೋಡಲು ಅವಕಾಶ ಕೊಡಿ. ಈ ವಿಚಾರ ನಾನು ಅವರಲ್ಲಿ ಇತ್ಯರ್ಥಮಾಡಿಕೊಳ್ಳುತ್ತೇನೆ."

"ಅದು ಸಾಧ್ಯವಿಲ್ಲ."

"ಏಕೆ ?"

"ಯದುವಂಶದ ಅರಸುಮನೆತನಕ್ಕೆ ಟಿಪ್ಪೂಸುಲ್ತಾನನ ರಾಜ್ಯದ ಒಂದು ಭಾಗವನ್ನು ವಹಿಸಿಕೊಡುವಾಗ ಕಲ್ಪಿಸಿದ ನಿಯಮಗಳಲ್ಲಿ ಯಾರನ್ನು ಸಂಸ್ಥಾನದ ಪ್ರಧಾನರನ್ನಾಗಿ ನಿಯಮಿಸಬೇಕು ಎಂಬ ಅಂಶವೂ ಅಡಕವಾಗಿದೆ."

"ಇದೆಲ್ಲ ನನ್ನ ವಿರೋಧಿಗಳು ನನ್ನ ವಿರುದ್ಧವಾಗಿ ನಡೆಸಿರುವ ತಂತ್ರದ ಪರಿಣಾಮ ಎಂದೆನಿಸುತ್ತದೆ.—"

"ಅಂಥ ತಪ್ಪು ಯೋಚನೆ ಮಾಡಬೇಡಿ ತಿರುಮಲರಾವ್. ನಿಮ್ಮ ಮೇಲೆ ಯಾರಿಗೂ ದ್ವೇಷವಿಲ್ಲ. ನಿಮ್ಮ ವಿರುದ್ಧ ಯಾವ ತಂತ್ರವೂ ನಡೆದಿಲ್ಲ. ಹಿಂದಿನ ಒಪ್ಪಂದದ ಮಾತು ಬಿಡಿ. ಮಂಡಲಿ, ಇಂದಿನ ಪರಿಸ್ಥಿತಿಯನ್ನೂ ರಾಜಮನೆತನದ ಮುಂದಿನ ಹಿತವನ್ನೂ ಗಮನದಲ್ಲಿಟ್ಟುಕೊಂಡು ಆ ನಿರ್ಣಯಕ್ಕೆ ಬಂದಿದೆ. ನೀವು ತಿಳಿಸಿದ ಒಪ್ಪಂದದ ವಿಚಾರವನ್ನೂ, ನಿಮ್ಮನ್ನು ಇಂದಿನ ಸ್ಥಿತಿಯಲ್ಲಿ ಪ್ರಧಾನಿಗಳಾಗಿ ನಿಯಮಿಸುವುದರ ಬಲಾ ಬಲಗಳನ್ನೂ ವಿವರವಾಗಿ ಚರ್ಚಿಸಿ ಆ ನಿರ್ಣಯಕ್ಕೆ ಬಂದಿದೆ."

"ಹಾಗಾದರೆ ತಾವು ನಿಯಮಿಸಿರುವ ಪ್ರಧಾನರು ನನಗಿಂತ ಎಲ್ಲ ವಿಧದಲ್ಲೂ ಉತ್ತಮರು ಎಂದು ಮಂಡಲಿಯ ಅಭಿಪ್ರಾಯವೇನು ?"

"ತಾವು ಕೋಪಮಾಡಿಕೊಳ್ಳುತ್ತಿದ್ದೀರಿ ತಿರುಮಲರಾವ್. ಇದು ನೀವು, ನಿಮಗಿಂತ ಉತ್ತಮರು, ಅಧಮರು, ಎನ್ನುವ ಪ್ರಶ್ನೆಯಲ್ಲ. ಇಂದಿನ ಸ್ಥಿತಿಯಲ್ಲಿ ಯಾರಿಗೆ ಈ ಕೆಲಸವನ್ನು ವಹಿಸಿದರೆ ಎಲ್ಲ ದೃಷ್ಟಿಯಿಂದಲೂ ಒಳ್ಳೆಯದು ಎಂಬ ಪ್ರಶ್ನೆ."

"ನಾನು ಕೋಪ ಮಾಡಿಕೊಳ್ಳುತ್ತಿಲ್ಲ ಹ್ಯಾರಿಸ್ ಸಾಹೇಬರೆ. ಯಾವ ದೋಷಕ್ಕಾಗಿ ನನ್ನನ್ನು ನಿರಾಕರಿಸಿದರು ಎಂಬುದನ್ನು—"

"ಸುಮ್ಮನೆ ಭಾವಪರವಶರಾಗಬೇಡಿ. ನನ್ನ ಮಾತು ಕೇಳಿ. ನೀವು ಮೈಸೂರು ರಾಜವಂಶಕ್ಕೆ ಮಹತ್ತರವಾದ ಸೇವೆ ಸಲ್ಲಿಸಿದ್ದೀರಿ. ದೀರ್ಘಕಾಲದಿಂದ ಕಂಪನಿ ಸರ್ಕಾರದೊಡನೆ ವ್ಯವಹರಿಸಿ, ಕಂಪನಿ ಸರ್ಕಾರದವರ ನಿಕಟ ಸಂಬಂಧ ವನ್ನು ಪಡೆದಿದ್ದೀರಿ. ಹೀಗಿದ್ದೂ ಬೇರೆಯವರನ್ನು ರಾಜರ ಪ್ರಧಾನರನ್ನಾಗಿ ನಿಯಮಿಸಲು ಕಂಪನಿ ಸರ್ಕಾರ ನಿರ್ಧರಿಸಿತೆಂದಮೇಲೆ ಬಲವಾದ ಕಾರಣವಿಲ್ಲದೆ ಹಾಗೆ ಮಾಡೀತೇನು ?"

"ಕಾರಣಗಳಿದ್ದೀತು! ಆದರೆ ಅವು ಸಮರ್ಪಕವೇ ತಿಳಿದು ನೋಡ ಬೇಕಾಗಿದೆ ಅಷ್ಟೆ."

"ನಿಮ್ಮ ಅಸಂತೃಪ್ತಿ ಇನ್ನೂ ಶಾಂತವಾಗಿಲ್ಲ. ಅದು ನಿಮಗಾಗಿರುವ ಆಶಾಭಂಗದ ಪರಿಣಾಮವಿದ್ದೀತು – ನಿಮ್ಮ ಮನಸ್ಸಿನ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಲ್ಲೆ. ನಾನು ಕಾರಣಗಳನ್ನು ತಿಳಿಸುತ್ತೇನೆ. ಅವನ್ನು ನಿರ್ವಿಕಾರ ವಾಗಿ ಪರಿಶೀಲಿಸಿ: ಇಂದಿನ ಕಠಿನ ಪರಿಸ್ಥಿತಿಯಲ್ಲಿ ರಾಜ್ಯದ ಆಡಳಿತವನ್ನು ನಿರ್ವಹಿಸಬೇಕಾದರೆ, ಹಿಂದಿನಿಂದ ಈ ರಾಜ್ಯದ ಆಡಳಿತ ನೋಡಿಕೊಳ್ಳುತ್ತಿದ್ದು – ಅನುಭವವಿದ್ದವರಾದರೆ ಉತ್ತಮವಲ್ಲವೆ, ನೀವೇ ಹೇಳಿ. ನೀವು ಈ ಸೀಮೆ ಬಿಟ್ಟು ಮೂವತ್ತು ವರ್ಷವಾಗಿದೆ. ರಾಜರು ಬಾಲಕರು. ಮಹಾರಾಣಿಯವರು ತುಂಬ ಮೇಧಾವಿಗಳಾದರೂ ದಿನದಿನದ ರಾಜ್ಯಾಡಳಿತದ ವಿಚಾರದಲ್ಲಿ ತಾವೇ ಪ್ರವೇಶಿಸಿ ಕೆಲಸ ಮಾಡುವುದು ಸಾಧ್ಯವಾಗದ ಮಾತು. ಆದ್ದರಿಂದ ಇಂದಿನ ಸ್ಥಿತಿಗತಿಗಳನ್ನೂ ರಾಜ್ಯಾಡಳಿತದ ವಿವರಗಳನ್ನೂ ಬಲ್ಲ ಅನುಭವಿ ರಾಜ್ಯದ ಪ್ರಧಾನರಾಗಿರುವುದು ಎಲ್ಲ ದೃಷ್ಟಿಗಳಿಂದಲೂ ಸಮರ್ಪಕವೆಂದು ಭಾವಿಸಿ, ಆ ಭಾವನೆಯ ಆಧಾರದ ಮೇಲೆ ಮಂಡಲಿ ನಿರ್ಣಯವನ್ನು ಕೈಗೊಂಡಿತು."

"ರಾಜ್ಯದ ಆಡಳಿತವನ್ನು ವಹಿಸಿಕೊಳ್ಳುವ ಶಕ್ತಿ ನನಗಿದೆಯೋ ಇಲ್ಲವೋ ರಾಣಿಯವರೇ ನಿರ್ಣಯಿಸಲಿ. ನಾನು ಅವರನ್ನು ನೋಡುವ ಅವಕಾಶ ಕೊಡಿ."

"ನಾನಾಗಲೇ ಹೇಳಿದೆನಲ್ಲ ತಿರುಮಲರಾವ್. ರಾಣಿಯವರನ್ನು ನೀವು ನೋಡಿ ಪ್ರಯೋಜನವಿಲ್ಲ. ಈ ವಿಚಾರದಲ್ಲಿ ಅವರು ಸ್ವತಂತ್ರರಲ್ಲ. ಬೇಕಾದರೆ ಮಂಡಲಿಯವರನ್ನು ನೋಡಿ. ಇಂದು ಹನ್ನೊಂದು ಗಂಟೆಗೆ ಸಭೆ ಸೇರಲಿದೆ."

"ಅವರು ಹೇಳಬಹುದಾದದ್ದನ್ನೆಲ್ಲಾ ನೀವೆ ಹೇಳಿ ಮುಗಿಸಿದ್ದೀರಲ್ಲ!"

"ಮುಗಿಸಿಲ್ಲ ತಿರುಮಲರಾವ್. ನಿಮ್ಮ ಭವಿಷ್ಯದ ವಿಚಾರವಾಗಿ ಮಂಡಲಿ ಕೆಲವು ನಿರ್ಧಾರಗಳನ್ನು ಮಾಡಿದೆ. ಅವನ್ನು ಅವರು ನಿಮಗೆ ತಿಳಿಸಬಹುದು."

"ಅದೇನೇಯಿರಲಿ. ನಾನು ಸಲಹೆಗಾರ ಮಂಡಲಿಯವರನ್ನು ನೋಡಲು ಅಪೇಕ್ಷಿಸುತ್ತೇನೆ."

"ಒಳ್ಳೆಯದು. ನಾನು ಕ್ಯಾಪ್ಟನ್ ಮನ್ರೋ ಅವರಿಗೆ ಈ ವಿಚಾರ ತಿಳಿಸಿ, ನಿಮ್ಮ ಭೇಟಿಗೆ ವ್ಯವಸ್ಥೆಮಾಡುತ್ತೇನೆ. ಆಗಬಹುದಲ್ಲ."

"ಆಗಬಹುದು. ಈ ಅನುಕೂಲ ಕಲ್ಪಿಸಿದ್ದಕ್ಕಾಗಿ ನಾನು ನಿಮಗೆ ಋಣಿ."

"ನೀವು ಹಾಗೆ ಭಾವಿಸುವುದಾದರೆ ನನಗೆ ತುಂಬಾ ಸಂತೋಷ."

§

"ಈಗತಾನೆ ಮೈಸೂರಿನಿಂದ ಬಂದೆ. ಬಂದವನೆ ನೇರವಾಗಿ ಸನ್ನಿಧಾನಕ್ಕೆ ಬಂದೆ. ದೊರೆಗಳ ಪಟ್ಟಾಭಿಷೇಕ ನಾಡಿದ್ದು ನಡೆಯ ತಕ್ಕದ್ದೆಂದು ನಿರ್ಣಯ ವಾಗಿತ್ತಲ್ಲ. ಜೋಯಿಸರು ಮುಹೂರ್ತ ಕಟ್ಟಿ ಆಗಿದ್ದರೆ ಆ ಅಂಶ ಸೇನಾಪತಿ ಗಳಿಗೂ, ಮಂಡಲಿಯವರಿಗೂ ತಿಳಿಸಬೇಕು.—"

"ದಾಸರೆ, ಮುಹೂರ್ತದ ವಿವರಗಳನ್ನೆಲ್ಲಾ ಪೂರ್ಣಯ್ಯನವರಿಗೆ ತಿಳಿಸಿ."

"ನಾಡಿದ್ದು ಜೇಷ್ಠ ಬಹುಳ ತ್ರಯೋದಶಿ ಆಗುತ್ತದೆ. ಅಂದು ರೋಹಿಣಿ ನಕ್ಷತ್ರದಲ್ಲಿ ದಿವಿ ಹದಿನೈದು ಗಳಿಗೆಗೆ ಸಲ್ಲುವ ಶುಭ ಕನ್ಯಾ ಲಗ್ನ ಪ್ರಶಸ್ಥವಾಗಿದೆ. ಶ್ರೀನಿವಾಸಾಚಾರ್ಯರೂ ಇದಕ್ಕೆ ಒಪ್ಪಿದ್ದಾರೆ."

"ಈ ವಿಚಾರ ಇಂಗ್ಲಿಷ್ ಸರದಾರರಿಗೆ ತಿಳಿಸಿಬಿಡಿ ಪೂರ್ಣಯ್ಯನವರೆ. ಇವಲ್ಲದೆ ಪಟ್ಟಾಭಿಷೇಕ ಮಹೋತ್ಸವಕ್ಕೆ ಮೈಸೂರಿಗೆ ಬರುವಂತೆ ಯಾರು ಯಾರನ್ನು ಆಹ್ವಾನಿಸಬೇಕೋ ಅವರನ್ನೆಲ್ಲಾ ಕರೆಯುವ ವ್ಯವಸ್ಥೆಮಾಡಿ. ಈ ವಿಚಾರದಲ್ಲಿ ಯಾವ ಭೇದಭಾವನೆ ಮಾಡುವುದೂ ಬೇಡ. ನಮಗೆ ಎಲ್ಲ ಜನರ

ಪ್ರೀತಿವಿಶ್ವಾಸಗಳೂ ಬೇಕು. ಹಿಂದೆ ನಿಮ್ಮ ಜೊತೆಯಲ್ಲಿ ಮಂತ್ರಿಯಾಗಿದ್ದನಲ್ಲ ಆತ—"

"ಯಾರು ತಾಯಿ ?"

"ದಿವಾನ, ಆತನನ್ನೂ ಕೇಳಿನೋಡಿ—"

"ಯಾರು ? ಮೀರ್ ಸಾದಕ್ ಸಾಹೇಬರನ್ನೆ ?"

"ಹೌದು."

"ಅವರು ಹೋರಾಟದಲ್ಲಿ ದೈವಾಧೀನರಾದರು."

"ಹಾಗೇನು ? – ತಿಳಿದಿರಲಿಲ್ಲ. ಆ ಇನ್ನೊಬ್ಬ ಹುಡುಗ. – ನಮ್ಮ ಕಾವಲು ವ್ಯವಸ್ಥೆ ನೋಡಿಕೊಂಡು—"

"ನಾದಿವರ್. – ಅವನಿಗೂ ಅದೇ ಗತಿಯಾಯಿತು ತಾಯಿ."

"ಪಾಪ ! – ಸರಿ. ಶ್ರೀರಂಗಪಟ್ಟಣದಲ್ಲಿ, ಮೈಸೂರಿನಲ್ಲಿ ಪ್ರಮುಖರಾದವರನ್ನೆಲ್ಲಾ ಕರೆದುಬಿಡಿ."

"ಪ್ರಕೃತ ಇಲ್ಲಿ, ಮೈಸೂರಿನಲ್ಲಿ ಇರುವವರನ್ನೆಲ್ಲಾ ಕರೆಸುವ ಏರ್ಪಾಟು ಮಾಡುತ್ತೇನೆ ತಾಯಿ."

"ಇನ್ನು, ಮೈಸೂರು ವಿಚಾರ ಏನು ?"

"ಸನ್ನಿಧಾನದವರು ಅಪ್ಪಣೆ ಕೊಡಿಸಿದಂತೆ ಆ ಶುಭಕಾರ್ಯ ಹಳೆ ಕೋಟೆಯ ಪ್ರದೇಶದಲ್ಲೇ ನಡೆಯುತ್ತದೆ. ಕಾಡು ಬಸವನ ತಿಟ್ಟಿನಲ್ಲಿ ನಜರ್ ಬಾದ್ ಕೋಟೆ ಕಟ್ಟಿಸುವ ಉದ್ದೇಶದಿಂದ ಹಿಂದಿನ ಆಡಳಿತದ ಕಾಲದಲ್ಲಿ ಹಳೆ ಕೋಟೆಯನ್ನೂ ಅಲ್ಲಿದ್ದ ಎಲ್ಲ ವಾಸದ ಕಟ್ಟಡಗಳನ್ನೂ ಒಡೆಸಿಬಿಟ್ಟಿದ್ದರಿಂದ ಪಟ್ಟಾಭಿಷೇಕಕ್ಕೆಂದೇ ಒಂದು ಹೊಸ ಮಂಟಪವನ್ನು ನಿರ್ಮಿಸಬೇಕಾಯಿತು."

"ಮಂಟಪ ಎಲ್ಲಿ ಹಾಕಿಸಿದ್ದೀರಿ ?"

"ಈ ಶುಭಕಾರ್ಯ ಲಕ್ಷ್ಮೀರಮಣಸ್ವಾಮಿಯ ಸನ್ನಿಧಿಯಲ್ಲಿ ನಡೆಯುವುದು ಶ್ರೇಯಸ್ಕರವೆಂದು ಆ ದೇವಸ್ಥಾನದೆಡೆಯಲ್ಲೇ ಮಂಟಪ ನಿರ್ಮಿಸಲಾಗಿದೆ."

"ಸಂತೋಷ."

"ಸನ್ನಿಧಾನದ ಬಿಡಾರಕ್ಕೆ ಯೋಗ್ಯವಾದ ಸ್ಥಳ ಕೋಟೆಯಲ್ಲಿ ಯಾವುದೂ ದೊರೆಯಲಿಲ್ಲವಾಗಿ, ನಜರ್‌ಬಾದ್‌ನ ಒಂದು ಮಹಲಿನಲ್ಲಿ ವ್ಯವಸ್ಥೆಮಾಡಿದ್ದೇನೆ."

"ಖಾಸಾಸವಾರಿ ಅಲ್ಲಿಂದ ಪಟ್ಟಾಭಿಷೇಕ ಮಂಟಪಕ್ಕೆ ಬಿಜಯ ಮಾಡಿಸಬೇಕು ಅನ್ನಿ."

"ಹೌದು ತಾಯಿ."

"ಈ ಮೆರವಣಿಗೆ ಪೂರ್ವಪದ್ಧತಿಗಳಿಗನುಸಾರವಾಗಿ, ಸಮಸ್ತ ರಾಜ ಮರ್ಯಾದೆಗಳೊಡನೆ ತುಂಬ ವೈಭವದಿಂದ ನಡೆಯತಕ್ಕದ್ದು."

"ಅದೇ ರೀತಿ ವ್ಯವಸ್ಥೆ ಮಾಡುತ್ತೇನೆ ತಾಯಿ."

"ಪೂರ್ಣಯ್ಯನವರೆ, ನಾನು ಹೇಳಿದ್ದ ಆ ವಿಚಾರ ಏನಾಯಿತು ?"

"ಸಿಂಹಾಸನ ಸಿಕ್ಕಿತು ತಾಯಿ. ಅದನ್ನು ಸರಿಪಡಿಸಿ ಶುಚಿಗೊಳಿಸಿ, ಕೌಳುಡೆಗಳನ್ನು ಜೋಡಿಸುವಂತೆ ವ್ಯವಸ್ಥೆ ಮಾಡಿದ್ದೇನೆ. ಈ ಕೆಲಸ ಆದಮೇಲೆ ನಾನೇ ನೋಡಿ, ಎಲ್ಲ ಸಮರ್ಪಕವಾಗಿದೆಯೆಂದು ಗಟ್ಟಿಮಾಡಿಕೊಂಡು ಅನಂತರ ಅದನ್ನು ಮೈಸೂರಿಗೆ ಕಳುಹಿಸಿಕೊಡುತ್ತೇನೆ. ಅಲ್ಲಿ ಪಟ್ಟಾಭಿಷೇಕಕ್ಕೆ ಮುಂಚೆ, ಅದನ್ನು ಆಭರಣಗಳಿಂದ ಅಲಂಕರಿಸಬಹುದು."

"ಇನ್ನು ಇಲ್ಲಿಂದ ಪ್ರಯಾಣ ಮಾಡುವ ಮಾತು."

"ಪರಿವಾರದವರು, ಊಳಿಗದವರು, ಇತರ ಕೆಲಸದವರು – ಇವರೆಲ್ಲರೂ ಇನ್ನು ಸ್ವಲ್ಪ ಹೊತ್ತಿನಲ್ಲಿ ಇಲ್ಲಿಂದ ಹೊರಟು, ಅಲ್ಲಿ ಸನ್ನಿಧಾನವನ್ನು ನಿರೀಕ್ಷಿಸುತ್ತಿರುತ್ತಾರೆ."

"ಸರಿ."

"ಸನ್ನಿಧಾನ, ಬಿಸಿಲು ತಗ್ಗಿದ ಮೇಲೆ ಹೊರಡಬಹುದು. ಸನ್ನಿಧಾನದ ಪ್ರಯಾಣಕ್ಕೆ ಒಂದು ಶುಭ ಲಗ್ನ ಗೊತ್ತುಪಡಿಸಿ ದಾಸರೆ."

"ಗೊತ್ತು ಮಾಡಿಸಿ ನಮಗೆ ತಿಳಿಸಿ. ಅನಂತರ ಅದನ್ನು ಪೂರ್ಣಯ್ಯನವರಿಗೆ ತಿಳಿಸೋಣ. ಅವರು ಆವಶ್ಯಕವಾದ ವ್ಯವಸ್ಥೆಗಳನ್ನು ಮಾಡಲಿ."

"ಸನ್ನಿಧಾನದ ಅಪ್ಪಣೆ ಆದಂತೆ. – ನಂಜರಾಜಯ್ಯ, ಪೂರ್ಣಯ್ಯನವರಿಗೆ ವೀಳಯ ಕೊಡಿಸಿ."

ಪೂರ್ಣಯ್ಯನವರು ವೀಳಯವನ್ನು ತೆಗೆದುಕೊಂಡು ಮಹಾಮಾತೃಶ್ರೀಯವರಿಗೆ ನಮಸ್ಕರಿಸಿ ಹೊರಟುಹೋದರು. ಸನ್ನಿಧಾನದವರು ದಾಸರ ಕಡೆಗೆ ತಿರುಗಿ :

"ಶ್ರೀನಿವಾಸಾಚಾರ್ಯರನ್ನು ಕಂಡು ಪ್ರಯಾಣ ಲಗ್ನ ನಿರ್ಧರಿಸಿಬಿಡಿ. ಇಲ್ಲಿಂದ ತೀರಾ ಹೊತ್ತಾಗಿ ಹೊರಡುವುದು ಬೇಡ. ಕಣ್ಣು ಬೆಳಕಿದ್ದಾಗಲೇ ಮೈಸೂರು ಸೇರುವಂತೆ ಹೊರಡೋಣ."

"ಅಪ್ಪಣೆ' ಎಂದು ದಾಸರು ಹೊರಟುಹೋದರು.

ಮಹಾಮಾತೃಶ್ರೀಯವರು ನಂಜರಾಜಯ್ಯನವರ ಕಡೆಗೆ ತಿರುಗಿ ಹೇಳಿದರು:

"ಇನ್ನೊಂದು ಗಳಿಗೆ ಬಿಟ್ಟುಕೊಂಡು ದಾಸರಲ್ಲಿಗೆ ಹೋಗಿ ಪ್ರಯಾಣದ ಲಗ್ನ ತಿಳಿದುಕೊಂಡು ಬನ್ನಿ. ಅದನ್ನು ತಿಳಿಸಲು ಪೂರ್ಣಯ್ಯನಲ್ಲಿಗೆ ಹೋದಾಗ, — ಮಹಾರಾಜರ ಸವಾರಿ ಮೈಸೂರಿಗೆ ದಯಮಾಡಿಸಿದಾಗ, ಪುರಪ್ರಮುಖರು ಅವರನ್ನು ಇಸ್ತಕಪಾಲಿನ ಸ್ಥಳದಲ್ಲಿ ಕನ್ನಡಿ ಕಳಶ, ಪೂರ್ಣಕುಂಭ, ವೇದ ಘೋಷಾದಿ ಸಮಸ್ತ ರಾಜಮರ್ಯಾದೆಗಳೊಡನೆ ಇದಿರ್ಗೊಂಡು ನಜರು ಮುಜರೆ ಮಾಡತಕ್ಕದ್ದು ಪೂರ್ವ ಪದ್ಧತಿಯಾದ್ದರಿಂದ ಇದು ಅವಶ್ಯಕವೆಂದೂ ನಡೆಯಲೇ ಬೇಕಾದದ್ದು ಎಂದೂ – ಇದಕ್ಕೆ ತಕ್ಕ ವ್ಯವಸ್ಥೆ ಮಾಡತಕ್ಕದ್ದು ಎಂದೂ ತಿಳಿಸಿ."

"ಅಪ್ಪಣೆ."

"ನೀವೂ, ನಿಮ್ಮ ಕುಟುಂಬದವರೂ ನಮ್ಮ ಜೊತೆಯಲ್ಲಿಯೇ ಪ್ರಯಾಣ ಮಾಡಬೇಕು ನಂಜರಾಜಯ್ಯ. ನಮಗೆ ಮತ್ತು ನಮ್ಮೊಡನೆ ಬರತಕ್ಕವರಿಗೆ ಏನೇನು ವಾಹನ ವ್ಯವಸ್ಥೆ ಬೇಕಾಗುತ್ತದೆ ಯೋಚಿಸಿ ನೋಡಿ ಅದನ್ನೂ ಪೂರ್ಣಯ್ಯನಿಗೆ ತಿಳಿಸಿ."

"ಅಪ್ಪಣೆ."

"ದಾಸರನ್ನು ಕಂಡು ಮುಂದಿನ ಕೆಲಸ ಮಾಡಿ. ನಾವು ಕೆಳತೊಟ್ಟಿಯ ಸಜ್ಜೆಯಲ್ಲಿರುತ್ತೇವೆ."

"ಅಪ್ಪಣೆ."

§

"ಇವತ್ತು ನಾಳೆ ನೀವು, ಶ್ರೀನಿವಾಸಾಚಾರ್ಯರು ನಮ್ಮ ಬಿಡಾರದಲ್ಲೇ ಇರಬೇಕು. ಇಲ್ಲಿಂದ ಕದಲಕೂಡದು, ದಾಸರೆ."

"ಸನ್ನಿಧಾನದ ಅಪ್ಪಣೆ ಆದಂತೆ."

"ನಾಳೆ ನಡೆಯುವ ಪಟ್ಟಾಭಿಷೇಕದ ಅಂಗವಾಗಿ ಇವತ್ತು ನಡೆಯ ಬೇಕಾದ ಕೆಲಸಗಳು ಬೇಕಾದಷ್ಟಿವೆ. ಸುವಾಸಿನಿಯರು ದೊರೆಗಳಿಗೆ ಮಂಗಳ ಸ್ನಾನ ಮಾಡಿಸಬೇಕು. ದೇವಸ್ಥಾನಗಳಿಗೆ ಪೂಜಾದ್ರವ್ಯಗಳು ಹೋಗಬೇಕು. ಮನೆ ದೇವರುಗಳ ಪೂಜೆ ಪುನಸ್ಕಾರ, ಪ್ರಾರ್ಥನೆ ಕಪ್ಪಕಾಣಿಕೆ ಕಟ್ಟುವುದು – ಎಷ್ಟೋ ಕೆಲಸಗಳಿವೆ. ಪುರೋಹಿತರು, ಸುವಾಸಿನಿಯರು ಬರುವುದು ಎಷ್ಟು ಹೊತ್ತಿಗೆ? ತಡಮಾಡದೆ ಬರಬೇಕೆಂದು ತಿಳಿಸಿದ್ದೀರಿ ತಾನೆ."

"ಇನ್ನೇನು ಬರುವ ಹೊತ್ತಾಯಿತು. ಪಾಪ, ಅವರೂ ಬೆಳಗ್ಗೆ ಎದ್ದು ಸ್ನಾನಮಾಡಿ ಒಂದು ಹರಿದಾರಿ ನಡೆದು ಬರಬೇಕಲ್ಲ, ಸುಬೇದಾರ ವೀರಣ್ಣನ ತೋಟದ ಹತ್ತಿರದಿಂದ. ಕೋಟೆಯಲ್ಲಿದ್ದ ಮನೆಗಳನ್ನೆಲ್ಲಾ ಒಡೆದು ಹಾಕಿದ ಮೇಲೆ ಆ 'ನವಾಷಹರ್'ನಲ್ಲಿ ತಾನೇ ಅವರ ವಾಸ."

"ಹೊತ್ತಿಗೆ ಸರಿಯಾಗಿ ಬಂದರೆ ಸರಿ. ಇಲ್ಲದಿದ್ದರೆ ಯಾರಾದರೂ ಹರಿಕಾರರನ್ನು ಕಳಿಸಿಕೊಟ್ಟು ಕರೆಸಿಕೊಳ್ಳಿ. ಈ ಕಲಾಪಗಳೆಲ್ಲಾ ಮುಗಿಯುವವರೆವಿಗೆ ಮಹಾರಾಜರು ಉಪವಾಸವಿರಬೇಕು. ಎಳೆ ಕರುಳು ಅನವಶ್ಯಕವಾಗಿ ಒಣಗಬಾರದು."

"ಆಗಲಿ ತಾಯಿ."

"ನೋಡಿದಿರಾ ದಾಸರೆ! ಮರೆತೇ ಬಿಟ್ಟಿದ್ದೆ. ಆ ಸುದ್ದಿ ನಿಜವೇ ವಿಚಾರಿಸಿದಿರಾ. ನೆನ್ನೆ ಸಂಜೆ ನಾವಿಲ್ಲಿಗೆ ಬಂದೊಡನೆಯೇ ಕೇಳಬೇಕೆಂದಿದ್ದೆ."

"ಸುದ್ದಿ ನಿಜ ತಾಯಿ. ರಾಯರು ಚನ್ನಪುರಿಯಿಂದ ಮೊನ್ನೆ ರಾತ್ರಿಯೇ ಬಂದರಂತೆ."

"ನೆನ್ನೆ ನಮ್ಮನ್ನು ನೋಡಬಹುದಾಗಿತ್ತಲ್ಲ!"

"ನೋಡಬಹುದಾಗಿತ್ತು. ಅವರೂ ಪ್ರಯತ್ನ ಮಾಡಿದರಂತೆ. ಆದರೆ—"

"ಏನಾಯಿತು ?"

"ಸನ್ನಿಧಾನದ ದರ್ಶನ ಮಾಡಲು ಮಂಡಲಿ ಅವರಿಗೆ ಅನುಮತಿ ಕೊಡಲಿಲ್ಲವಂತೆ."

"ಪಟ್ಟಾಭಿಷೇಕಕ್ಕೆ ಬರುವಂತೆ ಒಂದು ಆಹ್ವಾನ ಕಳಿಸೋಣ. ನಾವು ಅವರನ್ನು ಕಾಣಬೇಕು."

"ಸದ್ಯಕ್ಕೆ ಅದು ? ಸಾಧ್ಯವಾದೀತೋ ಇಲ್ಲವೊ ?"

"ಸಾಧ್ಯವಿಲ್ಲದೆ ಏನು ? ಒಡನೆಯೇ ಹರಿಕಾರನೊಬ್ಬನೊಡನೆ ಅವರಿಗೆ ಆಹ್ವಾನ ಕಳಿಸಬೇಕೆಂದು ಪೂರ್ಣಯ್ಯನಿಗೆ ತಿಳಿಸಿ. ಆಹ್ವಾನ ಹೋಗಲಿ. ಅವರು ಬಂದೇ ಬರುತ್ತಾರೆ. ಆಗ ನೋಡೋಣ."

"ಹಾಗೇ ಆಗಲಿ. ಪಟ್ಟಾಭಿಷೇಕ ಕಾಲದಲ್ಲಿ ರಾಯರು ಇಲ್ಲಿರುವುದು ಸಾಧ್ಯವಾದರೆ ನಮ್ಮೆಲ್ಲರಿಗೂ ಸಂತೋಷವೇ ಅಲ್ಲವೆ ? ಸನ್ನಿಧಾನದ ಆಜ್ಞೆಯನ್ನು ಪೂರ್ಣಯ್ಯನವರಿಗೆ ತಿಳಿಸುತ್ತೇನೆ.—ಪುರೋಹಿತರು ಸುವಾಸಿನಿಯರು ಬಂದರೆಂದು ತೋರುತ್ತದೆ. ಕಾರ್ಯಕಲಾಪ ಆರಂಭಮಾಡಿಸುತ್ತೇನೆ."

"ರಾಯರಿಗೆ ಆಹ್ವಾನ."

"ಕಲಾಪ ಆರಂಭವಾದಮೇಲೆ ನಾನೇ ಹೋಗಿ ಪೂರ್ಣಯ್ಯನವರಿಗೆ ತಿಳಿಸುತ್ತೇನೆ ತಾಯಿ."

"ಮರೆಯಬೇಡಿ."

"ಮರತೇನೆ!" ಎನ್ನುತ್ತಾ ದಾಸರು ಹಸೆಯ ಮಣೆ ಹಾಕಿದ್ದ ತೊಟ್ಟಿಗೆ ಓಡಿದರು.

§

"ಚಾಂದ್‌ಬೀಬಿ – ಆ ಸರದಾರರಿಗೆ ಹೇಳು – ಪಟ್ಟಣದಿಂದ ಇಲ್ಲಿಗೆ ಪ್ರಯಾಣ ಮಾಡಿ ನಿಮಗೆ ಆಯಾಸವಾಗಿದ್ದರೂ ಅದನ್ನು ಲಕ್ಷ್ಯಿಸದೆ ಒಡನೆಯೇ ನಮ್ಮನ್ನು ಕಾಣಲು ಬಂದಿದ್ದು ತುಂಬ ಸಂತೋಷ."—ಚಾಂದ್‌ಬೀಬಿ ಮಹಾ ಮಾತೃಶ್ರೀಯವರ ಮಾತನ್ನು ಹಿಂದೂಸ್ಥಾನಿಯಲ್ಲಿ ಭಾಷಾಂತರಿಸಲಾರಂಭಿಸಿದಳು. ಇತ್ತ ಸನ್ನಿಧಾನದವರು ನಂಜರಾಜಯ್ಯನವರ ಕಡೆಗೆ ತಿರುಗಿ ಹೇಳಿದರು :

"ನಂಜರಾಜಯ್ಯ, ಈ ಸರದಾರರು ದಣಿದಿದ್ದಾರೆ. ಷರಬತ್ತೋ, ಎಳೆ ನೀರೋ ಇವರು ಏನು ತೆಗೆದುಕೊಳ್ಳುತ್ತಾರೋ ಅವರ ಪರಿವಾರದವರನ್ನು ವಿಚಾರಿಸಿ, ಅದನ್ನು ಅವರ ಕಯ್ಯಲ್ಲೇ ಇವರಿಗೆ ಕಳಿಸು."

"ಅಪ್ಪಣೆ ತಾಯಿ" ಎಂದು ನಂಜರಾಜಯ್ಯನವರು ಹೊರಟುಹೋದರು. ಮಹಾಮಾತೃಶ್ರೀಯವರು ಸರದಾರರೊಡನೆ ಸಂಭಾಷಣೆ ಮುಂದುವರಿಸಿದರು.

"ನಿಮ್ಮ ನೇತೃತ್ವದಲ್ಲಿ ಪೂರ್ಣಯ್ಯನವರು ನಮ್ಮ ಬಿಡಾರಕ್ಕಾಗಿ, ಮಹಾರಾಜರ ಪಟ್ಟಾಭಿಷೇಕಕ್ಕಾಗಿ ಮಾಡಿರುವ ವ್ಯವಸ್ಥೆ ತುಂಬಾ ಚೆನ್ನಾಗಿದೆ. ಅದಕ್ಕಾಗಿ ನಾವು ನಿಮಗೆ ಕೃತಜ್ಞರಾಗಿದ್ದೇವೆ."

"ನಮ್ಮ ಕರ್ತವ್ಯ ನಿರ್ವಹಣೆ ರಾಣೀಸಾಹಿಬಾರವರ ಮನಸ್ಸಿಗೆ ಮೆಚ್ಚಿಕೆಯಾದದ್ದು ನಮಗೆ ತುಂಬ ಸಂತೋಷ," ಎಂದು ಉತ್ತರ ಕೊಟ್ಟರು ಜನರಲ್ ಹ್ಯಾರಿಸ್. ಚಾಂದ್‌ಬೀಬಿ ಅವರ ಮಾತನ್ನು ಕನ್ನಡದಲ್ಲಿ ಬಿನ್ನವಿಸಿದಳು.

"ಪಟ್ಟಾಭಿಷೇಕಕ್ಕೆ ಪೂರ್ವಭಾವಿಯಾಗಿ ಈ ದಿವಸ ನಡೆಯಬೇಕಾಗಿದ್ದ ಕಾರ್ಯಕಲಾಪಗಳೆಲ್ಲಾ ಈ ಬೆಳಗ್ಗೆ ಸಾಂಗವಾಗಿ ನೆರವೇರಿದುವು. ನಾಳೆಯ ದಿನ ಮಹಾರಾಜರ ಪಟ್ಟಾಭಿಷೇಕ ಮಹೋತ್ಸವವನ್ನು ತಾವು ವಿಜೃಂಭಣೆಯಿಂದ

ನಡೆಸಿಕೊಡಬೇಕು. ಆ ಸಂಬಂಧದಲ್ಲಿ ನಾಳೆ ನಡೆಯಬೇಕಾದ ವೈದಿಕ ಕರ್ಮಗಳನ್ನೆಲ್ಲಾ ನಮ್ಮ ಜನ ನಡೆಸುತ್ತಾರೆ. ಅದಕ್ಕೆಲ್ಲಾ ವ್ಯವಸ್ಥೆ ಮಾಡಿದ್ದೇವೆ."

"ಪಟ್ಟಾಭಿಷೇಕ ತುಂಬ ವಿಜೃಂಭಣೆಯಿಂದ ನಡೆಯಬೇಕೆಂಬುದೇ ನಮ್ಮ ಅಪೇಕ್ಷೆ ಕೂಡ. ಆ ಸಂಬಂಧವಾದ ಎಲ್ಲ ವ್ಯವಸ್ಥೆಗಳನ್ನೂ ನಾನು ಮತ್ತು ಕರ್ನಲ್ ವೆಲ್ಲೆಸ್ಲಿಯವರು ನೋಡಿಕೊಳ್ಳುತ್ತೇವೆ. ಅದಾಯಿತಲ್ಲ. ಇನ್ನು ಕೆಲವು ಮುಖ್ಯವಾದ ವಿಚಾರಗಳನ್ನು ತಮ್ಮಲ್ಲಿ ಮಾತನಾಡುವುದಿದೆ."

"ಆಗಲಿ."

"ಟಿಪ್ಪೂವಿನ ರಾಜ್ಯದ ಬಹುಭಾಗವನ್ನು ಮೈಸೂರು ರಾಜವಂಶಕ್ಕೆ ಬಿಟ್ಟುಕೊಡತಕ್ಕದ್ದು ಎಂದು ಕಂಪನಿ ಸರ್ಕಾರದವರು ನಿರ್ಣಯಿಸಿದ್ದಾರೆ. ಈ ನಿರ್ಣಯದಿಂದ ಅವರ ಮೇಲೆ ದೊಡ್ಡ ಹೊಣೆಗಾರಿಕೆ ಬಿದ್ದಿದೆ. ರಾಜ್ಯವನ್ನು ವಹಿಸಿಕೊಡತಕ್ಕದ್ದು ದೊಡ್ಡ ಮಾತಲ್ಲ; ಮಹಾರಾಜರು ಪ್ರಬುದ್ಧರಾಗಿ ತಾವೇ ದಕ್ಷತೆಯಿಂದ ರಾಜ್ಯವಾಳುವಂತಾಗುವವರೆವಿಗೆ ಈ ರಾಜ್ಯ ಸುರಕ್ಷಿತವಾಗಿರುವಂತೆ, ಇಲ್ಲಿ ಆಡಳಿತ ಸರಿಯಾಗಿರುವಂತೆ, ದೇಶ ಎಲ್ಲ ಬಗೆಯಿಂದಲೂ ಅಭಿವೃದ್ಧಿಗೆ ಬರುವಂತೆ ನೋಡಿಕೋತಕ್ಕದ್ದು ಕೂಡ ತಮ್ಮ ಕರ್ತವ್ಯವೆಂದು ಅವರು ಭಾವಿಸಿದ್ದಾರೆ. ಆದ್ದರಿಂದ ರಾಜ್ಯವನ್ನು ವಹಿಸಿಕೊಡುವ ಮೊದಲು ಅದರ ಸುವ್ಯವಸ್ಥೆಗೂ ತಕ್ಕ ಏರ್ಪಾಡಾಗುವುದು ಆವಶ್ಯಕವೆಂಬುದು ಅವರ ಅಭಿಪ್ರಾಯವಾಗಿದೆ."

"ನಮ್ಮ ರಾಜಮನೆತನದ ಮತ್ತು ರಾಜ್ಯದ ಅಭಿವೃದ್ಧಿಯಲ್ಲಿ ಕಂಪನಿ ಸರ್ಕಾರ ಇಷ್ಟೊಂದು ಆಸಕ್ತಿ ವಹಿಸಿರುವುದು ನಮಗೆ ತುಂಬ ಸಂತೋಷವನ್ನುಂಟು ಮಾಡಿದೆ."

"ಒಳ್ಳೆಯದು. ಈ ಪತ್ರ ನಮ್ಮ ನಿಮ್ಮ ನಡುವೆ ಆಗಬೇಕಾಗಿರುವ ಕರಾರುನಾಮೆಯ ಪ್ರತಿ. ರಾಣೀಸಾಹಿಬಾರವರ ಅವಗಾಹನೆಗಾಗಿ ಕರಾರುನಾಮೆಯ ಕನ್ನಡ ಅನುವಾದವನ್ನೂ ಅದಕ್ಕೆ ಲಗತ್ತಿಸಿದೆ. ಪರಾಂಬರಿಸಬೇಕು. ಕರಾರುನಾಮೆಗೆ ಈಗಲೇ ರುಜು ಮಾಡಬೇಕಾಗಿಲ್ಲ. ಪಟ್ಟಾಭಿಷೇಕ ಆದಮೇಲೆ ಮಾಡಬಹುದು."

"ಆಗಲಿ. ಈ ಪತ್ರ ನೋಡಿಕೊಳ್ಳುತ್ತೇವೆ."

"ಇನ್ನು ರಾಜ್ಯದ ಆಡಳಿತದ ವ್ಯವಸ್ಥೆ ವಿಚಾರ: ರಾಣೀಸಾಹಿಬಾರವರ ಬುದ್ಧಿಶಕ್ತಿ, ಕಾರ್ಯಸಾಧನಾ ಚತುರತೆ, ಸಹಿಷ್ಣುತೆಗಳ ವಿಚಾರದಲ್ಲಿ ಕಂಪನಿ

ಸರ್ಕ್ಕಾರಕ್ಕೆ ತುಂಬ ಗೌರವವಿದೆ. ಆದ್ದರಿಂದ ಮಹಾರಾಜರವರ ಬಾಲ್ಯದಲ್ಲಿ ಅವರೇ ರಾಜರ ರಕ್ಷಕರಾಗಿಯೂ ರಾಜರ ಪ್ರತಿನಿಧಿಯಾಗಿಯೂ ಇರಬೇಕೆಂದು ಕಂಪೆನಿ ಸರ್ಕ್ಕಾರ ಆಶಿಸಿದೆ. ಈ ಕರ್ತವ್ಯವನ್ನು ರಾಣೀಸಾಹಿಬಾರವರು ವಹಿಸಿಕೊಳ್ಳಬೇಕು."

"ಕಂಪೆನಿ ಸರ್ಕ್ಕಾರ ನಮ್ಮ ವಿಚಾರದಲ್ಲಿ ಇಷ್ಟೊಂದು ಸದಭಿಪ್ರಾಯವನ್ನಿಟ್ಟುಕೊಂಡಿರುವುದಕ್ಕಾಗಿ ನಾವು ಅವರಿಗೆ ಅತ್ಯಂತ ಕೃತಜ್ಞರು. ಅವರು ನಮಗೆ ವಹಿಸಿರುವ ಈ ಕರ್ತವ್ಯ ನಮಗೆ ತುಂಬಾ ಪ್ರಿಯವಾದದ್ದು. ಬಾಲ ಮಹಾರಾಜರನ್ನು ಪೋಷಿಸಿ ಬೆಳೆಸಿ, ಅವರಿಗೆ ಉಚಿತ ಶಿಕ್ಷಣ ಕೊಡಿಸುವುದಕ್ಕಿಂತ ಪ್ರಿಯವಾದ ಕಾರ್ಯ ನಮಗೆ ಇನ್ನೇನಿದೆ ?"

"ರಾಣೀಸಾಹಿಬಾರವರು ರಾಜಪ್ರತಿನಿಧಿಗಳಾಗಿದ್ದರೂ, ದಿನದಿನದ ಆಡಳಿತ ವ್ಯವಹಾರಗಳನ್ನು ನೋಡಿಕೊಳ್ಳಲು ಒಬ್ಬರು ದಿವಾನರ ಅಗತ್ಯವಿದ್ದೇಯಿರುತ್ತದಲ್ಲ. ರಾಜಪ್ರತಿನಿಧಿಗಳ ಆಜ್ಞೆಗೊಳಪಟ್ಟು ರಾಜ್ಯಾಡಳಿತ ನಡೆಸಲು ಅನುಭವಸ್ಥರೂ ದಕ್ಷರೂ ಆದ ಒಬ್ಬರನ್ನು ನಿಯಮಿಸಬೇಕೆಂಬುದು ಕಂಪನಿಯ ಇಷ್ಟ. ಈ ವಿಚಾರವಾಗಿ ಅವರು ದೀರ್ಘವಾಗಿ ವಿಚಾರ ಮಾಡಿ ಹಿಂದಿನ ಆಡಳಿತದಲ್ಲಿ ಪ್ರಮುಖರಾಗಿದ್ದು ಸಂಸ್ಥಾನದ ಸ್ಥಿತಿಗತಿಗಳನ್ನು ಚೆನ್ನಾಗಿ ಬಲ್ಲವರೂ, ದಕ್ಷರೂ ಆದ ಪೂರ್ಣಯ್ಯನವರನ್ನು ಸಂಸ್ಥಾನದ ದಿವಾನರನ್ನಾಗಿ ನಿಯಮಿಸಬೇಕೆಂಬ ನಿರ್ಣಯಕ್ಕೆ ಬಂದಿದ್ದಾರೆ. ಈ ನಿರ್ಣಯಕ್ಕೆ ರಾಣೀಸಾಹಿಬಾರವರು ಮನ್ನಣೆ ಕೊಡಬೇಕು."

"ಆಲೋಚನೆ ಮಾಡೋಣ. ತಮ್ಮ ಶ್ರಮಪರಿಹಾರಾರ್ಥವಾಗಿ ಈ ಪಾನೀಯವನ್ನು ತೆಗೆದುಕೊಳ್ಳಿ.–ಇವರ ಮಾತು ಕೇಳಿದೆಯಾ ನಂಜರಾಜಯ್ಯ"

"ಕೇಳಿದೆ. ಚನ್ನಪುರಿಯಿಂದ ಬಂದವರನ್ನು ಸನ್ನಿಧಾನಕ್ಕೆ ಬಿಡದೆ ತಡೆದಿಟ್ಟದ್ದೇಕೆ ಎಂಬುದು ಈಗ ಅರ್ಥವಾಯಿತಲ್ಲ"

"ಹಾಗೆಯೇ ಅವನೇಕೆ ನಮ್ಮ ಹಿಂದೆ ಮುಂದೆ ಇಷ್ಟೊಂದು ವಿಧೇಯನಾಗಿ ಓಡಾಡುತ್ತಿದ್ದಾನೆಂಬುದೂ ಗೊತ್ತಾಯಿತಲ್ಲ !"

"ಗೊತ್ತಾಯಿತು."

"ಈ ವಿಚಾರದಲ್ಲಿ ನಮ್ಮ ದೃಷ್ಟಿಯೇನೆಂಬುದನ್ನು ಅವರಿಗೆ ನೀವು ತಿಳಿಸಿ ನಂಜರಾಜಯ್ಯ."

"ಹ್ಯಾರಿಸ್ ಸಾಹೇಬರೆ. ಪೂರ್ಣಯ್ಯನವರು ದಕ್ಷರು, ಅನುಭವಸ್ಥರು

ಎಂಬ ವಿಚಾರದಲ್ಲಿ ಅನುಮಾನವೇ ಇಲ್ಲ. ಇಂದಿನ ಸ್ಥಿತಿಯಲ್ಲಿ ಸಂಸ್ಥಾನಕ್ಕೆ ಅವರ ಸೇವೆ ಅತ್ಯವಶ್ಯಕವೆಂಬುದರಲ್ಲೂ ಅನುಮಾನವಿಲ್ಲ. ಅವರೂ ಸಂಸ್ಥಾನದ ಮಂತ್ರಿಗಳಲ್ಲೊಬ್ಬರಾಗಿರಲಿ. ಆದರೆ ಸಂಸ್ಥಾನದ ಪ್ರಧಾನಿಯ ಕೆಲಸ, ದೀರ್ಘ ಕಾಲದಿಂದ ಸನ್ನಿಧಾನದ ಸೇವೆ ಮಾಡಿರುವ ತಿರುಮಲರಾಯರಿಗೆ ಸಲ್ಲತಕ್ಕದ್ದು ಸರಿ ಎಂಬುದು ಸನ್ನಿಧಾನದ ಅಭಿಪ್ರಾಯ."

"ರಾಣೀಸಾಹಿಬಾರವರಿಗೆ ಇಂಥ ಅಭಿಪ್ರಾಯವಿರಬೇಕೆಂಬುದರ ಅರಿವು ಈ ಮೊದಲೇ ನಮಗಿದ್ದಿತು ನಂಜರಾಜಯ್ಯನವರೇ. ತಿರುಮಲರಾವ್‌ರವರಿಗೆ ರಾಣೀಸಾಹಿಬಾರವರಿಂದ ಬರುತ್ತಿದ್ದ ಎಲ್ಲ ಪತ್ರಗಳಲ್ಲೂ ಅವರನ್ನು ಪ್ರಧಾನಿ ಗಳೆಂದೇ ಕರೆಯಲಾಗುತ್ತಿತ್ತೆಂಬುದನ್ನೂ ನಾವು ಬಲ್ಲೆವು. ಅವರು ಮೈಸೂರು ರಾಜವಂಶಕ್ಕೂ, ಕಂಪನಿ ಸರ್ಕಾರಕ್ಕೂ ಅಮೂಲ್ಯವಾದ ಸೇವೆ ಸಲ್ಲಿಸಿದ್ದಾ ರೆಂಬುದನ್ನೂ ನಾವು ಮರೆತಿಲ್ಲ. ಈ ಅಂಶಗಳನ್ನೆಲ್ಲಾ ಗಮನದಲ್ಲಿಟ್ಟುಕೊಂಡೇ ಸಲಹೆಗಾರ ಮಂಡಲಿ ದಿವಾನಿಕೆ ವಿಚಾರವನ್ನು ಚರ್ಚಿಸಿ, ಪೂರ್ಣಯ್ಯನವರ ಪರವಾಗಿ ನಿರ್ಣಯಿಸಿತು. ಗೌರ್ನರ್ ಜನರಲ್‌ರವರೂ ಈ ನಿರ್ಣಯವನ್ನು ಅನುಮೋದಿಸಿದ್ದಾರೆ. ಇಂದಿನ ಸ್ಥಿತಿಯಲ್ಲಿ ಸಂಸ್ಥಾನದ ಆಡಳಿತ ಅನುಭವಸ್ಥರಾದ ಒಬ್ಬರ ಕಯ್ಯಲ್ಲಿದ್ದರೆ ಒಳ್ಳೆಯದು. ಆ ಅಧಿಕಾರ ಇಬ್ಬರಿಗೆ ಹಂಚುವುದು ಹಿತಕಾರಿಯಲ್ಲ. ಅದರಿಂದ ಆಡಳಿತದ ದಕ್ಷತೆಗೆ ಕುಂದುಂಟಾಗಬಹುದು. – ಎಂದೇ ಈ ನಿರ್ಣಯವನ್ನು ತೆಗೆದುಕೊಳ್ಳಲಾಯಿತು."

ಹ್ಯಾರಿಸ್‌ರವರು ತಮ್ಮ ಮಾತನ್ನು ನಿಲ್ಲಿಸಿದೊಡನೆಯೇ ಅವರೊಡನಿದ್ದ ಕರ್ನಲ್ ವೆಲ್ಲೆಸ್ಲಿ ಸಾಹೇಬರು ಮಾತನಾಡಲಾರಂಭಿಸಿದರು.

"ಜನರಲ್ ಹ್ಯಾರಿಸ್‌ರವರು ಸೂಚಿಸಿದ ಅಭಿಪ್ರಾಯ ತುಂಬ ಸಾಧು ವಾದುದೆಂದು ರಾಣೀಸಾಹಿಬಾರವರಿಗೆ ತಿಳಿಸಿ. ನಾನು ತಿರುಮಲರಾವ್‌ರವರ ಮಿತ್ರ. ಅವರನ್ನು ಚೆನ್ನಾಗಿ ಬಲ್ಲೆ. ಹೀಗಿದ್ದೂ, ಇಂದಿನ ಪರಿಸ್ಥಿತಿಯಲ್ಲಿ ಸಂಸ್ಥಾನದ ಹಿತದೃಷ್ಟಿಯಿಂದ ಪೂರ್ಣಯ್ಯನವರು ದಿವಾನರಾಗಿರುವುದು ಆವಶ್ಯಕ ವೆಂದು ನಾನು ನಂಬಿದ್ದೇನೆ. ತಿರುಮಲರಾವ್‌ರವರು ಸಲಹೆಗಾರ ಮಂಡಲಿಯವರ ಮುಂದೆ ತಮ್ಮ ವಾದವನ್ನೆಲ್ಲಾ ಮಂಡಿಸಿದರು. ಆದರೂ ತಾನು ಈ ಮೊದಲೇ ತೆಗೆದುಕೊಂಡಿದ್ದ ನಿರ್ಣಯವನ್ನು ಬದಲಿಸುವುದು ಆವಶ್ಯಕವೆಂದು ಮಂಡಲಿ ಭಾವಿಸಲಿಲ್ಲ. ಅಂದಮಾತ್ರಕ್ಕೇ ನಾವು ತಿರುಮಲರಾವ್‌ರವರ ಸೇವೆಯನ್ನು ಅಲ್ಲಗಳೆಯುತ್ತಿದ್ದೇವೆಂದಾಗಲೀ, ಅವರ ಹಿತವನ್ನು ನಿರ್ಲಕ್ಷಿಸುತ್ತಿದ್ದೇವೆಂದಾಗಲೀ

ಅಲ್ಲ. ಅವರ ಸೇವೆಗಾಗಿ ಅವರನ್ನು ಗೌರವಿಸೋಣ. ಖಂಡಿತವಾಗಿ ಗೌರವಿಸುತ್ತೇವೆ. ಅವರು ಯಾವ ರೀತಿಯ ನಷ್ಟವನ್ನೂ ಅನುಭವಿಸದಂತೆ ನೋಡಿಕೊಳ್ಳೋಣ. ಟಿಪ್ಪೂಸುಲ್ತಾನನ ಆಸ್ಥಾನದಲ್ಲಿದ್ದ ಮೀರ್ ಮಿರಾನ್‌ಗಳಿಗೆ ಏನು ಮಾಶಾಸನ ಕಲ್ಪಿಸಲಾಗುತ್ತದೋ ಅಷ್ಟು ಮಾಶಾಸನ ತಿರುಮಲರಾವ್‌ರವರಿಗೂ ಸಲ್ಲುತ್ತದೆ. ಜೊತೆಗೆ ಅವರು ಸಂಸ್ಥಾನದ ಸೇವೆಗೆಂದು ತಮ್ಮ ಸ್ವಂತ ಹಣದಿಂದ ಮಾಡಿರುವ ವೆಚ್ಚಕ್ಕೆ ಪರಿಹಾರವಾಗಿ ನಾಲ್ಕು ಸಾವಿರ ಪಗೋಡಾಗಳನ್ನು ಸಲ್ಲಿಸೋಣ. ಈ ವ್ಯವಸ್ಥೆಗೆ ತಿರುಮಲರಾವ್ ಒಪ್ಪುವಂತೆ ಮಾಡುತ್ತೇನೆ. ಇಂದಿನ ಸ್ಥಿತಿಯಲ್ಲಿ ರಾಣೀಸಾಹಿಬಾರವರು ಅನವಶ್ಯಕವಾದ ವಯ್ಯಕ್ತಿಕ ಪ್ರಭಾವಕ್ಕೆ ಒಳಗಾಗಬಾರದೆಂದೇ ತಿರುಮಲರಾವ್‌ರವರನ್ನು ತಮ್ಮಲ್ಲಿಗೆ ಕಳುಹಿಸಲಿಲ್ಲ. ಆದರೆ ಅವರ ವಾದವನ್ನೆಲ್ಲಾ ಕೇಳಿ, ವಿಚಾರ ಮಾಡಿ ಈ ಕೊನೆಯ ನಿರ್ಧಾರಕ್ಕೆ ಬಂದಿದ್ದೇವೆ. ಸಂಸ್ಥಾನದ ಹಿತದೃಷ್ಟಿಯಿಂದ ಇದೇ ಸರಿಯಾದ ನಿರ್ಧಾರವೆಂದು ನನ್ನ ಮತ್ತು ಮಂಡಲಿಯ ಅಭಿಪ್ರಾಯ. ಈ ಅಭಿಪ್ರಾಯವನ್ನು ತಾವು ಅನುಮೋದಿಸಬೇಕು."

"ನೀವು ಇದೇ ಕೊನೆಯ ನಿರ್ಣಯವೆಂದ ಮೇಲೆ ನಾವು ವಾದ ಮಾಡುವ ಅವಶ್ಯಕತೆಯಾದರೂ ಏನಿದೆ ? – ಅಲ್ಲವೆ ನಂಜರಾಜಯ್ಯ."

"ಸನ್ನಿಧಾನದ ಅಭಿಪ್ರಾಯ ಸರಿಯೆಂದು ತೋರುತ್ತದೆ."

"ಈ ಸರದಾರರಿಗೆ ಉಚಿತ ಮರ್ಯಾದೆಗಳನ್ನು ಮಾಡಿ ಕಳುಹಿಸಿ. ಇನ್ನು ಒಂದೆರಡು ಗಳಿಗೆ ಬಿಟ್ಟು ನೀವೂ ದಾಸರೂ ನಮ್ಮಲ್ಲಿಗೆ ಬನ್ನಿ. ಮಾತನಾಡುವುದಿದೆ."

"ಅಪ್ಪಣೆ ತಾಯಿ."

"ನಾವಿನ್ನು ಹೊರಡುತ್ತೇವೆಂದು ಈ ಸರದಾರರಿಗೆ ತಿಳಿಸು ಚಾಂದ್‌ಬೀಬಿ."

ಚಾಂದ್ ಬೀಬಿ ಮಹಾಮಾತೃಶ್ರೀಯವರ ಮಾತನ್ನು ಜನರಲ್ ಹ್ಯಾರಿಸ್ ಮತ್ತು ಕರ್ನಲ್ ವೆಲ್ಲೆಸ್ಲಿ ಸಾಹೇಬರಿಗೆ ತಿಳಿಸಿದಳು. ಅವರಿಬ್ಬರೂ ಎದ್ದುನಿಂತು ಇಂಗ್ಲಿಷ್ ಮಿಲಿಟರಿ ಶೈಲಿಯಲ್ಲಿ ವಂದಿಸಿದರು. ಮಹಾರಾಣಿಯವರು ಪ್ರತಿ ನಮಸ್ಕಾರ ಮಾಡಿ ಅಲ್ಲಿಂದ ಹೊರಟುಹೋದರು.

§

"ಚಾಮುಂಡಿ, ಅಲಂಕಾರಗಳೆಲ್ಲಾ ಮುಗಿದಿದ್ದರೆ ಮಹಾರಾಜರನ್ನು ಕರೆದುಕೊಂಡು ಬಾ, ಪಟ್ಟಾಭಿಷೇಕಕ್ಕೆ ಹೊರಡುವ ಹೊತ್ತಾಯಿತೆಂದು ದಾಸರೂ ಶ್ರೀನಿವಾಸಾಚಾರ್ಯರೂ ಹೇಳುತ್ತಿದ್ದಾರೆ."

"ಇದೋ ಅಲಂಕಾರ ಮುಗಿಯಿತು ತಾಯಿ. ಎತ್ತಿಕೊಂಡು ಬಂದೆ."

ಸರ್ವಾಲಂಕಾರ ಭೂಷಿತರಾಗಿದ್ದ ಐದು ವರ್ಷ ವಯಸ್ಸಿನ ನಂಜರಾಜರನ್ನು ಎತ್ತಿಕೊಂಡು ಬಂದು ಮಹಾಮಾತೃಶ್ರೀಯವರ ಮುಂದೆ ನಿಲ್ಲಿಸಿದಳು ಚಾಮುಂಡಿ. ಪಟ್ಟಾಭಿಷೇಕಕ್ಕೆ ಹೊರಡಲು ಸಿದ್ಧವಾಗಿ ಬಂದ ತಮ್ಮ ಮೊಮ್ಮಗನನ್ನು ಮಹಾಮಾತೃಶ್ರೀಯವರು ಕಣ್ಣು ದಣಿಯುವ ತನಕ ನೋಡಿದರು. "ನನ್ನ ಹಾಳು ಕಣ್ಣು ಬಿದ್ದು ಕೆಟ್ಟ ದೃಷ್ಟಿಯಾದೀತಪ್ಪಾ" ಎಂದುಕೊಳ್ಳುತ್ತಾ ದೃಷ್ಟಿ ಪರಿಹಾರಾರ್ಥವಾಗಿ ನಟಿಕೆ ಮುರಿದರು. ಬಾಲಮಹಾರಾಜರನ್ನೆತ್ತಿಕೊಂಡು ಅವರ ಮುದ್ದು ಮುಖಕ್ಕೆ ಮುತ್ತಿಟ್ಟು ಕೆಳಕ್ಕಿಳಿಸಿ ಕೇಳಿದರು :

"ದಾಸರೆ, ನಿಮ್ಮ ಪುಟ್ಟ ಮಹಾರಾಜರು ಹೇಗೆ ಕಾಣುತ್ತಾರೆ ?"

"ಅವರಿಗೇನು ತಾಯಿ ! ಬಾಲ ಗೋಪಾಲಕೃಷ್ಣನ ಹಾಗೆ ಮೆರೆಯುತ್ತಿದ್ದಾರೆ."

"ಈ ಮಾತು ಕೇಳಿ ನನಗೆ ನೆನಪಿಗೆ ಬಂತು. ಶ್ರೀನಿವಾಸಾಚಾರ್ಯರು ಸಲಹೆ ಮಾಡಿದ್ದರಲ್ಲ. ಆ ವಿಚಾರ ಪೂರ್ಣಯ್ಯನ ಮೂಲಕ ಹ್ಯಾರಿಸ್ ಸಾಹೇಬರಿಗೆ ತಿಳಿಸಿದಿರೇನು ?"

"ತಿಳಿಸಿ ಆಯಿತು. ಒಪ್ಪಿದ್ದಾರೆ. ಪಟ್ಟಾಭಿಷೇಕಕ್ಕೆ ಸಂಬಂಧಿಸಿದ ವೈದಿಕ ಕರ್ಮಗಳಲ್ಲೆಲ್ಲಾ ಮೊದಲಿನ ಶ್ರೀ ಶ್ರೀ ನಂಜರಾಜ ಒಡೆಯರು ಎಂಬ ಹೆಸರಿನ ಬದಲು ಶ್ರೀ ಶ್ರೀ ಕೃಷ್ಣರಾಜ ಒಡೆಯರು ಎಂಬ ಹೆಸರಿನಲ್ಲೇ ಸಂಕಲ್ಪಗಳನ್ನು ಮಾಡಿದ್ದಾಗಿದೆ. ಪಟ್ಟಾಭಿಷೇಕದ ಸಂದರ್ಭದಲ್ಲಿ ಈ ಹೊಸ ಹೆಸರನ್ನೇ ಉಪಯೋಗಿಸುವುದಲ್ಲದೆ, ಕರಾರು ನಾಮೆಯ ಪ್ರತಿಯಲ್ಲಿಯೂ ಈ ಬದಲಾವಣೆ ಮಾಡಲು ಹ್ಯಾರಿಸ್ ಸಾಹೇಬರು ಒಪ್ಪಿದ್ದಾರೆ."

"ಸಂತೋಷ. ಈ ಹೊಸ ಹೆಸರಿನೊಡನೆ ನಮ್ಮ ರಾಜವಂಶದ ಹೊಸ ಚರಿತ್ರೆ ಆರಂಭವಾಗಲಿ. ನಂಜರಾಜಯ್ಯ – ದೊರೆಗಳ ಮೆರವಣಿಗೆ ಎಲ್ಲ ಸಿದ್ಧವಾಗಿದೆಯೆ ನೋಡಿ."

"ಸಿದ್ಧವಾಗಿದೆ ತಾಯಿ. ಪೂರ್ಣಯ್ಯನವರೂ ಬಂದಿದ್ದಾರೆ ; ಮೆರವಣಿಗೆಯ ವ್ಯವಸ್ಥೆಯನ್ನೆಲ್ಲಾ ಪರಿಶೀಲಿಸುತ್ತಿದ್ದಾರೆ. ಮಹಾರಾಜರು ಬಾಲಕರಾದುದರಿಂದ

ಅವರು ಪಲ್ಲಕ್ಕಿಯಲ್ಲಿ ಮುಹೂರ್ತ ಮಾಡಿ ಮೆರವಣಿಗೆ ಹೋಗುವುದೇ ಉತ್ತಮ ವೆಂದು ಹಾಗೆಯೇ ವ್ಯವಸ್ಥೆಮಾಡಿದೆ."

"ಸರಿ. ಪರಿಶೀಲನೆ ಮುಗಿದೊಡನೆ ಪೂರ್ಣಯ್ಯನವರನ್ನು ಇಲ್ಲಿಗೆ ಕರೆದು ಕೊಂಡು ಬನ್ನಿ."

"ಅಪ್ಪಣೆ ತಾಯಿ."

"ಮರಿ ಪುಟ್ಟಸ್ವಾಮಿ. ನಾನು ಹೇಳಿದ್ದೆಲ್ಲಾ ನೆನಪಿದೆತಾನೆ: ಪಲ್ಲಕ್ಕಿಯಲ್ಲಿ ಕುಳಿತು ಮೆರವಣಿಗೆ ಹೋಗುವಾಗಲೂ ಪಟ್ಟಾಭಿಷೇಕ ಕಾಲದಲ್ಲಿ ಸಿಂಹಾಸನದ ಮೇಲೆ ಕುಳಿತಾಗಲೂ ತುಂಬ ಗಂಭೀರವಾಗಿರಬೇಕು. ನಗುಮುಖವಾಗಿರಬೇಕು. ವಂದನೆ ಮಾಡಿದ ಜನರಿಗೆ ಕೈ ಜೋಡಿಸಿ ಪ್ರತಿವಂದನೆ ಮಾಡಬೇಕು...."

"ನನಗೆ ಎಲ್ಲ ಗೊತ್ತಿದೆ ಮುತ್ತಮ್ಮಯ್ಯ. ನೋಡಿ ಬೇಕಾದರೆ ಇವತ್ತು ಹೇಗಿರುತ್ತೇನೆ."

"ಪುಟ್ಟ ದೊರೆಗಳು ತುಂಬಾ ಸೂಕ್ಷ್ಮಮತಿಗಳು. ಒಂದಾವರ್ತಿ ಹೇಳಿದರೆ ಸಾಕು, ಗ್ರಹಿಸಿಬಿಡುತ್ತಾರೆ. ನೆನ್ನೆಯಿಂದ ವೈದಿಕ ಕರ್ಮಗಳಲ್ಲಿ ನೋಡುತ್ತ ಇದ್ದೇವಲ್ಲ! ಸಂಕಲ್ಪದಲ್ಲಿ ಅವರ ಹೆಸರು ಬದಲಾಯಿಸಿ ಹೇಳಿದ್ದನ್ನು ಗಮನಿಸಿ ನಮ್ಮನ್ನು ತಿದ್ದಿದರು ತಾಯಿ! ಆಮೇಲೆ ವಿಚಾರ ಏನು ಎಂಬುದನ್ನು ಖಾಸಾ ಸನ್ನಿಧಾನದಲ್ಲಿ ಬಿನ್ನವಿಸಿಕೊಂಡೆವು."

"ಎಲ್ಲ ಸಿದ್ಧವಾಗಿದ್ದರೆ ಇನ್ನು ಹೊರಡಬಹುದು ತಾನೆ! – ಪೂರ್ಣಯ್ಯ ಬಂದ ಹಾಗೆ ಕಾಣುತ್ತದೆ. ದಾಸರೆ, ಇನ್ನು ಹೊರಡಬಹುದು ತಾನೆ."

"ಖಾಸಾ ಸವಾರಿ ಅಂತಃಪುರದಿಂದ ಹೊರಡುವುದಕ್ಕೆ ಮುಂಚೆ ಸುಮಂಗಲಿಯರು ಆರತಿ ಮಾಡಿ ರಕ್ಷೆಯಿಡಲಿ, ತಾಯಿ."

"ಚಾಮುಂಡಿ."

"ಆರತಿ ಸಿದ್ಧವಾಗಿದೆ ತಾಯಿ."

"ಬನ್ನಿ ಪೂರ್ಣಯ್ಯನವರೇ."

"ಮೆರವಣಿಗೆಗೆ ಎಲ್ಲ ಸಿದ್ಧವಾಗಿದೆ. ಇಲ್ಲಿಯ ಕಾರ್ಯಕಲಾಪಗಳು ಮುಗಿದಿದ್ದರೆ—"

"ನಾವೂ ಸಿದ್ಧವಾಗಿದ್ದೇವೆ. ಆರತಿ ಆಗಲಿ."

ಸುಮಂಗಲಿಯರು ಮುಂದೆ ಬಂದು ದೊರೆಗಳಿಗೆ ಆರತಿ ಎತ್ತಿ ರಕ್ಷೆಯಿಟ್ಟರು. ದೊರೆಗಳು ಪಕ್ಕಕ್ಕೆ ತಿರುಗಿ, ಚೀಟಿ ಹಿಡಿದು ನಿಂತಿದ್ದ ಚಿನ್ನದ ತಟ್ಟೆಯಿಂದ

ಬೊಗಸೆಯ ತುಂಬ ಕಂಠೀರಾಯಿ ಹಣವನ್ನು ತೆಗೆದುಕೊಂಡು ಆರತಿ ತಟ್ಟೆಗೆ ಹಾಕಿದರು. ಅದನ್ನು ನೋಡುತ್ತಿದ್ದ ಪೂರ್ಣಯ್ಯನವರು,

"ದೊರೆಗಳು ತುಂಬ ಉದಾರಿಗಳು" ಎಂದರು.

"ಹೌದು ದಿವಾನರೇ. ಔದಾರ್ಯ ನಮ್ಮ ರಾಜವಂಶದ ಗುಣ. ಇದು ನಿಮಗೆ ತಿಳಿಯದ ವಿಚಾರವೇನಲ್ಲವಲ್ಲ!"

"ಬಲ್ಲೆ ತಾಯಿ.–ಪಲ್ಲಕ್ಕಿ ಸಿದ್ಧವಾಗಿದೆ. ಇಲ್ಲೇ ತಲೆಬಾಗಿಲಲ್ಲಿದೆ. ದಾಸರೆ ಶುಭ ಮುಹೂರ್ತ ಪ್ರಾಪ್ತವಾಗಿದ್ದರೆ, ದೊರೆಗಳು—"

"ಬಿಜಯ ಮಾಡಿಸಬಹುದು. ಮುಹೂರ್ತ ಶುಭವಾಗಿದೆ."

ಪೂರ್ಣಯ್ಯನವರು ನಾಲ್ಕು ಹೆಜ್ಜೆ ಮುಂದೆ ಬಂದು ಸರ್ವಾಲಂಕಾರ ಭೂಷಿತರಾಗಿದ್ದ ದೊರೆಗಳಿಗೆ ಮುಜರೆ ಮಾಡಿ, ಅವರಿಗೆ ಹಸ್ತಲಾಘವ ಕೊಟ್ಟು ಕರೆದೊಯ್ದು ಪಲ್ಲಕ್ಕಿಯಲ್ಲಿ ಮುಹೂರ್ತ ಮಾಡಿಸಿದರು. ದಾಸಿ ಹಿಡಿದಿದ್ದ ಹೊನ್ನ ಹರಿವಾಣದಲ್ಲಿದ್ದ ಪಟ್ಟದ ಕತ್ತಿ, ಶಿಖಾಸರವನ್ನು ಪಲ್ಲಕ್ಕಿಯಲ್ಲಿಟ್ಟರು.

ಇತ್ತ ಮಹಾಸ್ವಾಮಿಯವರನ್ನು ಪಲ್ಲಕ್ಕಿಯಲ್ಲಿ ಮುಹೂರ್ತ ಮಾಡಿಸುತ್ತಿರುವಾಗ ಅತ್ತ ಸೇನಾ ಪರಿವಾರವೆಲ್ಲಾ ಪಯಣಕ್ಕೆ ಸಿದ್ಧವಾಯಿತು.

ಅಲಂಕೃತವಾಗಿದ್ದ ಪಟ್ಟದ ಆನೆ, ಕುದುರೆಗಳನ್ನನುಸರಿಸಿ ಸೇನಾ ಪರಿವಾರ ಹೊರಟಿತು. ಬೆಳ್ಗೊಡೆಯ ನೆರಳಿನಲ್ಲಿ ಮಹಾಸ್ವಾಮಿಯವರ ಪಲ್ಲಕ್ಕಿ ಚಲಿಸಿತು. ಅದರ ಉಭಯ ಪಾರ್ಶ್ವಗಳಲ್ಲೂ ಚಾಮರದವರು ಚಾಮರಗಳನ್ನು ಬೀಸುತ್ತಿದ್ದರು. ಪಲ್ಲಕ್ಕಿಯ ಒಂದು ಪಕ್ಕದಲ್ಲಿ ಪೂರ್ಣಯ್ಯನವರೂ ಇನ್ನೊಂದೆಡೆಯಲ್ಲಿ ನಂಜರಾಜಯ್ಯನವರೂ ಹೆಜ್ಜೆ ಹಾಕಿದರು. ಅರಮನೆಯ ಊಳಿಗದವರು ಮಹಾಸ್ವಾಮಿಯವರ ಪಲ್ಲಕ್ಕಿಯ ಮುಂದೆ ಸೂರಪಾನೆ, ಅಷ್ಟಮಂಗಳ ದ್ರವ್ಯಗಳನ್ನೂ ಶಂಖಚಕ್ರಾಂಕುಶ ಹನುಮದ್ಗರುಡ ಕಂಠೀರವಾದಿ ಬಿರುದುಗಳನ್ನೂ ಹಿಡಿದು ನಡೆದರು. ವಾದ್ಯಗಾರರು ನರ್ತಕಿಯರು ತಮ್ಮ ತಮ್ಮ ಕಲಾಪ್ರೌಢಿಮೆಯನ್ನು ತೋರುತ್ತ ಸಾಗಿದರು. ಹೊಗಳುಭಟರು ಗದ್ಯಪದ್ಯಾದಿಗಳಿಂದ ದೊರೆಗಳ ಬಿರುದಾವಳಿಗಳನ್ನು ಪಠಿಸಿದರು.

ಹೀಗೆ ಮಹಾರಾಜಮರ್ಯಾದೆಗಳಿಂದೊಡಗೂಡಿದ ದೊರೆಗಳು ಪಟ್ಟಾಭಿಷೇಕ ಮಂಟಪದ ಸಮೀಪಕ್ಕೆ ಬಂದೊಡನೆಯೇ ಕಂಪನಿಯ ಸೇನೆಗಳು ಅವರಿಗೆ ಗಾರ್ಡ್ ಆಫ್ ಆನರ್ ಮರ್ಯಾದೆಯನ್ನು ಸಲ್ಲಿಸಿದುವು. ದೊರೆಗಳು ಅದನ್ನು ಪರಿಶೀಲಿಸಿ ಕಟ್ಟೆಗೆಯವರು ಚೋಪುದಾರರುಗಳಿಂದ ಪರಾಕು ಹೊಗಳಿಸಿ

ಕೊಳ್ಳುತ್ತಾ ಮುಂದುವರಿದು ಪಟ್ಟಾಭಿಷೇಕ ಮಂಟಪದ ಕಡೆಗೆ ಬಂದರು. ಪೂರ್ಣಯ್ಯನವರು ಮಂಟಪದ ಮಹಾದ್ವಾರದಲ್ಲಿ ದೊರೆಗಳನ್ನು ಸ್ವಾಗತಿಸಿ ಹಸ್ತ ಲಾಘವವಿತ್ತು ಅವರನ್ನು ಪಟ್ಟಾಭಿಷೇಕ ಮಂಟಪದ ಜಗಲಿಯಲ್ಲಿದ್ದ ಭದ್ರಾಸನ ದಲ್ಲಿ ಮುಹೂರ್ತ ಮಾಡಿಸಿದರು.

ಅನಂತರ ಪಟ್ಟಾಭಿಷೇಕದ ಅಂಗವಾದ ವೈದಿಕ ಕಾರ್ಯಗಳು ಆರಂಭ ವಾದುವು :

ಸಭಾನುಜ್ಞೆ, ಪುಣ್ಯಾಹ, ನವಗ್ರಹ ದೇವತಾರಾಧನೆ, ಅಭಿಷೇಕಾರ್ಥವಾಗಿ ಕಲ್ಪೋಕ್ತದೇವತಾ ಕಲಶಪೂಜೆ, ಹವನ ಹೋಮಾದಿಗಳು ನೆರವೇರಿದುವು.

ಸಮಾರಂಭಕ್ಕೆ ಆಹ್ವಾನಿತರಾಗಿ ಬಂದಿದ್ದ ಅಧಿಕಾರಿಗಳು ಪ್ರಜಾಪ್ರಮುಖ ರಲ್ಲದೆ, ಈ ಶುಭ ಕಾರ್ಯವನ್ನು ನೋಡಿ ಸಂತೋಷಿಸುವುದಕ್ಕಾಗಿ ಬಂದಿದ್ದ ಸಹಸ್ರಾರು ಮಂದಿ ಪ್ರಜೆಗಳು ಈ ಕಲಾಪಗಳನ್ನೆಲ್ಲಾ ಆಸಕ್ತಿಯಿಂದ ನೋಡು ತ್ತಿದ್ದರು. ಇವೆಲ್ಲವೂ ಮುಗಿದ ಮೇಲೆ, ಸಭೆಗೆ ಬಂದಿದ್ದ ಕಂಪನಿಯ ಸೇನಾಧಿಕಾರಿ ಗಳು ದೊರೆಗಳಿಡೆಗೆ ಬಂದು ಅವರ ಕೈ ಕುಲುಕಿ ಅವರ ಶುಭವನ್ನು ಕೋರಿದರು. ಆ ಹೊತ್ತಿಗೆ ಪಟ್ಟಾಭಿಷೇಕಕ್ಕಾಗಿ ಗೊತ್ತುಮಾಡಿದ್ದ ಮುಹೂರ್ತ ಪ್ರಾಪ್ತ ವಾಯಿತು. ಪೂರ್ಣಯ್ಯನವರು ಈ ಅಂಶವನ್ನು ದಾಸರಿಂದ ಅರಿತು, ಅದನ್ನು ಜನರಲ್ ಹ್ಯಾರಿಸ್ ಸಾಹೇಬರಿಗೆ ತಿಳಿಸಿದರು. ಅವರು ಆ ವಿಚಾರವನ್ನು ಹೈದರಾಬಾದಿನ ನಿಜಾಮರ ಪ್ರತಿನಿಧಿಯಾದ ಮೀರ್ ಆಲಂರವರಿಗೆ ಹೇಳಿದರು.

ಅನಂತರ ಯುದ್ಧದಲ್ಲಿ ವಿಜಯಗಳಿಸಿದ್ದ ಕಂಪನಿ ಸರ್ಕಾರದ ಪರವಾಗಿ ಜನರಲ್ ಹ್ಯಾರಿಸ್‌ರವರೂ, ನಿಜಾಮರ ಪರವಾಗಿ ಮೀರ್ ಆಲಂರವರೂ ಮುಂದೆದ್ದು ಬಂದು ಭದ್ರಾಸನದಲ್ಲಿ ಮಂಡಿಸಿದ್ದ ದೊರೆಗಳಿಗೆ ವಂದಿಸಿ ಅವರ ಒಂದೊಂದು ಭುಜವನ್ನು ಹಿಡಿದು, ಅವರನ್ನು ಸಿಂಹಾಸನದೆಡೆಗೆ ಕರೆದುಕೊಂಡು ಬಂದು ಅದರಲ್ಲಿ ಮುಹೂರ್ತ ಮಾಡಿಸಿ ಶಾಸ್ತ್ರ ನಿಯಮಗಳಂತೆ ಪಟ್ಟಾಭಿಷೇಕ ಮಾಡಿಸಿದರು. ಆ ವೇಳೆಗೆ ಸರಿಯಾಗಿ ದೊರೆಗಳ ಪಟ್ಟಾಭಿಷೇಕ ಸೂಚಕವಾಗಿ ಫಿರಂಗಿಗಳು ಮೊಳಗಿದುವು. ಸಭೆಯಲ್ಲಿದ್ದವರೆಲ್ಲರೂ ದೊರೆಗಳ ಮೇಲೆ ಲಾಜಾ ರೋಪ ಮಾಡಿ ತಮ್ಮ ಸಂತೋಷವನ್ನೂ ಶುಭಾಶಯವನ್ನೂ ವ್ಯಕ್ತಪಡಿಸಿದರು.

ದೊರೆಗಳ ಆಜ್ಞೆಯನ್ನನುಸರಿಸಿ ಋತ್ವಿಕರೂ ಪುರೋಹಿತರೂ ಪಟ್ಟಾಭಿಷೇಕದ ಮುಹೂರ್ತದಲ್ಲಿಯೇ ಉತ್ತಮ ಲಕ್ಷಣಗಳನ್ನುಳ್ಳ ಆನೆಗೂ

ಕುದುರೆಗೂ ಪಟ್ಟಗಟ್ಟಿ ಆನೆಗೆ ಹಂಸರಾಜನೆಂದೂ ಕುದುರೆಗೆ ಜಯರಾಮನೆಂದೂ ನಾಮಕರಣ ಮಾಡಿದರು.

ಇದಾದಮೇಲೆ ದೊರೆಗಳಿಗೆ ರತ್ನಾಭಿಷೇಕವಾಯಿತು. ಅನಂತರ ಜನರಲ್ ಹ್ಯಾರಿಸ್ ಸಾಹೇಬರು ಮೈಸೂರು ರಾಜಮನೆತನದಲ್ಲಿ ವಂಶಕ್ರಮವಾಗಿ ಬಂದಿದ್ದ ಪಟ್ಟದ ಕತ್ತಿಯನ್ನೂ ಶಿಖಾಸರವನ್ನೂ ದೊರೆಗಳಿಗೆ ಒಪ್ಪಿಸಿ ದೊರೆಗಳು ಶ್ರೀ ಶ್ರೀಕೃಷ್ಣರಾಜ ಒಡೆಯರೆಂದು ಪಟ್ಟಾಭಿಷೇಕ ನಾಮಧೇಯವನ್ನು ಅಂಗೀಕರಿಸಿದ್ದಾರೆಂಬ ಅಂಶವನ್ನು ಸಭೆಗೆ ತಿಳಿಸಿದರು. ಆಮೇಲೆ ಕಂಪನಿ ಸರ್ಕಾರದ ಪರವಾಗಿ ಅವರಿಗೆ ವಸ್ತ್ರಾಭರಣಾದ್ಯನೇಕ ಅಮೂಲ್ಯ ವಸ್ತುಗಳನ್ನು ಕೈಕಾಣಿಕೆಯಾಗಿ ಸಮರ್ಪಿಸಿದರು.

ಅನಂತರ ಇತರ ಇಂಗ್ಲಿಷ್ ಸರದಾರರೂ, ಮೀರ್ ಆಲಂ ಮುಂತಾದ ಅಧಿಕಾರಿಗಳೂ ಪ್ರಮುಖ ಪ್ರಜೆಗಳೂ ಮಹಾರಾಜರಿಗೆ ಕೈಕಾಣಿಕೆಗಳನ್ನರ್ಪಿಸಿ ಮುಜರೆ ಮಾಡಿದರು.

ಈ ಕಾರ್ಯಕ್ರಮ ಮುಗಿದ ಮೇಲೆ, ಜನರಲ್ ಹ್ಯಾರಿಸ್ ಸಾಹೇಬರು ಮುಂದೆ ಬಂದು ಮಹಾರಾಜರ ಅನುಮತಿ ಪಡೆದು ಸಭೆಯನ್ನುದ್ದೇಶಿಸಿ ಮಾತನಾಡಿದರು :

"ಮೈಸೂರು ರಾಜವಂಶದವರಾದ ಶ್ರೀ ಶ್ರೀಕೃಷ್ಣರಾಜ ಒಡೆಯರವರ ಪಟ್ಟಾಭಿಷೇಕ ತಮ್ಮೆಲ್ಲರಿಗೂ ಎಷ್ಟೊಂದು ಸಂತೋಷವನ್ನುಂಟು ಮಾಡಿದೆ ಯೆಂಬುದನ್ನು ನಾನು ಕಣ್ಣಾರೆ ಕಂಡವನಾಗಿದ್ದೇನೆ. ಈ ಸಮಾರಂಭ ನಿಮ್ಮೆಲ್ಲರಿಗೂ ಎಷ್ಟು ಸಂತೋಷವನ್ನುಂಟು ಮಾಡಿದೆಯೋ ನನಗೂ ಅಷ್ಟೇ ಸಂತೋಷವನ್ನುಂಟು ಮಾಡಿದೆ.

"ಮೈಸೂರು ರಾಜವಂಶದ ಬಗೆಗೆ ನಿಮ್ಮೆಲ್ಲರ ಪ್ರೀತಿ ವಿಶ್ವಾಸಗಳು ಎಷ್ಟು ಗಾಢವಾಗಿವೆ ಎಂಬುದನ್ನು ನಾನು ಅರಿತಿದ್ದೇನೆ. ಅದೇ ರೀತಿ ಈ ರಾಜಮನೆತನ ತಮ್ಮ ಪ್ರಜೆಗಳ ಹಿತಸಾಧನೆಯಲ್ಲಿ ಎಷ್ಟು ಆಸಕ್ತಿಯುಳ್ಳದ್ದಾಗಿದೆ ಎಂಬುದನ್ನೂ ತಿಳಿದಿದ್ದೇನೆ. ಈ ಪರಸ್ಪರ ಗೌರವ, ಪ್ರೀತಿ, ಅಭಿಮಾನಗಳು ಇತ್ತೋಪ್ಯತಿಶಯ ವಾಗಿ ಬೆಳೆಯಲಿ; ಬೆಳೆದು ನಿಮ್ಮ ರಾಜ್ಯದ ಪುರೋಭಿವೃದ್ಧಿಗೆ ಕಾರಣವಾಗಲಿ ಎಂದು ಹಾರಯಿಸುತ್ತೇನೆ. ಇದು ನನ್ನ ಹಾರಯಿಕೆ ಮಾತ್ರವಲ್ಲ. ನಮ್ಮ ಗೌರ್ನರ್ ಜನರಲ್‌ರವರ ಹಾಗೂ ಕಂಪನಿ ಸರ್ಕಾರದ ಹಾರಯಿಕೆಯಾಗಿದೆ. ಅಂತೆಯೇ ಈ ರಾಜ್ಯದಲ್ಲಿ ಸುಭದ್ರವಾದ ಆಡಳಿತವನ್ನು ಸ್ಥಾಪಿಸುವುದು ಆವಶ್ಯಕ

ಎಂಬುದು ಅವರ ಅಭಿಪ್ರಾಯ. ಈ ಅಭಿಪ್ರಾಯವನ್ನನುಸರಿಸಿ, ಕಂಪನಿ ಸರ್ಕಾರದವರು ಮಹಾಮಾತೃಶ್ರೀ ಸನ್ನಿಧಾನದವರೊಡನೆ ಸಮಾಲೋಚನೆ ನಡೆಸಿ, ದೇಶದ ಆಡಳಿತ ನಿರ್ವಹಣೆಗಾಗಿ ಕೆಲವು ಅಧಿಕಾರಿಗಳನ್ನು ನಿಯಮಿಸಿದ್ದಾರೆ; ಈ ಅಧಿಕಾರಿಗಳು ದೇಶದ ಹಿತವನ್ನೂ ನಿಮ್ಮೆಲ್ಲರ ಸೌಖ್ಯವನ್ನೂ ಸಾಧಿಸುವರೆಂದು ನಂಬಿದ್ದಾರೆ.

'ಇಂದಿನಿಂದ ಪೂರ್ಣಯ್ಯನವರು ಸಂಸ್ಥಾನದ ದಿವಾನರಾಗಿ ಕೆಲಸ ಮಾಡುವರು. ಬಚ್ಚೇರಾಯರು ತೋಷೀಖಾನೆಯ ಕೆಲಸ ನಿರ್ವಹಿಸುವರು. ಬಾಡಾಮಿ ಬಿಷ್ಟೋಪಂತರು ಸವಾರ ಕಛೇರಿಯ ಭಕ್ಷಿಗಳಾಗಿರುವರು. ಖಾನ್ ಜಿಹಾನ್‌ಖಾನರು ಬಾರ್ ಕಛೇರಿಯ ಭಕ್ಷಿಗಳಾಗಿರುವರು. ಈ ವ್ಯಕ್ತಿಗಳೆಲ್ಲರ ದಕ್ಷತೆಯನ್ನು ನೀವು ಬಲ್ಲಿರಿ. ಇವರ ನೆರವಿಗೆ ಕಂಪನಿಯ ಅಧಿಕಾರಿಗಳೂ ಇಲ್ಲಿ ಇರುತ್ತಾರೆ; ಲೆಫ್ಟಿನೆಂಟ್ ಕರ್ನಲ್ ಬಾರಿ ಕ್ಲೋಸ್‌ರವರು ಸಂಸ್ಥಾನದ ರೆಸಿಡೆಂಟ್ ಆಗಿದ್ದು ದೊರೆಗಳಿಗೂ ಅವರ ಮಂತ್ರಿಗಳಿಗೂ ಅವರವರ ಕಾರ್ಯನಿರ್ವಹಣೆಯಲ್ಲಿ ಸಹಾಯಕರಾಗಿರುತ್ತಾರೆ. ಈಗಾಗಲೇ ನಿಮ್ಮೆಲ್ಲರಿಗೂ ಪರಿಚಿತರಾಗಿರುವ, ಜನಪ್ರಿಯ ಸೇನಾಧಿಕಾರಿಗಳಾದ ಕರ್ನಲ್ ವೆಲ್ಲೆಸ್ಲಿಯವರು ಕಂಪನಿಯ ಸೇನೆಗಳೊಡನೆ ಶ್ರೀರಂಗಪಟ್ಟಣದಲ್ಲಿದ್ದುಕೊಂಡು ರಾಜ್ಯದ ಶಾಂತಿ ರಕ್ಷಣೆಗೆ ಸಹಾಯಕರಾಗಿರುವರು....

"ಈ ವ್ಯವಸ್ಥೆ ನಿಮ್ಮೆಲ್ಲರಿಗೂ ಸಂತೋಷ, ಸಮಾಧಾನಗಳನ್ನುಂಟುಮಾಡಿದೆ ಎಂಬುದು ನಿಮ್ಮ ಮುಖಭಾವದಲ್ಲೇ ವ್ಯಕ್ತವಾಗುತ್ತಿದೆ. ತಮ್ಮ ಈ ಪ್ರತಿಕ್ರಿಯೆ ನನ್ನ ಮನಸ್ಸಿಗೆ ತುಂಬ ತೃಪ್ತಿಯನ್ನುಂಟುಮಾಡಿದೆ.

"ಶ್ರೀ ಶ್ರೀ ಕೃಷ್ಣರಾಜ ಒಡೆಯರ ಸುದೀರ್ಘ ಆಳ್ವಿಕೆಯಲ್ಲಿ ನಿಮ್ಮೆಲ್ಲರ ಸುಖ ಸಂತೋಷಗಳು ವೃದ್ಧಿಯಾಗಲಿ. ನಿಮ್ಮ ದೊರೆಗಳ ಕೀರ್ತಿ ಬೆಳೆದು ಅದು ಚಿರಸ್ಥಾಯಿಯಾಗಲಿ – ಎಂದು ಹಾರೈಸುತ್ತೇನೆ" – ಎಂದು ಹೇಳಿ ಜನರಲ್ ಹ್ಯಾರಿಸ್ ಸಾಹೇಬರು ದೊರೆಗಳಿಗೂ, ಸಭಾ ಸದಸ್ಯರಿಗೂ ವಂದನೆಯನ್ನರ್ಪಿಸಿ ತಮ್ಮ ಪೀಠದಲ್ಲಿ ಕುಳಿತರು.

ಅನಂತರ ದೊರೆಗಳ ಆಜ್ಞೆಯಂತೆ, ಅರಮನೆಯ ಅಧಿಕಾರಿಗಳು ಜನರಲ್ ಹ್ಯಾರಿಸ್‌ರವರೇ ಮುಂತಾದ ಇಂಗ್ಲಿಷ್ ಸೇನಾಧಿಕಾರಿಗಳಿಗೂ, ಸಭೆಗೆ ಬಂದಿದ್ದ ಇತರ ಅಧಿಕಾರಿಗಳಿಗೂ, ಪ್ರಜಾಪ್ರಮುಖರಿಗೂ ಅವರವರ ಸ್ಥಾನಮಾನಗಳಿಗೆ ತಕ್ಕಂತೆ ವಸ್ತ್ರಾಭರಣಗಳನ್ನೂ ಹಾರ, ವೀಳಯಾದಿಗಳನ್ನೂ ಹಂಚಿದರು.

ಈ ರೀತಿ ದೊರೆಗಳ ಪಟ್ಟಾಭಿಷೇಕ ಮಹೋತ್ಸವವು ಬೆಳೆದ ಬಳಿಕ ಪೂರ್ಣಯ್ಯನವರು ದೊರೆಗಳಿಗೆ ಹಸ್ತಲಾಘವವನ್ನೊಪ್ಪಿಸಿ ಪಲ್ಲಕ್ಕಿಗೆ ಕರೆದು ಕೊಂಡು ಬಂದು ಅದರಲ್ಲಿ ಮುಹೂರ್ತ ಮಾಡಿಸಿದರು.

ದೊರೆಗಳು ಸೇನೆಯ ಮತ್ತು ಸೇನಾಧಿಕಾರಿಗಳ ವಂದನೆಗಳನ್ನೊಪ್ಪಿಸಿ ಕೊಂಡು ಮೆರವಣಿಗೆಯಲ್ಲಿ ನಜರ್‌ಬಾದ್‌ನ ಬಿಡಾರಕ್ಕೆ ಚಿತ್ತೈಸಿದರು.

§

"ಗುಡ್ ಈವಿನಿಂಗ್ ಜನರಲ್ ಹ್ಯಾರಿಸ್. ತಮ್ಮ ಅಪೇಕ್ಷೆಯಂತೆ ತಮ್ಮ ಭೇಟಿಗೆ ಬಂದಿದ್ದೇನೆ."

"ಒಳ್ಳೆಯದು. ಕುಳಿತುಕೋ ವೆಲ್ಲೆಸ್ಲಿ. ಈ ಮಧ್ಯಾಹ್ನ ನಡೆದ ಪಟ್ಟಾಭಿಷೇಕ ಮತ್ತು ಇನ್ನು ಕೆಲವು ವಿಚಾರಗಳನ್ನು ಕುರಿತು ನಿನ್ನೊಡನೆ ಮಾತನಾಡೋಣ ಎನಿಸಿತು. ಅದಕ್ಕಾಗಿ ಕರೆಸಿಕೊಂಡೆ."

"ಆಗಲಿ; ಅದಕ್ಕೇನು; ಮಾತನಾಡೋಣ."

"ಟಿಪ್ಪೂ ಸತ್ತಮೇಲೆ ಅವನ ರಾಜ್ಯದ ಪುನರ್ವ್ಯವಸ್ಥೆ ಸಂಬಂಧದಾ ನಾವು ನಾನಾ ಸಮಸ್ಯೆಗಳನ್ನು ಇದಿರಿಸಬೇಕಾಯಿತು. ಆದರೂ ಈ ಸಮಸ ಗಳೆಲ್ಲಾ ಪರಿಹಾರವಾಗಿ, ನಮ್ಮ ಮನಸ್ಸಿಗೆ ಸಮಾಧಾನವಾಗುವಂಥ ಒಂದ ವ್ಯವಸ್ಥೆ ರೂಪುಗೊಂಡಿದ್ದು ನಮ್ಮ ಅದೃಷ್ಟ. ಏನೆನ್ನುತ್ತಿ ವೆಲ್ಲೆಸ್ಲಿ."

"ನನ್ನ ಅಭಿಪ್ರಾಯವೂ ಅದೇ. ಮೈಸೂರು ರಾಜಮನೆತನದ ವ್ಯವಹಾರಕ್ಕೆ ಸಂಬಂಧಿಸಿದಂತೆ ತಿರುಮಲರಾವ್ ಸಮಸ್ಯೆ ದೊಡ್ಡ ತಲೆನೋವಾಗುವುದೇನೋ ಎಂಬ ಭಯ ನನಗಿತ್ತು. ದೇವರ ದಯದಿಂದ ಅದೂ ಸುಲಭವಾಗಿಯೇ ಇತ್ಯರ್ಥ ವಾಯಿತು."

"ರಾಣೀಸಾಹಿಬಾರವರ ದೂರದೃಷ್ಟಿಯೇ ಅದಕ್ಕೆ ಕಾರಣವೆಂದು ನನ್ನ ಗ್ರಹಿಕೆ. ಅವರ ಪರಿಚಯವಾದಂದಿನಿಂದ ನೋಡುತ್ತಿದ್ದೇನಲ್ಲ–ಅವರು ತುಂಬ ಬುದ್ಧಿವಂತರು; ವಿವೇಕಿಗಳು; ಅಪಾರ ಲೋಕಾನುಭವವುಳ್ಳವರು; ವ್ಯವಹಾರ ಚತುರರು."

"ನಿಜ. ಪಟ್ಟಾಭಿಷೇಕ ಮಹೋತ್ಸವದ ಸಂಬಂಧದಲ್ಲಿ ಅವರು ಪೂರ್ಣಯ್ಯ ನವರಿಗೆ ಕೊಟ್ಟ ಸೂಚನೆ, ಅವರ ವಿಚಾರವಾಗಿ ನನಗಿದ್ದ ಗೌರವವನ್ನು ಹೆಚ್ಚಿಸಿತು.—"

"ಯಾವ ವಿಚಾರ? ವೆಲ್ಲೆಸ್ಲಿ ?"

"ಯಾವ ಭೇದಭಾವವನ್ನೂ ಇಡದೆ ಎಲ್ಲ ಜಾತಿಮತಗಳ ಜನರನ್ನೂ ಪಟ್ಟಾಭಿಷೇಕಕ್ಕೆ ಆಹ್ವಾನಿಸಬೇಕೆಂದು ಸೂಚಿಸಿದ್ದು."

"ಹೌದು; ಅದರ ಶುಭ ಪರಿಣಾಮವನ್ನು ಈ ಬೆಳಗ್ಗೆ ಕಂಡೆವಲ್ಲ; ಸಂಸ್ಥಾನದ ಮುಸ್ಲಿಂ ಪ್ರಮುಖರಲ್ಲಿ ಅನೇಕರು ಸಮಾರಂಭಕ್ಕೆ ಬಂದಿದ್ದರು—ಗುಲಾಂ ಆಲಿ ಖಾನ್, ಆಲಿ ರಜ, ಸೈಯ್ಯದ್ ಮಹಮ್ಮದ್ ಖಾನ್—"

"ಅವರನ್ನೆಲ್ಲ ಆಹ್ವಾನಿಸಿದ್ದು ಒಳ್ಳೆಯದಾಯಿತು. ಅವರು ಈ ಸಮಾರಂಭದಲ್ಲಿ ಭಾಗವಹಿಸಿದ್ದು ಇನ್ನೂ ಒಳ್ಳೆಯದಾಯಿತು. ಇದನ್ನು ನೋಡಿದರೆ, ರಾಣೀಸಾಹಿಬಾರವರು ಇಂದಿನ ಸ್ಥಿತಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ತಮ್ಮ ಹಿಂದೂ, ಮುಸ್ಲಿಮ್ ಪ್ರಜೆಗಳ ನಡುವೆ ವಿರಸ ಬೆಳೆಯದಂತೆ ನೋಡಿಕೊಳ್ಳಲು ಮನಸ್ಸು ಮಾಡಿದ್ದಾರೆ. ತಮ್ಮ ಆಡಳಿತಕ್ಕೆ ಮುಸ್ಲಿಮ್ ಪ್ರಜೆಗಳ ಬೆಂಬಲವನ್ನು ಗಳಿಸಿಕೊಳ್ಳಲು ಎಲ್ಲ ಪ್ರಯತ್ನಗಳನ್ನೂ ನಡೆಸುತ್ತಾರೆ ಎಂದು ನನಗೆ ತೋರುತ್ತದೆ."

"ನಿಜ ವೆಲ್ಲೆಸ್ಲಿ. ರಾಣೀಸಾಹಿಬಾರವರ ದೂರದೃಷ್ಟಿ ಪ್ರಶಂಸಾರ್ಹವಾದದ್ದು. ಆಡಳಿತದ ವಿಚಾರದಲ್ಲಿ ಅವರೂ ಪೂರ್ಣಯ್ಯನವರೂ ಸಹಕರಿಸಿ ನಡೆಯುವುದಾದರೆ, ಮೈಸೂರು ರಾಜ್ಯದ ಸುಸ್ಥಿತಿಯ ವಿಚಾರವಾಗಿ ನಾವು ಇನ್ನು ಸ್ವಸ್ಥಚಿತ್ತರಾಗಿರಬಹುದು."

"ಹೌದು. ಆದರೆ ಪೂರ್ಣಯ್ಯನವರ ನೇಮಕದ ಬಗೆಗೆ ರಾಣೀಸಾಹಿಬಾರವರ ಮನಸ್ಸು ಇನ್ನೂ ಒಗ್ಗಿಕೊಂಡಿಲ್ಲ. ಪೂರ್ಣಯ್ಯನವರು ಮಾನವ ಸ್ವಭಾವವನ್ನು ಚೆನ್ನಾಗಿ ಬಲ್ಲವರು. ಅವರು ರಾಣೀಸಾಹಿಬಾರವರ ಮನಸ್ಸನ್ನು ಒಲಿಸಿಕೊಳ್ಳುವರೆಂದು ನಾನು ನಂಬಿದ್ದೇನೆ. ನಾನು ಇಲ್ಲಿರುವ ತನಕ ಅವರವರ ನಡುವೆ ಅಂಥ ಸಾಮರಸ್ಯವನ್ನು ಸಾಧಿಸಲು ಪ್ರಯತ್ನಿಸುತ್ತೇನೆ."

"ಆ ವಿಚಾರದಲ್ಲಿ ನನಗೆ ಪೂರ್ಣ ನಂಬಿಕೆಯಿದೆ ವೆಲ್ಲೆಸ್ಲಿ. ಇಲ್ಲಿ ರೆಸಿಡೆಂಟಾಗಿ ಉಳಿಯುವ ಕ್ಲೋಸ್‌ಗೂ ನಾವು ಈ ಅಂಶ ಸ್ಪಷ್ಟಪಡಿಸಬೇಕು."

"ರಾಣೀಸಾಹಿಬಾರವರಿಂದ ಮೊದಲ್ಗೊಂಡು ರಾಜಮನೆತನಕ್ಕೆ ಸಂಬಂಧಿಸಿದ ಪ್ರತಿ ವ್ಯಕ್ತಿಯ ವಿಚಾರದಲ್ಲೂ ತುಂಬ ಗೌರವದಿಂದ ವರ್ತಿಸಿ ಅವರ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಳ್ಳಬೇಕೆಂದು ಪೂರ್ಣಯ್ಯನವರಿಗೂ ಹೇಳಬೇಕು."

"ಅವರು ತುಂಬಾ ಚತುರರು. ಒಮ್ಮೆ ಹೇಳಿದರೆ ಸಾಕು. ವಿಚಾರವನ್ನೆಲ್ಲಾ ಆಮೂಲಾಗ್ರವಾಗಿ ಗ್ರಹಿಸಿಬಿಡುತ್ತಾರೆ. ರಾಜ್ಯದ ಸುವ್ಯವಸ್ಥೆಗಾಗಿ ಒಡನೆಯೇ ಏನೇನು ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂಬುದನ್ನು ನಾಳೆ ಚರ್ಚಿಸುವುದಾಗಿ ಹೇಳಿದ್ದಾರೆ. ಈ ಚರ್ಚೆಯ ಕಾಲಕ್ಕೆ ಕ್ಲೋಸ್ ಕೂಡ ಇರುತ್ತಾನೆ. ನೀನೂ ಇರಬೇಕು ವೆಲ್ಲೆಸ್ಲಿ. ಎಲ್ಲ ಅಂಶಗಳನ್ನೂ ವಿವರವಾಗಿ ಚರ್ಚಿಸಿ ಈ ರಾಜ್ಯದ ಆಡಳಿತದ ಸಂಬಂಧದಲ್ಲಿ ಒಂದು ಕಾರ್ಯಕ್ರಮವನ್ನು ನಿರ್ಧರಿಸಿಬಿಡೋಣ."

"ಅದು ತುಂಬ ಒಳ್ಳೆಯ ಕೆಲಸ. ಆ ಚರ್ಚೆ ಮುಗಿದ ಮೇಲೆ ಆ ವಿಚಾರ ವಾಗಿ ಗೌರ್ನರ್ ಜನರಲ್‌ರವರಿಗೆ ಒಂದು ವಿವರವಾದ ಪತ್ರ ಬರೆದರೆ—"

"ಬರೆಯೋಣ. ಅದಕ್ಕೆ ಮೊದಲು ಇಂದಿನ ಪಟ್ಟಾಭಿಷೇಕ ಮಹೋತ್ಸವದ ವಿವರಗಳನ್ನು ಕುರಿತು ಒಡನೆಯೇ ಪತ್ರ ಕಳುಹಿಸಬೇಕು. ಅಲ್ಲವೆ ? ಗೌರ್ನರ್ ಜನರಲ್‌ರವರು ಈ ಪತ್ರವನ್ನು ತುಂಬ ಕುತೂಹಲದಿಂದ ನಿರೀಕ್ಷಿಸುತ್ತಿರುತ್ತಾರೆ."

"ಹೌದು. ಇಂದಿನ ಸಮಾರಂಭವನ್ನೆಲ್ಲಾ ವಿವರವಾಗಿ ವರ್ಣಿಸಿ ಬರೆಯ ಬೇಕು."

"ಬರೆಯೋಣ. ಪುಟ್ಟ ಮಹಾರಾಜರವರ ಠೀವಿ, ನಡವಳಿಕೆ ನನಗೆ ತುಂಬ ಮೆಚ್ಚಿಕೆಯಾಯಿತು ವೆಲ್ಲೆಸ್ಲಿ. ಈಗ ಅವರ ವಯಸ್ಸು ಐದೇ ವರ್ಷವಾದರೂ, ಆ ವಯಸ್ಸಿಗೆ ಮೀರಿದ ಪ್ರಜ್ಞೆ, ಗಾಂಭೀರ್ಯಗಳು ಅವರಲ್ಲಿವೆ. ಇಂದಿನ ಸಮಾರಂಭ ದಲ್ಲಿ ಅವರು ರಾಜಪದ್ಧತಿಗಳಿಗೆ ಚೆನ್ನಾಗಿ ಪಳಗಿದ ವ್ಯಕ್ತಿಯಂತೆ ನಡೆದುಕೊಂಡರು. ನಾವು ಅವರನ್ನು ಮೊದಲ ಬಾರಿ ನೋಡಿದಾಗ, ಅವರಲ್ಲಿ ಒಂದು ಪ್ರಬಲ ರಾಜ ವ್ಯಕ್ತಿತ್ವವಿದೆಯೆಂದು ಹುಟ್ಟಿದ ಭಾವನೆ ಇಂದಿನ ಸಮಾರಂಭದಲ್ಲಿ ಅವರು ನಡೆದು ಕೊಂಡ ರೀತಿಯಿಂದ ಇನ್ನಷ್ಟು ದೃಢವಾಯಿತು."

"ಇವೆಲ್ಲ ರಾಣೀಸಾಹಿಬಾರವರು ಆ ರಾಜಕುಮಾರರಿಗೆ ಕೊಟ್ಟಿರುವ ಶಿಕ್ಷಣದ ಪ್ರಭಾವವೆಂದು ನನಗೆ ತೋರುತ್ತದೆ. ಆದ್ದರಿಂದ ಅವರ ರಕ್ಷಣೆಯಲ್ಲಿ ರಾಜಕುಮಾರರು ತಮ್ಮ ಸ್ಥಾನದ ಹೊಣೆಗಾರಿಕೆಯನ್ನು ನಿರ್ವಹಿಸುವಂತೆ ರೂಪು ಗೊಳ್ಳುವರೆಂದು ನಾವು ನಿರೀಕ್ಷಿಸಬಹುದು. ಈ ವಿಚಾರಗಳನ್ನೆಲ್ಲಾ ನಮ್ಮ ಪತ್ರದಲ್ಲಿ ತಿಳಿಸುವುದು ಒಳ್ಳೆಯದು ಜನರಲ್."

"ಗೋಲ್ಡಿಂಗ್‌ಗೆ ಹೇಳಿ ಕಳುಹಿಸುತ್ತೇನೆ. ಅವನಿಗೆ ಈ ಅಂಶಗಳನ್ನೆಲ್ಲಾ ಹೇಳಿ ಅವುಗಳ ಆಧಾರದ ಮೇಲೆ ಗೌರ್ನರ್ ಜನರಲ್ಲಿಗೆ ಒಂದು ಪತ್ರ ಸಿದ್ಧಗೊಳಿಸು ವಂತೆ ಸೂಚಿಸುತ್ತೇನೆ."

" ಆಗಬಹುದು ಜನರಲ್. ಪತ್ರದ ಕರಡು ಪ್ರತಿ ಸಿದ್ಧವಾದ ಮೇಲೆ ಮಂಡಲಿಯುವರು ಅದನ್ನು ಪರಿಶೀಲಿಸಬಹುದು. ಇನ್ನು ನನ್ನ ಬಿಡಾರಕ್ಕೆ ಹೋಗಲು ಅವಕಾಶ ಕೊಡಿ."

" ಪ್ರಿಯ ಕರ್ನಲ್, ನೀವು ನನಗೆ ಕೊಡುತ್ತಿರುವ ಸಹಕಾರಕ್ಕಾಗಿ ಅನೇಕ ವಂದನೆಗಳು."

" ತಮಗೂ ವಂದನೆಗಳು."

§

" ಅಂತು ನಾವು ನಡೆಸಿದ ನಲವತ್ತು ವರ್ಷಗಳ ಹೋರಾಟ ವಿಫಲ ವಾಗಲಿಲ್ಲ."

" ಹೌದು ತಾಯಿ."

" ಹೋರಾಟದಲ್ಲಿ ಗೆಲ್ಲುವುದಕ್ಕಿಂತ, ಗೆಲುವಿನಿಂದ ದೊರೆತ ಫಲವನ್ನು ಉಳಿಸಿಕೊಳ್ಳುವುದು ತುಂಬ ಕಷ್ಟದ ಕೆಲಸ. ಅಲ್ಲವೆ ದಾಸರೆ."

" ಸನ್ನಿಧಾನ ಅಪ್ಪಣೆಕೊಡಿಸಿದ ಮಾತು ಚಿನ್ನದಂಥ ಮಾತು. ಆ ದೇವಿಯ ಕೃಪೆಯಿಂದ ಯದುವಂಶ, ತಮ್ಮ ಗೆಲುವಿನ ಪೂರ್ಣ ಫಲವನ್ನು ಚಿರಕಾಲ ಅನುಭವಿಸುವಂತಾಗಲಿ ಎಂದು ಹಾರಯಿಸುತ್ತೇನೆ."

" ತಮ್ಮಂಥ ಹಿರಿಯರ, ತಪಸ್ವಿಗಳ ಆಶೀರ್ವಾದ ಫಲದಿಂದ, ಅನೇಕಮಂದಿ ಹಿತಚಿಂತಕರ ಪರಿಶ್ರಮದಿಂದ ನಮಗೆ ಈ ಗೆಲುವು ದೊರೆಯಿತು. ಅದೇನೋ ಸಂತೋಷದ ವಿಚಾರವೇ: ಆದರೆ ಒಂದು ವಿಚಾರ ಮಾತ್ರ ನನ್ನ ಮನಸ್ಸಿಗೆ ತುಂಬ ನೋವನ್ನುಂಟುಮಾಡಿತು. ತಿರುಮಲರಾಯರಿಗೆ ನಾವು ಕೊಟ್ಟಿದ್ದ ಮಾತು ಉಳಿಸಿಕೊಳ್ಳಲಾಗಲಿಲ್ಲ."

" ಆ ವಿಚಾರದಲ್ಲಿ ನನ್ನ ಮನಸ್ಸೂ ತುಂಬ ನೋವನ್ನನುಭವಿಸಿತು. ಆದರೇನು ಮಾಡುವುದು ? ನಮ್ಮ ಪ್ರಯತ್ನ ಫಲಿಸಲಿಲ್ಲ, ದೈವೇಚ್ಛೆ ಎಂದು ಕೊಂಡೆ."

" ಹಾಗೆನ್ನುತ್ತೀರಾ ದಾಸರೆ ?"

" ಅಷ್ಟೆಯೆ. ನಾವೆಷ್ಟು ಪ್ರಯತ್ನಪಟ್ಟಿದ್ದರೂ ನಮ್ಮ ಪ್ರಯತ್ನ ಫಲಿಸು ತ್ತಿರಲಿಲ್ಲ. ಕಂಪನಿ ಸರ್ಕಾರ ಈ ವಿಚಾರದಲ್ಲಿ ತನ್ನ ನಿರ್ಣಯವನ್ನು ಬದಲಾಯಿಸು ತ್ತಿರಲಿಲ್ಲ. ಒಂದು ದೃಷ್ಟಿಯಿಂದ ಅವರ ವಾದವೂ ಸರಿ. ರಾಯರು ಕುಶಲ

ರಾಯಭಾರಿಗಳು ಎಂದೇನೋ ಒಪ್ಪಿಕೊಳ್ಳಬಹುದು. ಆದರೆ ಅವರಿಗೆ ಆಡಳಿತದ ಅನುಭವ ಏನೇನೂ ಇಲ್ಲವಲ್ಲ. ಈ ವಿಚಾರದಲ್ಲಿ—"

"ಪೂರ್ಣಯ್ಯ ಪಳಗಿದ ಕೈ. ಅದರಲ್ಲಿ ಅನುಮಾನವಿಲ್ಲ. ಆದರೂ ಅವನು ನಮ್ಮ ವಂಶದ ಹಿತಕ್ಕೆ ವಿರುದ್ಧವಾಗಿ—"

"ಸನ್ನಿಧಾನ ಇನ್ನು ಆ ವಿಚಾರ ಮರೆತುಬಿಡಬೇಕು. ಸಂಸ್ಕೃತ ಭಾಷೆಯಲ್ಲಿ ಒಂದು ಉತ್ತಮ ರಾಜಕೀಯ ನಾಟಕವಿದೆ ತಾಯಿ. – ಮುದ್ರಾರಾಕ್ಷಸ – ಎಂತ. ಚಾಣಕ್ಯ ಮುನಿ ಚಂದ್ರಗುಪ್ತ ರಾಜಕುಮಾರನನ್ನು ನಂದರ ಸಿಂಹಾಸನದಲ್ಲಿ ಬಲವಾಗಿ ಪ್ರತಿಷ್ಠಿಸಿದ ಕಥೆ ಅದು. ಅಲ್ಲೂ ಇಂಥದೇ ಒಂದು ಸಂದರ್ಭ ಬರುತ್ತದೆ. ಅಮಾತ್ಯ ರಾಕ್ಷಸ ನಂದರ ಮಂತ್ರಿ. ಆ ಸ್ಥಾನಪ್ರಯುಕ್ತ ಚಂದ್ರಗುಪ್ತನ ವೈರಿ. ನಂದರು ಯುದ್ಧದಲ್ಲಿ ಸಾಯುತ್ತಾರೆ. ಚಂದ್ರಗುಪ್ತ ರಾಜ್ಯಾಧಿಕಾರಕ್ಕೆ ಬರುತ್ತಾನೆ. ಆಗ ರಾಕ್ಷಸ ಪರದೇಶಗತನಾಗಿ ಚಂದ್ರಗುಪ್ತನ ವಿನಾಶಕ್ಕಾಗಿ ನಾನಾ ತಂತ್ರಗಳನ್ನು ನಡೆಸುತ್ತಾನೆ. ಆರ್ಯ ಚಾಣಕ್ಯರ ರಾಜನೀತಿಯ ಫಲವಾಗಿ ಆ ತಂತ್ರಗಳೆಲ್ಲಾ ವಿಫಲವಾಗುತ್ತವೆ. ಚಾಣಕ್ಯರು ತಪಸ್ವಿಗಳು. ಚಂದ್ರಗುಪ್ತನಿಗೆ ಸರಿಯಾದ ಮಂತ್ರಿಯನ್ನು ಒದಗಿಸಿಕೊಟ್ಟು ತಾವು ತಪೋವನಕ್ಕೆ ಹೋಗಬೇಕೆಂದು ನಿರ್ಧರಿಸುತ್ತಾರೆ. ಆಗ ಅವರು ಚಂದ್ರಗುಪ್ತನ ಮಂತ್ರಿಯಾಗಿರಲು ಯಾರನ್ನು ಹಿಡಿದು ತರುತ್ತಾರೆ ಗೊತ್ತೆ ತಾಯಿ?—"

"ಹೇಳಿ ದಾಸರೆ."

"ಅಮಾತ್ಯ ರಾಕ್ಷಸನನ್ನೇ! ಈ ಹೆಸರು ಹೇಳಿದರೆ ಕಿಡಿಕಿಡಿಯಾಗುತ್ತಿದ್ದ ಚಂದ್ರಗುಪ್ತನಿಗೆ ಆರ್ಯ ಚಾಣಕ್ಯರು ಏನು ಹೇಳುತ್ತಾರೆ ಗೊತ್ತೆ ತಾಯಿ: 'ಅಮಾತ್ಯ ರಾಕ್ಷಸ ಅನೇಕ ವರ್ಷಗಳಿಂದ ಈ ರಾಜ್ಯದ ಆಡಳಿತ ನಡೆಸಿ ರಾಜ್ಯದ ಬಲಾಬಲ ಹಿತಾಹಿತಗಳನ್ನು ಬಲ್ಲವನು. ಅವನೇ ನಿನ್ನ ಮಂತ್ರಿಯಾಗಲು ತಕ್ಕವನು. ಅರಸ ಬದುಕಿದ್ದಾಗ ಅವನ ಪರವಾಗಿ ಹೋರಾಡುವವರು ಬೇಕಾದಷ್ಟು ಮಂದಿ ಇರುತ್ತಾರೆ. ಮುಂದೆ ಒಳ್ಳೆಯ ಕಾಲ ಬಂದಾಗ ತಮಗೆ ಲಾಭ ದೊರೆಯುವುದೆಂದು ನಂಬಿ ವಿಪತ್ತಿನಲ್ಲಿರುವ ಅರಸನಿಗೆ ಬೆಂಬಲವಾಗಿ ನಿಲ್ಲುವವರೂ ಇದ್ದಾರೆ. ಆದರೆ ರಾಜ ಸತ್ತಮೇಲೆ, ಅವನ ರಾಜ್ಯ ಪರಹಸ್ತಗತವಾದ ಮೇಲೆ, ಅವನ ವಂಶದ ಹಿತವನ್ನು ಲಕ್ಷ್ಯಿಸಿ ಹೋರಾಡುವವರು ಯಾರು? ಅಂಥ ಸ್ವಾಮಿನಿಷ್ಠೆ ಯಾರಿಗಿರುತ್ತದೆ? ಅಂಥ ನಿಷ್ಠೆಯಿರುವುದರಿಂದಲೇ ಅಮಾತ್ಯ ರಾಕ್ಷಸ ನಿನ್ನ ಮಂತ್ರಿಯಾಗಲು ತಕ್ಕವನು. ಅವನು ನಿನ್ನ ವಿರೋಧಿ

ಯಾಗಿರುವವರೆಗೆ ನಿನ್ನ ಕಡುವೈರಿ. ಆದರೆ ನಿನ್ನ ಮಂತ್ರಿತ್ವವನ್ನೊಪ್ಪಿಕೊಂಡ ಮೇಲೆ ನಿನ್ನನ್ನು ತನ್ನ ಕಣ್ಣುಗುಡ್ಡೆಯಂತೆ ರಕ್ಷಿಸಿಕೊಳ್ಳುತ್ತಾನೆ' ಎಂದು ಹೇಳಿ ಬಹಳವಾದ ಪ್ರಯತ್ನ ನಡೆಸಿ ಅಮಾತ್ಯ ರಾಕ್ಷಸನನ್ನು ಚಂದ್ರಗುಪ್ತನ ಸಚಿವ ನನ್ನಾಗಿ ಮಾಡುತ್ತಾರೆ. ನಂದರನ್ನು ಗೆದ್ದುದಕ್ಕಿಂತ ರಾಕ್ಷಸನನ್ನು ಚಂದ್ರಗುಪ್ತನ ಸೇವೆಗೆ ನಿಯೋಜಿಸಿದ್ದು ಹೆಚ್ಚಿನ ಸಾಧನೆ. ಆದರಿಂದ ತಾವು ಗಳಿಸಿದ ಯುದ್ಧ ವಿಜಯ ಸಾರ್ಥಕವಾಯಿತು ಎಂದು ಆರ್ಯ ಚಾಣಕ್ಯರು ಭಾವಿಸುತ್ತಾರೆ ತಾಯಿ."

"ಈ ನಾಟಕ ತುಂಬ ಚೆನ್ನಾಗಿರುವಂತೆ ಇದೆ. ಇದನ್ನು ನೀವು ನಮಗೆ ಓದಿ ಹೇಳಬೇಕು."

"ಆಗಲಿ ತಾಯಿ. ತಮ್ಮಂಥವರು ಕೇಳಬೇಕಾದಂಥ ಸಮೀಚೀನವಾದ ನಾಟಕ ಇದು. ರಾಜಕೀಯ ವ್ಯವಹಾರದಲ್ಲಿ ತೊಡಗಿರುವವರಿಗೆ ಈ ನಾಟಕ ಒಂದು ವಿಶ್ವಕೋಶ ತಾಯಿ. ಕು ಮಾ ರ ರಿ ಗೆ – ಬಾಯಿ ತಪ್ಪಿತು – ಖಾಸಾ ಸನ್ನಿಧಾನದವರಿಗೆ ಈ ನಾಟಕದ ಪಾಠ ಹೇಳಿಸಬೇಕು."

"ನೋಡಿದಿರಾ ದಾಸರೆ, ಪಟ್ಟಾಭಿಷೇಕದ ಗಲಭೆ ಮುಗಿಯಲಿ ಎಂದಿದ್ದೆವು. ಶ್ರೀನಿವಾಸಾಚಾರ್ಯರನ್ನು ಕೇಳಿ ಕುಮಾರರ ಅಕ್ಷರಾಭ್ಯಾಸ ಮಹೋತ್ಸವವನ್ನು ಬೆಳೆಸಲು ಒಂದು ಮುಹೂರ್ತವನ್ನು ಗೊತ್ತುಮಾಡಿ."

"ಆಗಲಿ ತಾಯಿ."

"ಕುಮಾರರಿಗೆ ಅತ್ಯುತ್ತಮವಾದ ವಿದ್ಯಾಶಿಕ್ಷಣ ಕೊಡಿಸಬೇಕು ದಾಸರೆ."

"ಆ ಕಾರ್ಯಕ್ಕೆ ದಕ್ಷರಾದ ವಿದ್ವಾಂಸರನ್ನು ನಿಯಮಿಸೋಣ."

"ಅದರ ಜೊತೆಗೆ ನೀವೂ ಆ ವಿಚಾರದಲ್ಲಿ ಆಸಕ್ತಿ ವಹಿಸಿ ಅವರ ಪಾಠ ಪ್ರವಚನಗಳು ಸರಿಯಾಗಿ ನಡೆಯುವಂತೆ ನೋಡಿಕೊಳ್ಳಬೇಕು."

"ಅಪ್ಪಣೆ ಆದಂತೆ."

"ಆದಾಯಿತಲ್ಲ.... ಇನ್ನೊಂದು ಮುಖ್ಯ ವಿಚಾರ. – ನಿಮಗೆ ನಾವು ಇನ್ನೂ ಹಿಂಸೆ ಕೊಡಬೇಕಾಗಿದೆ."

"ತಮ್ಮ ಸೇವೆಯನ್ನು ನಾನೆಂದೂ ಹಿಂಸೆಯೆಂದು ಭಾವಿಸಿಲ್ಲ ತಾಯಿ. ಸಂತೋಷದಿಂದ ಮಾಡುತ್ತೇನೆ."

"ಅದು ನಮಗೆ ಗೊತ್ತಿಲ್ಲವೆ ? ಈವರೆಗೂ ನಮ್ಮ ಕೆಲಸಕ್ಕಾಗಿ ಬಿಡುವಿಲ್ಲದೆ ಓಡಾಡಿದಿರಿ. ಇನ್ನುಮೇಲಾದರೂ ನಿಮಗೆ ವಿಶ್ರಾಂತಿಯಿರಬೇಡವೆ ? ಇದೊಂದು ಕೆಲಸವಾಗಲಿ. ಆಮೇಲೆ ನಿಮಗೆ ಇಂಥಾ ತೊಂದರೆ ಕೊಡುವುದಿಲ್ಲ."

"ಈಗೇನುಮಾಡಬೇಕಾಗಿದೆ. ಸನ್ನಿಧಾನ ಅಪ್ಪಣೆ ಮಾಡಬೇಕು."

"ನೀವು ತಿರುಮಲರಾಯರನ್ನು ಕಾಣಬೇಕು. ನೆನ್ನೆಯ ದಿನವೇ ಅವರು ಚನ್ನಪುರಿಗೆ ಹೊರಟರಂತೆ. ನೀವು ಅವರನ್ನು ಹಿಂಬಾಲಿಸಿ ಹೋಗಿ, ಅವರನ್ನು ಅರ್ಧ ದಾರಿಯಲ್ಲಿ ಸಂಧಿಸಿದರೂ ಸರಿಯೇ –"

"ಅರ್ಧ ದಾರಿಯಲ್ಲಿ ಸಂಧಿಸಬೇಕಾದರೆ ಅವರು ಯಾವ ಮಾರ್ಗದಲ್ಲಿ ಪ್ರಯಾಣ ಮಾಡುತ್ತಾರೆಂಬುದು ನಮಗೆ ಗೊತ್ತಾಗಬೇಕಲ್ಲ—"

"ಆಯಿತು. ಅದು ಸಾಧ್ಯವಾದರೆ ಸರಿ. ಇಲ್ಲದಿದ್ದರೆ ಚನ್ನಪುರಿಯಲ್ಲೇ ಅವರನ್ನು ನೋಡಿ."

"ಆಗಲಿ ತಾಯಿ."

"ಅವರನ್ನು ಕಂಡು – ಅವರ ಸಂಬಂಧದ ವ್ಯವಹಾರ ಇಲ್ಲಿ ಹೇಗೆ ಹೇಗೆ ನಡೆಯಿತೆಂಬುದನ್ನು ವಿವರವಾಗಿ ಹೇಳಿ."

"ಹೇಳುತ್ತೇನೆ ತಾಯಿ. ಇದರಲ್ಲಿ ಸನ್ನಿಧಾನದವರದು ಯಾವ ದೋಷವೂ ಇಲ್ಲ; ಈ ವಿಚಾರದಲ್ಲಿ ಕಂಪನಿ ಸರ್ಕಾರದ ನಿರ್ಣಯವನ್ನು ಒಪ್ಪಿಕೊಳ್ಳದಿದ್ದರೆ, ಅದುವರೆಗಿನ ಹೋರಾಟದ ಫಲವೆಲ್ಲಾ ವ್ಯರ್ಥವಾದೀತೇನೋ ಎಂಬ ಶಂಕೆ ಯಿಂದ ಆ ನಿರ್ಣಯವನ್ನು ಒಪ್ಪಿಕೊಳ್ಳಲಾಯಿತೆಂದು ಹೇಳುತ್ತೇನೆ."

"ಅಂತು ಅವರ ವಿಚಾರದಲ್ಲಿ ನಾವು ದ್ರೋಹ ಮಾಡಿದೆವೆಂದು ಅವರು ಭಾವಿಸುವಂತಾಗಬಾರದು."

"ಹಾಗಾಗದಂತೆ ನೋಡಿಕೊಳ್ಳುತ್ತೇನೆ ತಾಯಿ,"

"ರಾಯರು ನಮಗೆ ಸಲ್ಲಿಸಿರುವ ಸೇವೆಗೆ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದು. ಅವರು ನಮ್ಮ ಪಕ್ಷ ವಹಿಸಿದ್ದರಿಂದ, ಅವರು ಮಾತ್ರವಲ್ಲ ಅವರ ಬಂಧುಬಳಗದವರೆಲ್ಲಾ ನಾನಾವಿಧವಾದ ಕಷ್ಟ ನಷ್ಟಗಳಿಗೆ ಗುರಿಯಾದರು. ಇದೆಲ್ಲಾ ನಮಗೆ ತಿಳಿದಿದೆ. ನಾವು ಮರೆತಿಲ್ಲ. ಮರೆಯುವಂತೆಯೂ ಇಲ್ಲ. ಪ್ರಧಾನಿ ಕೆಲಸದ ಸಂಬಂಧದಲ್ಲಿ ನಾವು ಹೇಳಿದ್ದಂತೆ ನಡೆದುಕೊಳ್ಳುವುದು ಸಾಧ್ಯವಾಗಲಿಲ್ಲ. ಅದು ನಮ್ಮ ಕೈಮೀರಿ ನಡೆದ ವಿಚಾರ. – ಇವನ್ನೆಲ್ಲಾ ಅವರಿಗೆ ಹೇಳಿ – ನಮ್ಮಿಂದ ಅವರಿಗೆ, ಅವರ ಬಂಧುಮಿತ್ರರಿಗೆ ಏನು ಕಾರ್ಯವಾಗಬೇಕೆಂಬು ದನ್ನು ತಿಳಿದು ಬನ್ನಿ. ಅದನ್ನು ನಮ್ಮ ಕೆಲಸವೆಂದು ತಿಳಿದು ನಡೆಸಿಕೊಡೋಣ. ಅಂತು ರಾಯರ ಮನಸ್ಸಿನ ನೋವು ಕಳೆದು ಅವರಿಗೆ ಸಂತೋಷವಾಗಲು ಏನು ಮಾಡಬಹುದು ತಿಳಿದುಕೊಳ್ಳಿ. ಅವರ ಅಪೇಕ್ಷೆಯನ್ನು ನಡೆಸಿಕೊಡೋಣ."

"ಅಮಾವಾಸ್ಯೆ ಕಳೆದುಕೊಂಡು ಹೊರಡುತ್ತೇನೆ."

"ಹಾಗೇ ಮಾಡಿ."

"ನನಗೆ ಅಪ್ಪಣೆ ಕೊಡಿ" ಎಂದು ದಾಸರು ಮೇಲಕ್ಕೇಳುವ ಹೊತ್ತಿಗೆ ಚಾಮುಂಡಿ ಸನ್ನಿಧಾನಕ್ಕೆ ಬಂದು, "ದಿವಾನ್ ಪೂರ್ಣಯ್ಯನವರು ಸನ್ನಿಧಾನದ ದರ್ಶನಕ್ಕಾಗಿ ಬಂದಿದ್ದಾರೆ" ಎಂದು ಬಿನ್ನವಿಸಿಕೊಂಡಳು. ಮಹಾಮಾತೃಶ್ರೀಯವರು ದಾಸರನ್ನು ಕುಳಿತುಕೊಳ್ಳುವಂತೆ ಸಂಜ್ಞೆಮಾಡಿ, ಚಾಮುಂಡಿಗೆ "ಅವರು ಒಳಕ್ಕೆ ಬರಲಿ" ಎಂದರು.

ಪೂರ್ಣಯ್ಯನವರು ಒಳಕ್ಕೆ ಬಂದು ಮಹಾಮಾತೃಶ್ರೀಯವರಿಗೂ ದಾಸರಿಗೂ ನಮಸ್ಕರಿಸಿದರು. ಮಹಾಮಾತೃಶ್ರೀಯವರು ಅವರನ್ನು ಕುರಿತು :

"ಬನ್ನಿ ದಿವಾನರೇ, ಕುಳಿತುಕೊಳ್ಳಿ." ಎಂದರು.

"ಅಪ್ಪಣೆ. ಸಂಸ್ಥಾನದ ಆಡಳಿತಕ್ಕೆ ಸಂಬಂಧಿಸಿದಂತೆ ಕೆಲವು ವಿಚಾರಗಳನ್ನು ಸನ್ನಿಧಾನದಲ್ಲಿ ಬಿನ್ನವಿಸಿಕೊಳ್ಳಬೇಕಾಗಿದೆ."

"ಹೇಳಿ ದಿವಾನರೆ. ದಾಸರೊಬ್ಬರಲ್ಲದೆ ಇಲ್ಲಿ ಇನ್ನಾರೂ ಇಲ್ಲ."

"ಅಂಥ ರಹಸ್ಯ ವಿಚಾರವೇನಲ್ಲ. ಇಂದು ನಮ್ಮ ಸಂಸ್ಥಾನದಲ್ಲಿ ಯಾವ ವ್ಯವಸ್ಥೆಯೂ ಕೆಲಸ ಮಾಡುತ್ತಿಲ್ಲ."

"ಹೋರಾಟದ ಪರಿಣಾಮ ಯಾವಾಗಲೂ ಹಾಗೆಯೇ. ಆದರಿಂದ ಎಲ್ಲ ವ್ಯವಸ್ಥೆಗಳೂ ಭಂಗವಾಗುತ್ತವೆ."

"ಆದ್ದರಿಂದ ಸಂಸ್ಥಾನಾಮುಳೆ ಯಾವುದಾದರೊಂದು ಆಡಳಿತವ್ಯವಸ್ಥೆಯನ್ನು ಜಾರಿಗೆ ತರತಕ್ಕದ್ದು ಆವಶ್ಯಕ."

"ಖಂಡಿತವಾಗಿ. ತಡವಿಲ್ಲದೆ ಆ ಕೆಲಸ ಸಾಧಿಸಬೇಕು, ದಿವಾನರೆ."

"ಆ ವಿಚಾರದಲ್ಲಿ ಸನ್ನಿಧಾನದ ನಿರ್ದೇಶನವನ್ನು ಪಡೆಯಲು ಬಂದಿದ್ದೇನೆ."

"ಒಳ್ಳೆಯದು. ನಮ್ಮ ರಾಜ್ಯದಲ್ಲಿ, ನಮ್ಮ ಹಿರಿಯರ ಕಾಲದಿಂದ ಒಂದು ಆಡಳಿತ ವ್ಯವಸ್ಥೆಯಿತ್ತು."

"ಹೌದು. ಚಿಕ್ಕದೇವರಾಜಒಡೆಯರು ಆ ವಿಚಾರದಲ್ಲಿ ತುಂಬ ಒಳ್ಳೆಪದ್ಧತಿಗಳನ್ನು ಆಚರಣೆಗೆ ತಂದರು."

"ಇತ್ತೀಚೆಗೆ ಕಾರಣಾಂತರಗಳಿಂದ ಏನೇನೋ ಬದಲಾವಣೆಗಳಾಗಿವೆ—"

"ಆಗಿವೆ ತಾಯಿ"

"ಅವುಗಳಲ್ಲಿ ಜನಗಳಿಗೆ, ಆಡಳಿತಕ್ಕೆ ಅನುಕೂಲವಾದಂಥವು, ಸಹಾಯ

ವಾಗುವಂಥವು ಇದ್ದರೆ ಅವನ್ನು ಉಳಿಸಿಕೊಳ್ಳಿ. ನಾವು ಬೇಡವೆನ್ನುವುದಿಲ್ಲ. ಆದರೆ, ಹಿಂದೆ ನಮ್ಮ ರಾಜವಂಶದ ಹಿರಿಯರು ಹಾಕಿದ ಮಾರ್ಗವನ್ನೇ ತಳಹದಿಯಾಗಿಟ್ಟುಕೊಳ್ಳಿ."

"ಸನ್ನಿಧಾನದ ಅಪ್ಪಣೆ ಅಮೂಲ್ಯವಾಗಿದೆ. ಅದನ್ನು ತಪ್ಪದೆ ಅನುಸರಿಸುತ್ತೇನೆ."

"ಒಳ್ಳೆಯದು. ಇನ್ನೊಂದು ವಿಚಾರ ದಿವಾನರೆ. ರಾಜ್ಯದ ಆಡಳಿತ ಒಂದು ಕೈಯಿಂದ ಇನ್ನೊಂದು ಕೈಗೆ ಬದಲಾಯಿಸಿದಾಗ, ವ್ಯಕ್ತವಾಗಿ ಅವ್ಯಕ್ತವಾಗಿ ಎಷ್ಟೋ ವ್ಯಕ್ತಿಗಳಿಗೆ ಸಂಸ್ಥೆಗಳಿಗೆ ಅನ್ಯಾಯವಾಗುತ್ತದೆ. ಅನಾನುಕೂಲ ಉಂಟಾಗುತ್ತದೆ."

"ಸನ್ನಿಧಾನ ಅಪ್ಪಣೆ ಕೊಡಿಸಿದ್ದು ಅರ್ಥವಾಯಿತು. ಅರಸರ ಧರ್ಮದಲ್ಲಿ, ಆಡಳಿತದ ರೀತಿಯಲ್ಲಿ ಬದಲಾವಣೆಗಳಾದ ಇಂಥ ಅನ್ಯಾಯಗಳು ಅನಾನುಕೂಲಗಳು ಉಂಟಾಗುವುದು ಸಹಜ. ಅದನ್ನು ಸರಿಪಡಿಸುತ್ತೇನೆ."

"ದಿವಾನರೇ ನಮಗೆ ತಿಳಿದ ಮಟ್ಟಿಗೆ ಅನೇಕ ಹಿಂದೂ ದೇವಾಲಯಗಳು, ಗುರುಪೀಠಗಳು ಇಂಥ ಅನ್ಯಾಯಕ್ಕೆ ಈಡಾಗಿವೆ. ಅವನ್ನು ಆದಷ್ಟು ಶೀಘ್ರವಾಗಿ—"

"ಸರಿಪಡಿಸಲು ಪ್ರಯತ್ನಿಸುತ್ತೇನೆ ತಾಯಿ."

"ಅಷ್ಟುಮಾತ್ರವಲ್ಲ. ಇನ್ನೊಂದು ವಿಚಾರದಲ್ಲೂ ನಾವು ಎಚ್ಚರಿಕೆಯಿಂದ ವರ್ತಿಸಬೇಕು."

"ಸನ್ನಿಧಾನದ ಅಪ್ಪಣೆಯಾದಂತೆ ನಡೆದುಕೊಳ್ಳುತ್ತೇನೆ."

"ನಾವು ವೈದಿಕ ಧರ್ಮವನ್ನನುಸರಿಸುತ್ತೇವೆಯಾದರೂ, ನಮಗೆ ಯಾವ ಧರ್ಮದ ವಿಚಾರದಲ್ಲೂ ದ್ವೇಷಭಾವವಿಲ್ಲ. ನಮ್ಮ ಪ್ರಜೆಗಳ ಧರ್ಮ ಯಾವುದೇ ಆಗಲಿ ಅವರು ನಮ್ಮ ಪ್ರಜೆಗಳು ಎಂಬುದನ್ನು ನಾವು ಮರೆಯುವುದಿಲ್ಲ. ಅವರು ನಮ್ಮ ಧರ್ಮದ ಅನುಯಾಯಿಗಳಲ್ಲವೆಂದು ಅವರ ಹಿತಕ್ಕೆ ಯಾವ ವಿಧದಲ್ಲಿಯೂ ತೊಂದರೆಯುಂಟಾಗಬಾರದು. ಅವರ ಮನಸ್ಸಿಗೆ ನೋವುಂಟಾಗಕೂಡದು. ಆದ್ದರಿಂದ ಈ ಹಿಂದೆ ಯಾವ ಧರ್ಮ ಸಂಸ್ಥೆಗಾದರೂ ಅನುಕೂಲಗಳು ಲಭಿಸಿದ್ದರೆ – ಅದನ್ನು ತೆಗೆಯಬಾರದು."

"ಹಾಗಾಗದಂತೆ ನೋಡಿಕೊಳ್ಳುತ್ತೇನೆ."

"ಇನ್ನೊಂದು ವಿಚಾರವೆಂದರೆ – ದೀರ್ಘಕಾಲದ ಯುದ್ಧಗಳಿಗೆ ಸಿಕ್ಕಿ ನಮ್ಮ

ರಾಜ್ಯದ ಜನ ನೊಂದಿದ್ದಾರೆ. ಇನ್ನು ಮುಂದೆ ಅವರ ತೆರಿಗೆಯ ಭಾರವನ್ನು ಆದಷ್ಟು ಕಡಿಮೆ ಮಾಡಲು ಪ್ರಯತ್ನಿಸಿ."

"ರಾಜ್ಯದ ಇಂದಿನ ಸ್ಥಿತಿಗತಿಗಳನ್ನು ಪೂರ್ಣವಾಗಿ ಪರೀಕ್ಷಿಸಿನೋಡಿ, ಈ ವಿಚಾರವಲ್ಲಿ ಎಷ್ಟು ಸಾಧ್ಯವೋ ಅಷ್ಟು ಅನುಕೂಲವನ್ನು ಕಲ್ಪಿಸಲು ಪ್ರಯತ್ನಿಸುತ್ತೇನೆ."

"ನೀವು ಅನುಭವಿಗಳಾದ ಆಡಳಿತಗಾರರು. ನಾವು ನಿಮಗೆ ಈ ವಿಚಾರದಲ್ಲಿ ಹೆಚ್ಚು ಹೇಳಬೇಕಾಗಿಲ್ಲ. ನಮ್ಮ ರಾಜ್ಯದ ಆಡಳಿತ ಸಮರ್ಪಕವಾಗಿದೆಯೆಂದು ಎಲ್ಲರೂ ಒಪ್ಪಿಕೊಳ್ಳುವಂತೆ ಆಗಬೇಕು. ಆ ಕೀರ್ತಿಯನ್ನು ಸಾಧಿಸುವುದಕ್ಕೆ ಏನೇನು ಕಾರ್ಯಗಳನ್ನು ಕೈಗೊಳ್ಳಬೇಕೋ ಅವನ್ನೆಲ್ಲಾ ನೀವು ಆಲೋಚಿಸಿ, ಕೆಲಸಮಾಡಿ."

"ಅಪ್ಪಣೆ."

"ಕುಮಾರರಿಗೆ ವಿದ್ಯಾಭ್ಯಾಸವನ್ನಾರಂಭಿಸಲು ತಕ್ಕ ಮುಹೂರ್ತವನ್ನು ಗೊತ್ತುಮಾಡಿ ನಿಮಗೆ ತಿಳಿಸುತ್ತೇವೆ. ನಿಮ್ಮ ಅಭಿಪ್ರಾಯದಲ್ಲಿ ಅವರಿಗೆ ಶಿಕ್ಷಣ ಕೊಡಲು ಸಮರ್ಥರಾದವರು ಯಾರು ಯಾರು ಇದ್ದಾರೆ–ತಿಳಿಸಿ. ನಾವು ಆ ವಿಚಾರ ಕುರಿತು ಆಲೋಚಿಸಬೇಕಾಗಿದೆ."

"ತಿಳಿಸುತ್ತೇನೆ ತಾಯಿ."

"ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ನೀವು ಮಾಡಿದ್ದ ವ್ಯವಸ್ಥೆ ತುಂಬ ಚೆನ್ನಾಗಿತ್ತು ದಿವಾನರೆ. ನಿಜವಾಗಿ ನನಗೆ ತುಂಬ ಮೆಚ್ಚುಕೆಯಾಯಿತು."

"ತುಂಬ ಚೆನ್ನಾಗಿತ್ತು ತಾಯಿ" ಎಂದು ದಾಸರೂ ಆ ಹೊಗಳಿಕೆಗೆ ತಮ್ಮ ದನಿಗೂಡಿಸಿದರು.

"ನನ್ನ ಈ ಕೆಲಸ ಸನ್ನಿಧಾನಕ್ಕೆ ಮೆಚ್ಚುಕೆಯಾದದ್ದು ನನ್ನ ಸುದೈವವೆಂದು ಭಾವಿಸುತ್ತೇನೆ."

"ಅಪ್ಪಣೆಯಾದರೆ—"

"ಹೋಗಿಬನ್ನಿ ದಿವಾನರೇ."

ಪೂರ್ಣಯ್ಯನವರು ಮಹಾಮಾತೃಶ್ರೀಯವರಿಗೂ, ದಾಸರಿಗೂ ನಮಸ್ಕರಿಸಿ ಹೊರಟು ಹೋದರು.

§

ಟಿಪ್ಪೂ ಸುಲ್ತಾನನ ರಾಜ್ಯದ ಒಂದು ಭಾಗ ಅವನು ಸತ್ತೊಡನೆಯೇ ಮೈಸೂರು ರಾಜಮನೆತನದ ಪಕ್ಷಕ್ಕೆ ಬರುವುದರ ಬದಲು ಕಂಪನಿಯ ಮಿಲಿಟರಿ ಆಡಳಿತದಲ್ಲೇ ಕೆಲಕಾಲವಿದ್ದಿದ್ದರೆ ಆಗ ಪರಿಸ್ಥಿತಿ ಹೇಗೆ ರೂಪುಗೊಳ್ಳುತ್ತಿದ್ದಿತೋ ಏನೋ? ಆದರೆ ಕಂಪನಿಯವರು ಆ ರಾಜ್ಯವನ್ನು ಮೈಸೂರು ರಾಜ ಮನೆತನಕ್ಕೆ ಬಿಟ್ಟುಕೊಟ್ಟರೆಂಬ ಸುದ್ದಿ ಹರಡಿದ್ದೇ ತಡ, ಹೈದರ್ ಮತ್ತು ಟಿಪ್ಪೂಸುಲ್ತಾನರು ತಮ್ಮ ಲೋಹ ಹಸ್ತದಲ್ಲಿ ಹಿಡಿದು ಹದ್ದಿನಲ್ಲಿಟ್ಟಿದ್ದ ಆ ರಾಜ್ಯಭಾಗ ಕಟ್ಟು ಹರಿದ ಪಂಜಿನಂತಾಯಿತು.

ರಾಜ್ಯಾಡಳಿತದ ವಿಚಾರದಲ್ಲಿ, ಪೂರ್ಣಯ್ಯನವರು ದಕ್ಷರು ; ಅನುಭವಸ್ಥರು. ಆದರೂ ಅಂದಿನ ಸ್ಥಿತಿಯಲ್ಲಿ ರಾಜ್ಯವನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಅವರಿಗೂ ದುಸ್ತರವಾಯಿತು. ಏಕೆಂದರೆ, ಹೈದರ್ ಮತ್ತು ಟಿಪ್ಪೂಸುಲ್ತಾನರ ಹೊಡೆತದಿಂದ ಭಗ್ನರಾಗಿ ನೆಲಕ್ಕುರುಳಿದ್ದ ಪಾಳೆಯಗಾರರನೇಕರು ತಮ್ಮ ಪೂರ್ವಸ್ಥಿತಿಯನ್ನು ಊರ್ಜಿತಗೊಳಿಸಿಕೊಳ್ಳಲು ಇದೇ ತಕ್ಕ ಕಾಲವೆಂದು ಭಾವಿಸಿ ತಾವು ಸ್ವತಂತ್ರರೆಂದು ಸಾರಿದರು. ಮನೆ ಬೇಯುತ್ತಿದ್ದರೆ ಸಾಕು, ಕೈಗೆ ಸಿಕ್ಕಿದುದನ್ನು ಹಿರಿದುಕೊಂಡು ಹೋಗಬಹುದು ಎಂಬ ಮನೋವೃತ್ತಿಯ ಪುಂಡರನೇಕರು ಈ ಪಾಳೆಯಗಾರರ ಬೆಂಬಲಕ್ಕೆ ನಿಂತರು. ನಿರುದ್ಯೋಗಿಗಳಾಗಿದ್ದ ಹಳೆಯ ಸೈನಿಕರೂ ಇವರೊಡನೆ ಸೇರಿಕೊಂಡರು!

ರಾಜ್ಯದ ಆ ಮೂಲೆಯಿಂದ ಈ ಮೂಲೆಯವರೆಗೆ ವಿದ್ರೋಹದ ಉರಿ ಹಬ್ಬಿತು. ಇಂಥ ಪರಿಸ್ಥಿತಿಯುಂಟಾದೀತೆಂದು ಪೂರ್ಣಯ್ಯನವರು ನಿರೀಕ್ಷಿಸಿದ್ದರೋ ಇಲ್ಲವೊ, ಅಂತು ನಮ್ಮ ಆಡಳಿತದ ಆರಂಭಕಾಲದಲ್ಲಿ ನಾನಾ ವಿಧವಾದ ಅನಿರೀಕ್ಷಿತ ಕ್ಲಿಷ್ಟ ಪ್ರಸಂಗಗಳನ್ನು ತಾವು ಇದಿರಿಸಬೇಕಾಗುತ್ತದೆಂಬುದನ್ನು ಮಾತ್ರ ಅವರು ಮನಗಂಡಿದ್ದರೆನ್ನಬಹುದು. ಆದ್ದರಿಂದ ಅವರು ಈ ವಿದ್ರೋಹದ ಆರ್ಭಟದಿಂದಾಗಿ ಅಪ್ರತಿಭರಾಗಲಿಲ್ಲ. ತಮ್ಮ ಕೈಕೆಳಗಿದ್ದ ಸಂಸ್ಥಾನದ ಸೇನೆಯನ್ನೂ ವೆಲ್ಲೆಸ್ಲಿಯವರ ಆಡಳಿತಕ್ಕೊಳಪಟ್ಟಿದ್ದ ಕಂಪನಿಯ ಸೇನೆಯನ್ನೂ ಚತುರತೆಯಿಂದ ಉಪಯೋಗಿಸಿಕೊಂಡು ಈ ವಿದ್ರೋಹಗಳನ್ನೆಲ್ಲಾ ಅಡಗಿಸಿ, ರಾಜ್ಯವನ್ನು ಶಾಂತಸ್ಥಿತಿಗೆ ತಂದರು. ಕ್ರಮ ಕ್ರಮವಾಗಿ ಆಡಳಿತವನ್ನು ಪುನರ್ ವ್ಯವಸ್ಥೆ ಮಾಡಿ ಎಲ್ಲರ ಹೊಗಳಿಕೆಗೆ ಪಾತ್ರರಾದರು.

ಮೈಸೂರು ರಾಜ್ಯವೆಂದರೆ ಪೂರ್ಣಯ್ಯನವರ ರಾಜ್ಯವೆನ್ನುವಷ್ಟರಮಟ್ಟಿಗೆ ಅವರ ಪ್ರಾಬಲ್ಯ ಬೆಳೆಯಿತು.

ಆ ಸ್ಥಿತಿಯಲ್ಲಿ ಅವರ ಸುತ್ತಮುತ್ತ ಇದ್ದವರೂ, ನೆಂಟರಿಷ್ಟರೂ ಅವರ ಮಹತ್ಸಾಧನೆಗಳನ್ನು ಹೊಗಳುವ ನೆಪದಲ್ಲಿ ಅವರ ಮನಸ್ಸಿನಲ್ಲಿ ಹೊಸ ಆಸೆಯೊಂದನ್ನು ಬಿತ್ತಿದರು; ಅದನ್ನೇ ಹಾಡಿ ಹಾಡಿ ಆ ಆಸೆಯನ್ನು ಪ್ರಬಲವಾಗಿ ಬೆಳೆಸಿದರು :

"ತಾವು ಮೈಸೂರು ಸಂಸ್ಥಾನಕ್ಕೆ ಸಲ್ಲಿಸಿರುವ ಸೇವೆ ಅಪೂರ್ವವಾದದ್ದು; ಅಮೋಘವಾದದ್ದು. ಇಂದಿನ ಪರಿಸ್ಥಿತಿಯಲ್ಲಿ ನೀವಲ್ಲದೆ ಮತ್ತಿನ್ನಾರಾದರೂ ದಿವಾನರಾಗಿದ್ದರೆ, ಅವರೂ ಉಳಿಯುತ್ತಿರಲಿಲ್ಲ; ಮೈಸೂರು ರಾಜ್ಯವೂ ಉಳಿಯುತ್ತಿರಲಿಲ್ಲ. ತಾವು ಸಂಸ್ಥಾನಕ್ಕೆ ಸಲ್ಲಿಸಿರುವ ಸೇವೆಗೆ ತಮಗೆ ಸಲ್ಲುತ್ತಿರುವ ಸಂಭಾವನೆ ತೀರಾ ಅಲ್ಪ!"....

"ಒಂದು ವೇಳೆ ತಮ್ಮ ಬದಲು ತಿರುಮಲರಾಯ ಪ್ರಧಾನಿಯ ಪಟ್ಟಕ್ಕೆ ಬಂದಿದ್ದ ಅನ್ನಿ. ಆಗ ಈ ಮೈಸೂರು ರಾಜಮನೆತನದವರು, ವಂಶಪಾರಂಪರ್ಯವಾದ ಪ್ರಧಾನಿ ಪಟ್ಟವನ್ನು ಅವನಿಗೆ ಕೊಡುತ್ತಿದ್ದರೋ ಇಲ್ಲವೊ? – ಈ ಪಾಳಯಗಾರರ ಹಾವಳಿಯಲ್ಲಿ, ಪುಂಡರ ಗಲಭೆಯಲ್ಲಿ, ಕೈಗೆ ಬಂದ ತುತ್ತು ಬಾಯಿಗಿಲ್ಲ ಎಂಬಂತಾಗುವ ಸ್ಥಿತಿಯಲ್ಲಿ ತಾವು ಮೈಸೂರು ಸಂಸ್ಥಾನಕ್ಕೆ, ರಾಜಮನೆತನಕ್ಕೆ ಸಲ್ಲಿಸಿರುವ ಸೇವೆ ಸಾಮಾನ್ಯವಾದದ್ದೇನು? ತಿರುಮಲರಾಯನ ಸಾಹಸಕ್ಕಿಂತ ನೂರು ಪಾಲು ಹೆಚ್ಚಿನದು!"....

"ನೀವು ಹೊಸದೇನೂ ಕೇಳುತ್ತಿಲ್ಲವಲ್ಲ! ವಂಶಪಾರಂಪರ್ಯವಾಗಿ ಮಂತ್ರಿ ಪದವಿಯನ್ನು ಅನುಭವಿಸುವ ಹಕ್ಕು ಮರಾಠಿ ರಾಜ್ಯದಲ್ಲಿಲ್ಲವೆ? ತಿರುಮಲರಾಯನಿಗೆ ಅಂಥ ಹಕ್ಕು ಕೊಡಲು ಮಹಾರಾಣಿಯವರು ಒಪ್ಪಿರಲಿಲ್ಲವೆ? ಅದನ್ನೇ ನಿಮಗೆ ಕೊಡಲು ಅವರಿಗೇನು ಕಷ್ಟ? ನೀವು ಅವರಿಗಾಗಿ, ಹೊಟ್ಟೆಗೆ ಕೂಳು ನೆತ್ತಿಗೆ ನೀರು ಇಲ್ಲದೆ, ಊರು ಊರು ಅಲೆದು ದುಡಿಯಲಿಲ್ಲವೆ?"....

"ಮಹಾರಾಣಿ ಒಪ್ಪಿದರೆಷ್ಟು, ಬಿಟ್ಟರೆಷ್ಟು? ಆಕೆಗೆ ನಿಮ್ಮ ವಿಚಾರವಾಗಿ ಅಷ್ಟು ಸದಭಿಪ್ರಾಯವಿಲ್ಲವೆಂದರೆ ಈ ವಿಚಾರ ಆಕೆಯಲ್ಲಿ ಪ್ರಸ್ತಾಪಿಸಲೇ ಬೇಡಿ! ಕಂಪನಿ ಸರ್ಕಾರದಲ್ಲಿ ನಿಮಗೆ ಗೊತ್ತಿಲ್ಲದವರು ಯಾರು? ನಿಮ್ಮ ಶಕ್ತಿ ಸಾಮರ್ಥ್ಯ ತಿಳಿಯದವರು ಯಾರು? ನೀವು ಸಂಸ್ಥಾನಕ್ಕಾಗಿ ಎಷ್ಟು ದುಡಿದಿದ್ದೀರಿ ಎಂಬುದು ಅವರಿಗೆ ಗೊತ್ತಿಲ್ಲವೆ? ಅವರನ್ನೇ ಕೇಳಿ. ರೆಸಿಡೆಂಟರೊಡನೆ ಮಾತನಾಡಿ. ಅವರಿಂದ ಶಿಫಾರಸು ಮಾಡಿಸಿ; – ನೀವೇ ಗೌರ್ನರ್‌ರವರಿಗೆ ಪತ್ರ ಬರೆಯಿರಿ;

ಅದರಲ್ಲಿ ನೀವು ಸಂಸ್ಥಾನಕ್ಕೆ ಸಲ್ಲಿಸಿರುವ ಸೇವೆಗಾಗಿ, ಈ ವಿಶೇಷ ಹಕ್ಕು ದೊರೆಯು ಬೇಕಾದದ್ದು ನ್ಯಾಯ ಎಂದು ವಾದಿಸಿ "....

ಆ ಆಸೆಯ ಬಳ್ಳಿ ಪೂರ್ಣಯ್ಯನವರ ಮನಸ್ಸನ್ನು ಬಲವಾಗಿ ಬಂಧಿಸಿತು. ಅವರು ಮದರಾಸು ಗೌರ್ನರ್‌ರವರಿಗೆ ಒಂದು ಅರಿಕೆ ಸಲ್ಲಿಸಿಯೇ ಬಿಟ್ಟರು. "ಮೈಸೂರು ಸಂಸ್ಥಾನದ ದಿವಾನಿಕೆ ಸರ್ವ ಕಾಲಕ್ಕೂ ನಮ್ಮ ವಂಶದ ಹಕ್ಕಾಗಿ ಉಳಿಯುವಂತೆ ಕೃಪೆ ಮಾಡಬೇಕು" ಎಂದು!

ಈ 'ಅರಿಕೆ' ಕಂಪನಿ ಸರ್ಕಾರದವರಿಗೆ ಆಶ್ಚರ್ಯವನ್ನುಂಟುಮಾಡಿತು. ಪೂರ್ಣಯ್ಯನವರು ಸಂಸ್ಥಾನಕ್ಕೆ ಮಾಡಿರುವ ಸೇವೆ, ಅದೆಷ್ಟೇ ಅಮೋಘವಾಗಿರಲಿ, ಅವರ ಈ ಪ್ರಾರ್ಥನೆಯನ್ನು ಅಂಗೀಕರಿಸುವುದು ಉಚಿತವಲ್ಲವೆಂದು ಅವರು ನಿರ್ಧರಿಸಿದರು.

ಆದರೆ, ಪೂರ್ಣಯ್ಯನವರ ಇಳಿವಯಸ್ಸನ್ನೂ, ಅವರ ಸೇವೆಯನ್ನೂ ಗಮನಕ್ಕೆ ತಂದುಕೊಂಡು, ಈ ನಿರಾಕರಣೆಯಿಂದ ಅವರ ಮನಸ್ಸು ನೋಯ ದಿರುವಂತೆ ಮಾಡಬೇಕೆಂದು, ಅವರಿಗೆ ಒಂದು ಜಹಗೀರಿಯನ್ನೂ ಕೊಡುವುದಾಗಿ ಪ್ರತಿ ಸೂಚನೆ ಮಾಡಿದರು.

ಪೂರ್ಣಯ್ಯನವರು ಯಳಂದೂರು ಪ್ರದೇಶವನ್ನು ತಮ್ಮ ಜಹಗೀರಿಗಾಗಿ ಆರಿಸಿಕೊಂಡರು. ಕಂಪನಿಯ ಸರ್ಕಾರ ಆ ಆಯ್ಕೆಯನ್ನೊಪ್ಪಿತು. ತನ್ನ ನಿರ್ಣಯ ವನ್ನು ಮಹಾಮಾತೃಶ್ರೀಯವರಿಗೆ ತಿಳಿಸಿ, ಈ ಜಹಗೀರಿಯ ಸಂಬಂಧದ ಸನ್ನದನ್ನು ಪೂರ್ಣಯ್ಯನವರಿಗೆ ತಕ್ಕ ಖಿಲ್ಲತ್ತು ಮತ್ತು ಇತರ ಮರ್ಯಾದೆಗಳೊಡನೆ ಸಲ್ಲಿಸಬೇಕೆಂದು ಕಂಪನಿ ಸರ್ಕಾರ ನಿರ್ಣಯಿಸಿದೆಯೆಂದೂ ಆ ಸಂಬಂಧವಲ್ಲಿ ವ್ಯವಸ್ಥೆಯಾಗುವ ಸಮಾರಂಭದಲ್ಲಿ ಮಹಾರಾಜರು ಸ್ವಹಸ್ತದಿಂದ ಸನ್ನದನ್ನೂ ಖಿಲ್ಲತ್ತುಗಳನ್ನೂ ಪೂರ್ಣಯ್ಯನವರಿಗೆ ಕೊಡಬೇಕೆಂದೂ ಒಂದು ಖರೀತಾವನ್ನು ಕಳುಹಿಸಿತು.

ಈ ಪತ್ರದ ಹಿನ್ನೆಲೆಯ ವಿಚಾರ ತಿಳಿದಾಗ ಮಹಾಮಾತೃಶ್ರೀಯವರ ಮನಸ್ಸಿನಲ್ಲಿ ತುಂಬ ಕಳವಳವುಂಟಾಯಿತು

ಸಂಸ್ಥಾನದ ದಿವಾನರ ಕೈವಾಡ ಇಷ್ಟು ಬೆಳೆದುದು ಅನಿವಾರ್ಯ ಪರಿಸ್ಥಿತಿಯ ಪರಿಣಾಮವೇ ಇರಬಹುದು; ಆದರೆ ಇದರಿಂದಾಗಿ ಮತ್ತೆ ಹಿಂದಿನ ಚರಿತ್ರೆಯ ಪುನರಾವರ್ತನೆಯಾದೀತೇನೋ, ದಳವಾಯಿತನಕ್ಕೆ ಎಡೆಗೊಡುವು ದೇನೋ ಮತ್ತೆ ರಾಜವಂಶ ಮೂಲೆ ಗುಂಪಾಗುವಂತಾಗುವುದೇನೋ ಎಂಬ ಶಂಕೆ

ಮಹಾಮಾತೃಶ್ರೀಯವರ ಮನಸ್ಸಿನಲ್ಲಿ ಬೆಳೆಯಿತು. ಆದರೆ ಈ ಸಮಸ್ಯೆಯನ್ನು ಒಡನೆಯೇ ಸರಿಪಡಿಸುವುದಾದರೂ ಹೇಗೆ? ರಾಜರ ಬಾಲಕರು. ಅವರು ಪ್ರಬುದ್ಧರಾಗಿ ತಾವೇ ರಾಜಸೂತ್ರಗಳನ್ನು ಹಿಡಿದ ಮೇಲೆ ಏನಾದರೂ ಪ್ರಯತ್ನ ಮಾಡಬಹುದು. ಆಗಕೂಡ, ಅಧಿಕಾರವನ್ನು ವೈಯುಂಡ ದಕ್ಷ ದಿವಾನರನ್ನು ಹಿಡಿದಲ್ಲಿಟ್ಟುಕೊಳ್ಳುವುದು, ತರುಣ ರಾಜರಿಗೆ ಸಾಧ್ಯವಾಗದೆ ಹೋದರೂ ಹೋಗ ಬಹುದು! ಯಾರೇ ಆಗಲಿ, ಹೇಗೋ ಏನೋ – ಅಂತೂ ಮೈಸೂರು ರಾಜರ ದಳವಾಯಿಯಾದರಾಯಿತು – ಆತನಿಂದ ರಾಜಮನೆತನಕ್ಕೆ ಏನಾದರೊಂದು ರೀತಿಯಲ್ಲಿ ಪೀಡೆಯಾಗಲೇಬೇಕೆಂಬುದು ದೈವಸಂಕಲ್ಪವೇನೋ ಎಂದುಕೊಂಡು ಮಾತೃಶ್ರೀಯವರು ತಮ್ಮಲ್ಲಿ ತಾವೇ ದುಃಖಿಸಿದರು....

ಈ ಅಪಾಯವನ್ನು ಪೂರ್ಣವಾಗಿ ತಪ್ಪಿಸುವುದು ಅಂದಿನ ಸ್ಥಿತಿಯಲ್ಲಿ ಸಾಧ್ಯವಿಲ್ಲದಿದ್ದರೂ, ಮುಂದೆ ಅದರಿಂದಾಗಬಹುದಾದ ದುಷ್ಪರಿಣಾಮವನ್ನು ನಿವಾರಿಸಲು ಈಗಿನಿಂದಲೇ ಪ್ರಯತ್ನಿಸುವುದು ಉಚಿತವೆಂದು ಅವರು ಭಾವಿಸಿದರು....

ಅದಕ್ಕೇನು ಮಾಡುವುದು? ರಾಜರಿಗೆ ಉತ್ತಮವಾದ ವಿದ್ಯಾಭ್ಯಾಸಕೊಡಿಸಿ, ತಕ್ಕ ದೇಹಶಿಕ್ಷಣ ಕೊಡಿಸಿ, ಅವರ ಮನಸ್ಸು ಈಗಿನಿಂದಲೇ ರಾಜ್ಯಾಡಳಿತದ ವಿಚಾರಗಳಲ್ಲಿ ಪ್ರವೇಶಿಸುವಂತೆ, ತಾವೇ ಸ್ವತಂತ್ರವಾಗಿ ರಾಜ್ಯವಾಳುವ ಅಭಿಲಾಷೆ, ದಕ್ಷತೆಗಳು ಅವರಲ್ಲಿ ಮೂಡುವಂತೆ ಮಾಡುವುದು ಅವಶ್ಯಕವೆಂದು ಮಹಾ ಮಾತೃಶ್ರೀಯವರು ತೀರ್ಮಾನಿಸಿದರು. ಅದಕ್ಕಾಗಿಯೇ ತಮ್ಮ ಕಾಲವನ್ನು ಪೂರ್ಣವಾಗಿ ವಿನಿಯೋಗಿಸಲು ಆರಂಭಿಸಿದರು.

ಕೃಷ್ಣರಾಜ ಒಡೆಯರು, ಓದಿಗೂ ರಾಜೋಚಿತವಾದ ಅಂಗಸಾಧನೆಗೂ ಪೂರ್ಣವಾಗಿ ಮನಸ್ಸು ಕೊಟ್ಟು, ದಿನದಿನಕ್ಕೆ ತಮ್ಮ ವಿದ್ಯೆಯನ್ನೂ ದೇಹ ಪಟುತ್ವ ವನ್ನೂ ರಾಜ ವ್ಯಕ್ತಿತ್ವವನ್ನೂ ಬೆಳೆಸಿಕೊಳ್ಳುತ್ತಿದ್ದುದು ಮಹಾಮಾತೃಶ್ರೀಯವರಿಗೆ ಆನಂದವನ್ನುಂಟು ಮಾಡಿತು. ಯದುವಂಶದ ರಾಜಶಕ್ತಿಯ ಪುನರುದ್ಧಾರಕ್ಕಾಗಿ ತಾವು ವಹಿಸುತ್ತಿದ್ದ ಶ್ರಮ ಸಾರ್ಥಕವಾಗುವುದೆಂಬ ನಂಬಿಕೆಯನ್ನು ಅವರಲ್ಲಿ ಬಲಪಡಿಸಿತು.

ಈ ತಮ್ಮ ಪ್ರಯತ್ನಗಳ ಫಲವಾಗಿ ಕೃಷ್ಣರಾಜರ ಅಭಿವೃದ್ಧಿ ತೀವ್ರ ಗೊಂಡಿದ್ದನ್ನು ಕಂಡು ಅವರು ಆನಂದಿಸಿದರು........

ಕೃಷ್ಣರಾಜರು ಪಟ್ಟಕ್ಕೆ ಬಂದು ಹತ್ತು ವರ್ಷಗಳು ಕಳೆದಿದ್ದವು. ರಾಜ್ಯದಲ್ಲಿ ದಂಗೆ ದೊಂಬಿಗಳು ಅಡಗಿ, ಶಾಂತಿ ಬೆಳೆದು ಆಡಳಿತ ಸುಮುಖವಾಗಿತ್ತು.

ಹೆಚ್ಚುಹೆಚ್ಚೆಂದರೆ ಇನ್ನು ಒಂದೆರಡು ವರ್ಷ ಕಳೆದರಾಯಿತು. ಹೇಗೋ ಕೃಷ್ಣರಾಜರು ರಾಜ್ಯಭಾರವನ್ನು ವಹಿಸಿಕೊಂಡರೆ, ರಾಜ್ಯಾಡಳಿತದ ಮೇಲೆ ತಮ್ಮ ಹಿಡಿತವನ್ನು ಸಾಧಿಸಿಕೊಂಡರೆ, ಆಮೇಲೆ ಚಿಂತೆಯಿಲ್ಲ ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡ ಮಹಾಮಾತೃಶ್ರೀಯವರು ಸ್ವತಂತ್ರವಾಗಿ ರಾಜ್ಯಭಾರವನ್ನು ನಡೆಸುವ ಶಕ್ತಿಯನ್ನು ಕೃಷ್ಣರಾಜರಿಗೆ ಕರುಣಿಸುವಂತೆ, ದಿನದಿನವೂ ದೇವಿಯನ್ನು ಬೇಡಿಕೊಂಡರು.

ದೇವಿ ಅವರ ಪ್ರಾರ್ಥನೆಯನ್ನು ಕರುಣಿಸಿದಳು. ಆದರೆ ತಮ್ಮ ಪ್ರಾರ್ಥನೆ ಫಲಿಸಿದ್ದನ್ನು ಕಣ್ಣಾರೆ ಕಾಣುವ ಸೌಭಾಗ್ಯವನ್ನು ಮಾತ್ರ ಅವರಿಗೆ ಕೊಡಲಿಲ್ಲ.

ಸುಮಾರು ಅರ್ಧಶತಮಾನ ಕಾಲ ಯದುವಂಶದ ಉದ್ಧಾರಕ್ಕಾಗಿ ಶ್ರಮಿಸಿ ಶ್ರಮಿಸಿ ಹಣ್ಣಾಗಿದ್ದ ಅವರ ದೇಹ ದೀರ್ಘಶಾಂತಿಯನ್ನು ಬಯಸಿತು. ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ತಮ್ಮ ಅರವತ್ತೆಂಟನೆಯ ವರ್ಷದಲ್ಲಿ ಈ ಲೋಕದ ಪಾಲಿಗೆ ಇಲ್ಲವಾದರು.

ಕೃಷ್ಣರಾಜರಿಗೆ ಯಾವ ಅಪಾಯವೂ ತಟ್ಟದಂತೆ ಅವರನ್ನು ಹದಿನಾರು ವರ್ಷ ರಕ್ಷಿಸಿ, ಪೋಷಿಸಿ, ಬೆಳೆಸಿದ್ದ ಮಹಾಶಕ್ತಿ, ಆದಿಶಕ್ತಿಯಲ್ಲಿ ಸೇರಿಹೋಯಿತು.

ಅನೇಕ ಮಂದಿ ಬಂಧುಮಿತ್ರರ ನಡುವೆಯಿದ್ದರೂ ಕೃಷ್ಣರಾಜರು ಅರಕ್ಷಿತರಾದರು; ಅರಸುತನದ ವೈಭವದ ನಡುವೆಯಿದ್ದರೂ ಅನಾಥರಂತಾದರು.

§

"ಮಹಾಸ್ವಾಮಿಯವರು ಪ್ರಾಪ್ತವಯಸ್ಕರಾಗಿದ್ದಾರೆ. ಅಪಾರವಾದ ಜ್ಞಾನಾರ್ಜನೆ ಮಾಡಿದ್ದಾರೆ. ಸ್ವತಂತ್ರವಾಗಿ ರಾಜ್ಯಭಾರ ಮಾಡಲು ಶಕ್ತರಾಗಿದ್ದಾರೆ. ಮಹಾಸ್ವಾಮಿಯವರು ಆದಷ್ಟು ಶೀಘ್ರವಾಗಿ ರಾಜ್ಯದ ಆಡಳಿತವನ್ನು ವಹಿಸಿಕೊಳ್ಳಬೇಕು. ಸರ್ವತಂತ್ರಸ್ವತಂತ್ರರಾದ ಮಹಾಸ್ವಾಮಿಯವರು ಅಜ, ಮಾಂಧಾತಾದಿ ಚಕ್ರವರ್ತಿಗಳಂತೆ ಮೆರೆಯುವುದನ್ನು ಕಣ್ಣಾರೆ ಕಂಡು ಸಂತೋಷಪಡಬೇಕೆಂಬುದು ಈ ಬಡವನ ಆಸೆ. ಪ್ರಭುಗಳು ಕೃಪೆಯಿಟ್ಟು ಈ ಬಿನ್ನಹವನ್ನು ವನ್ನು ನಡೆಸಿಕೊಡಬೇಕು"....

"ಮಹಾಮಾತೃಶ್ರೀಯವರ ಅಪೇಕ್ಷೆ ಏನಿದ್ದಿತೆಂಬುದು ಸನ್ನಿಧಾನದ

ಚಿತ್ತಕ್ಕೆ ವೇದ್ಯವೇ ಆಗಿದೆ. ಮಹಾಸ್ವಾಮಿಯವರು ಪ್ರಾಪ್ತವಯಸ್ಕರಾದೊಡನೆಯೇ ರಾಜ್ಯದ ಆಡಳಿತವನ್ನು ವಹಿಸಿಕೊಂಡು ದಿವಾನ್ ಪೂರ್ಣಯ್ಯನ ಪ್ರಾಬಲ್ಯವನ್ನು ಅಡಗಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಪ್ರಭುಗಳು ದಿವಂಗತ ಮಹಾಮಾತೃಶ್ರೀಯವರ ಈ ಅಪೇಕ್ಷೆಯನ್ನು ಆದಷ್ಟು ಶೀಘ್ರವಾಗಿ ನೆರವೇರಿಸಬೇಕು. ಅದರಿಂದ ಅವರ ಆತ್ಮಕ್ಕೆ ಎಷ್ಟೋ ತೃಪ್ತಿಯಾಗುತ್ತದೆ"....

"ಪೂರ್ಣಯ್ಯ ಮಹಾಸ್ವಾರ್ಥಿ; ಮಹಾತಂತ್ರಿ. ಮಹಾಮಾತೃಶ್ರೀಯವರು ಇರುವಾಗಲೇ ಅವರಿಗೇ ಗೊತ್ತಿಲ್ಲದಂತೆ ಇಂಗ್ಲಿಷ್ ಸರದಾರರ ಹತ್ತಿರ ಪಿತೂರಿ ಮಾಡಿ, ಯಳಂದೂರು ಜಹಗೀರಿ ಹೊಡೆದುಕೊಂಡ. ಈಗ ಮತ್ತೆ ಆರಂಭ ಮಾಡಿದ್ದಾನಂತೆ– ವಂಶಪಾರಂಪರ್ಯವಾದ ದಿವಾನಗಿರಿ ಹಕ್ಕೂ ತನ್ನ ವಂಶಕ್ಕೆ ಬೇಕು ಅಂತ. ಅವನನ್ನು ಹೀಗೆಯೇ ಬೆಳೆಯ ಬಿಟ್ಟರೆ ನಾಳೆ ಈ ರಾಜ್ಯವೇ ತನ್ನದು ಎನ್ನುವಂಥ ಆಸಾಮಿ ಅವನು. ಇವನು ಇಷ್ಟು ಬೇರು ಬಿಟ್ಟಿರುವುದೇ ಸಾಕು. ಇನ್ನು ಆ ಬೇರು ಕೀಳಲು ಪ್ರಯತ್ನಿಸಬೇಕೇ ಹೊರತು ಇನ್ನಷ್ಟು ಬಲವಾಗಲು ಮಹಾಸ್ವಾಮಿಯವರು ಅವಕಾಶ ಕೊಡಬಾರದು. ಇಂಥಾ ವಿಚಾರಗಳಲ್ಲಿ ಆಲಸ್ಯ ವಿಷವಾಗಿ ಪರಿಣಮಿಸುತ್ತದೆ."....

"ಪೂರ್ಣಯ್ಯನವರು ವಯಸ್ಸಿನಲ್ಲಿಯೂ ಹಿರಿಯರು. ದಕ್ಷತೆಯಲ್ಲಿಯೂ ಹಿರಿಯರು. ನಮ್ಮ ಸಂಸ್ಥಾನದಲ್ಲಿರುವ ಪ್ರತಿಯೊಬ್ಬರೂ ಅವರನ್ನು ಗೌರವದಿಂದ ಕಾಣಬೇಕಾದದ್ದು ನ್ಯಾಯವೇ. ಅಂಥ ಗೌರವ ತಮಗೆ ಸಲ್ಲಬೇಕೆಂದು ಅವರು ನಿರೀಕ್ಷಿಸಿದರೆ ಅದರಲ್ಲಿ ತಪ್ಪೇನೂ ಇಲ್ಲ. ಆದರೆ ಇಂಥ ಹಿರಿಯರು ತಮ್ಮ ನಡವಳಿಕೆಯಲ್ಲಿ ಕಿರಿಯರಿಗೆ ಮಾರ್ಗದರ್ಶಿಗಳಾಗಿರಬೇಡವೆ ? ಒಂದು ಸಂಸ್ಥಾನದ ದೊರೆಗಳೆಂದಮೇಲೆ, ಅವರು ವಯಸ್ಸಿನಿಂದ ಹಿರಿಯರಾಗಿರಲಿ, ಕಿರಿಯರಾಗಿರಲಿ, ಆಬಾಲವೃದ್ಧರಾದಿಯಾಗಿ ಎಲ್ಲರೂ ಅವರ ಬಗ್ಗೆ ಗೌರವದಿಂದ ನಡೆದುಕೊಳ್ಳಬೇಕಾದದ್ದು ಅತ್ಯಾವಶ್ಯಕ. ಆದರೆ ಈ ಒಂದು ವಿಚಾರದಲ್ಲಿ ಅವರ ಮಾತಾಗಲೀ ನಡವಳಿಕೆಯಾಗಲೀ ಚೆನ್ನಾಗಿಲ್ಲ. ಪ್ರಭುಗಳ ವಿಚಾರವಾಗಿ ತೀರಾ ಕೀಳಾಗಿ ಮಾತನಾಡುತ್ತಾರೆ"....

"ನಾವು ಸನ್ನಿಧಾನದಲ್ಲಿ ಇದನ್ನೆಲ್ಲಾ ಹೇಳಬಾರದು. ಆದರೆ ಹೇಳದೆ ಇದ್ದರೆ ಪರಿಸ್ಥಿತಿ ವಿಪರೀತಕ್ಕಿಟ್ಟುಕೊಳ್ಳುತ್ತದೆ ಇದರಿಂದ ಮುಂದೆ ಏನೇನು ಅನಾಹುತವಾಗುತ್ತದೆಯೋ ಏನೋ ? ಪ್ರಭುಗಳನ್ನು ಕುರಿತು ಎಲ್ಲರ ಮುಂದೆಯೂ ಅಗೌರವದ ಮಾತು ಆಡುವುದರಲ್ಲಿ ಪೂರ್ಣಯ್ಯನಿಗೆ ಏನೋ ದುರುದ್ದೇಶವಿದೆ.

ಹಾಗಿಲ್ಲದಿದ್ದರೆ, 'ಹೀಗೆ ಆಡುವುದು ತಪ್ಪು. ಇದರಿಂದ ನಿನ್ನ ಘನತೆಗೆ ಕುಂದುಂಟಾಗುತ್ತದೆ. ನೀನು ರಾಜರ ಆಗ್ರಹಕ್ಕೆ ಪಾತ್ರನಾಗುತ್ತಿ' ಎಂದು ಹೇಳಿಸಿದ ಮೇಲೂ ಅವನು ತನ್ನ ಈ ಚಾಳಿ ಬಿಡದೆ ಇರುತ್ತಿದ್ದನೆ? ಜನರಲ್ಲಿ ಪ್ರಭುಗಳ ವಿಚಾರವಾಗಿ ಇರುವ ಅಪಾರ ಗೌರವವನ್ನು ಕೆಡಸುವುದಕ್ಕಾಗಿಯೇ ಅವನು ಬೇಕೆಂದೇ ಈ ಆಟ ಹೂಡಿದ್ದಾನೆ. ಪ್ರಭುಗಳು ಜನಪ್ರಿಯರಾದರೆ, ತನ್ನ ಪ್ರಾಬಲ್ಯಕ್ಕೆ ಧಕ್ಕೆ ಬರುತ್ತದೆಯೆಂಬ ಭಯ ಅವನಿಗಿದ್ದೇಯಿದೆ. ದೊರೆಗಳು ಮೂಲೆಗುಂಪಾಗಿ ಬಿದ್ದಿದ್ದರೆ ತನ್ನ ಕೈವಾಡ ಚೆನ್ನಾಗಿ ನಡೆಸಬಹುದೆಂದು ಅವನ ನಿರೀಕ್ಷಣೆ. ಅದಕ್ಕಾಗಿಯೇ ಅವನು ಈ ಕೀಳು ಆಟವನ್ನು ಆರಂಭಿಸಿದ್ದಾನೆ. ಬೇಡವೆಂದು ಹೇಳಿದರೂ ಅದನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾನೆ."....

"ಮಹಾಸ್ವಾಮಿಯವರು ಈ ವಿಚಾರದಲ್ಲಿ ಒಡನೆಯೇ ನಿರ್ಣಯ ತೆಗೆದು ಕೊಳ್ಳಬೇಕು. 'ಪಾಪ! ಅವನಿಗೂ ವಯಸ್ಸಾಯಿತು; ಅರುಳು ಮರುಳು; ಹಿಂದಿನಿಂದ ಸಂಸ್ಥಾನಕ್ಕಾಗಿ ದುಡಿದವನು'– ಎಂದೆಲ್ಲಾ ಯೋಚಿಸುತ್ತಾ ಸುಮ್ಮನೆ ಕುಳಿತರೆ, ಅದರಿಂದ ಅಪಾಯ ಖಂಡಿತ. ಇದು ನಮ್ಮ ಭಂಡಾರ. ಹೇಗೋ ಇಲ್ಲಿಗೊಂದು ಸರ್ಪ ಬಂದು ಸೇರಿಕೊಂಡಿತು. ಕ್ರೂರಸರ್ಪ. ಅದು ಇದೆಯೆಂಬ ಭಯದಿಂದ, ನಮ್ಮ ಭಂಡಾರಕ್ಕೆ ಕಳ್ಳರ ಕಾಟ ತಪ್ಪಿತು. ಅದು ನಮಗೆ ಈ ಸೇವೆ ಮಾಡುತ್ತಿದೆಯೆಲ್ಲಾ ಎಂದು ಅದಕ್ಕೆ ಬೇಕಾದ ಹಾಗೆ ಹಾಲಿಟ್ಟು ಪೋಷಿಸಿ ದೆವು. ಅದೆಲ್ಲಾ ಸರಿ. ಆದರೆ ಹೀಗೆ ನಮ್ಮ ಭಂಡಾರದ ಕಾವಲಿಗೆಂದು ನಿಯೋಜಿಸಿಕೊಂಡಿದ್ದ ಸರ್ಪ, ಭಂಡಾರವೆಲ್ಲಾ ತನ್ನದೆಂದು ಭಾವಿಸಿಕೊಂಡು ಒಡೆಯರನ್ನೇ ಭಂಡಾರದೊಳಕ್ಕೆ ಬಿಡದೆ, ಅವರನ್ನೇ ಕಚ್ಚುವುದಕ್ಕೆ ಬಂದರೆ– ಆಗ ಮಾಡಬೇಕಾದ್ದೇನು?– ಇಷ್ಟು ದಿನ ಸೇವೆ ಮಾಡಿದ ಹಾವು, ನಮ್ಮನ್ನು ಕಚ್ಚಿದರೆ ಕಚ್ಚಲಿ ಎಂದು ಸುಮ್ಮನೆ ಕೂರುವುದೆ? ಇಲ್ಲ, ಅದಕ್ಕೆ ಬಡಿಗೆಸೇವೆ ಮಾಡಿಸುವುದೇ?– ಒಂದುವೇಳೆ ಅಂಥ ತೀವ್ರವಾದ ಕಾರ್ಯಕ್ರಮ ಒಡೆಯರ ಮನಸ್ಸಿಗೆ ಹಿಡಿಸದೆ ಇದ್ದರೆ ಹಾವಾಡಿಗರಿಂದ ಅದನ್ನು ಹಿಡಿಸಿ ಬುಟ್ಟಿಗಾದರೂ ಹಾಕಿಸಿ ಭದ್ರಪಡಿಸಬೇಕಲ್ಲವೆ? ಹಾಗೆ ಮಾಡದಿದ್ದರೆ ಒಡೆಯರಿಗೆ ಅಪಾಯ ತಪ್ಪದು; ಭಂಡಾರ ಅವರ ವಶವಾಗದು. ಭಂಡಾರದ ಸಂಬಂಧವೇ ಅವರಿಗೆ ತಪ್ಪಿಹೋಗಿ, ಅದು ಅವರದಲ್ಲ, ಹಾವಿನ ಮಕ್ಕಳುಮರಿಗಳದ್ದು ಎನ್ನುವಂತಾದೀತು. – ಈ ಅಂಶಗಳನ್ನೆಲ್ಲಾ ಮಹಾಪ್ರಭುಗಳು ಮನಸ್ಸಿಗೆ ತಂದುಕೊಂಡು ತಪ್ಪದೆ ಮುಂದಿನ ಕಾರ್ಯಕ್ರಮ ಕೈಗೊಳ್ಳಬೇಕು."....

ಪ್ರಭುಗಳ ಹಿತ ಚಿಂತನೆಯೇ ತಮ್ಮ ಏಕಮಾತ್ರ ಧ್ಯೇಯವೆಂದು ತೋರಿಸಿಕೊಳ್ಳುತ್ತಾ ತರುಣ ಮಹಾರಾಜರನ್ನು ತಮ್ಮ ಕೈವಶಮಾಡಿಕೊಂಡರೆ, ಅವರ ಅಧಿಕಾರಾವಧಿಯಲ್ಲಿ ತಾವು ನಾನಾ ಸ್ವಾರ್ಥಗಳನ್ನು ಸಾಧಿಸಿಕೊಳ್ಳಬಹುದೆಂಬ ದುರಾಕಾಂಕ್ಷೆಯ ಜನ ಒಂದಲ್ಲ ಒಂದು ನೆಪ ಹೂಡಿಕೊಂಡು ಕೃಷ್ಣರಾಜರ ಸುತ್ತ ಮುತ್ತಿಕೊಂಡರು. ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ತರುಣ ಕೃಷ್ಣರಾಜರ ಮೇಲೆ ತಮ್ಮ ಮೋಡಿಯನ್ನು ಪ್ರಯೋಗಿಸಿದರು.

ಪಳಗಿದ ಕೈಗಳು ಪ್ರಯೋಗಿಸಿದ ಈ ಮೋಡಿಯ ಪ್ರಭಾವವನ್ನು ಮೀರುವುದು ತರುಣ ಕೃಷ್ಣರಾಜರಿಗೆ ಸಾಧ್ಯವಾಗಲಿಲ್ಲ. ಅದುವರೆಗೆ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರ ರಕ್ಷಣೆಯ ಕೋಟೆಯಲ್ಲಿದ್ದು, ಅವರ ನಿಧಾನಾಂತರ ಏಕಾಕಿಯಾಗಿ ರಾಜಕೀಯ ಜೀವನದ ಬಟ್ಟಬಯಲಿಗಿಳಿದ ಕೃಷ್ಣರಾಜರು ಅರಮನೆಯ ಈ ಕಣ್ಣುಕಟ್ಟುಗಾರರು ಎಬ್ಬಿಸಿದ ಪಿತೂರಿಯ ಬಿರುಗಾಳಿಗೆ ಸಿಕ್ಕದಿರುವುದು ಅಸಾಧ್ಯವಾಯಿತು. ಅವರದಕ್ಕೆ ಬಲಿಯಾದರು. ಆ ಬಿರುಗಾಳಿ ಎತ್ತಕಡೆಯಿಂದ ಬಲವಾಗಿ ಬೀಸಿದರತ್ತಕಡೆಗೆ ತಿರುಗಲಾರಂಭಿಸಿದರು.

§

"—ನಾವು ಇದುವರೆಗೆ ಹೇಳಿದ್ದನ್ನೆಲ್ಲಾ ರೆಸಿಡೆಂಟ್ ಸಾಹೇಬರು ಮನಸ್ಸಿಗೆ ತಂದುಕೊಂಡು, ನಮ್ಮ ಗೌರವವನ್ನೂ ಹಿತವನ್ನೂ ರಕ್ಷಿಸಬೇಕು. ನಮ್ಮ ಪ್ರಾರ್ಥನೆ ಇಷ್ಟೇಯೆ."

"ತಮ್ಮ ವಿಚಾರವಾಗಿ ನನಗೆ ತುಂಬ ಪ್ರೀತಿಯಿದೆ ಮಹಾರಾಜರೆ. ತಾವು ದಕ್ಷರಾದ ಆಡಳಿತಗಾರರಾಗಿ ಬೆಳೆದು ಕೀರ್ತಿವಂತರಾಗಬೇಕೆಂಬ ಆಸೆಯೂ ನನಗಿದೆ. ಆದ್ದರಿಂದ ತಾವು ತಮ್ಮ ರಾಜ್ಯದ ಆಡಳಿತದಲ್ಲಿ ಗಣನೀಯವಾದ ಪಾತ್ರವನ್ನು ವಹಿಸುವಂತೆ ನಾನು ವ್ಯವಸ್ಥೆ ಮಾಡುತ್ತೇನೆ ಆ ವಿಚಾರವಾಗಿ ತಾವು ಚಿಂತೆಪಡಬೇಕಾಗಿಲ್ಲ."

"ರೆಸಿಡೆಂಟರು ಈ ಆಶ್ವಾಸನ ಕೊಟ್ಟಿದ್ದು ನಮಗೆ ತುಂಬಾ ಸಂತೋಷವನ್ನುಂಟುಮಾಡಿತು. ರಾಜ್ಯಾಡಳಿತದ ವಿಚಾರದಲ್ಲಿ, ತಮ್ಮ ಅನುಭವದ ಪೂರ್ಣ ಉಪಯೋಗ ಮಾಡಿಕೊಂಡು, ದಕ್ಷರೀತಿಯಲ್ಲಿ ರಾಜ್ಯಭಾರ ನಡೆಸಬೇಕೆಂಬುದೇ ನಮ್ಮ ಆಸೆಯಾಗಿದೆ."

"ತಮ್ಮ ಅಪೇಕ್ಷೆ ನ್ಯಾಯವಾದದ್ದೆ. ಅದು ಈಡೇರಲು ನನ್ನಿಂದಾಗಬಹು

ದಾದ ಸಹಾಯವನ್ನೆಲ್ಲಾ ನಾನು ಮಾಡುತ್ತೇನೆ. ಆದರೆ ಈ ವಿಚಾರದಲ್ಲಿ ಒಂದು ನಿರ್ಧಾರಕ್ಕೆ ಬರಲು ನಿಮ್ಮ ದಿವಾನರ ಒಪ್ಪಿಗೆಯೂ ಬೇಕಾಗುತ್ತದೆ. ಅಲ್ಲವೆ ?"

"ಇದೇನು ಮಾತು ರೆಸಿಡೆಂಟ್ ಸಾಹೇಬರೇ. ನಾವು ಪ್ರಾಪ್ತವಯಸ್ಕರಾಗಿದ್ದೇವೆ. ಈ ರಾಜ್ಯ ನಮ್ಮದು. ಅದರ ಆಡಳಿತಾಧಿಕಾರವನ್ನು ನಾವು ವಹಿಸಿಕೊಳ್ಳುವುದಕ್ಕೆ ನಮ್ಮ ದಿವಾನರ ಒಪ್ಪಿಗೆ ಏಕೆ? – ಅವರ ಒಪ್ಪಿಗೆಗೆ ಕಾದು ಕೂತರೆ, ಅದು – ಈ ಕಾಲಕ್ಕಂತೂ ಬರುವುದಿಲ್ಲ."

"ತಾವು ಹಾಗೆ ಮಾತನಾಡಬಾರದು. ಪೂರ್ಣಯ್ಯನವರನ್ನು ನಾನು ಚೆನ್ನಾಗಿ ಬಲ್ಲೆ. ಅವರ ವಿಚಾರವಾಗಿ ತಾವು ಸೂಚಿಸಿದ ಅಭಿಪ್ರಾಯವನ್ನು ನಾನು ಒಪ್ಪುವುದಿಲ್ಲ; ತಾವು ಯಾವುದೋ ಪ್ರಭಾವಕ್ಕೊಳಗಾಗಿ ಈ ರೀತಿ – "

"ನಾವು ಹೇಳಿಕೆ ಮಾತು ಕೇಳಿಕೊಂಡು ನಡೆಯುತ್ತೇವೆಂದು ರೆಸಿಡೆಂಟ್ ಸಾಹೇಬರ ಅಭಿಪ್ರಾಯವೇನು ?"

"ಹಾಗಲ್ಲ ಮಹಾರಾಜರೆ. ಯಾರು ಏನಾದರೂ ಹೇಳಲಿ, ಅವರು ಹೇಳಿದ್ದನ್ನು ತಾವು ಸ್ವತಂತ್ರವಾಗಿ ಆಲೋಚಿಸಿ, ವಿವೇಚನೆಯಿಂದ ವರ್ತಿಸಿದ ರಾಯಿತು. ನಾನು ತಮ್ಮಿಂದ ನಿರೀಕ್ಷಿಸುವುದು ಅಷ್ಟೇಯೆ. ಪೂರ್ಣಯ್ಯನವರು ಪ್ರಕೃತ ರಾಜಪ್ರತಿನಿಧಿಗಳಾಗಿ ಕೆಲಸ ಮಾಡುತ್ತಿದ್ದಾರೆ. ರಾಜ್ಯದ ಆಡಳಿತದ ಜವಾಬುದಾರಿ ಹೊತ್ತಿದ್ದಾರೆ. ಆದ್ದರಿಂದ ಇಂದಿನ ವ್ಯವಸ್ಥೆಯಲ್ಲಿ ಯಾವ ಬದಲಾವಣೆಯಾಗಬೇಕಾದರೂ, ಅದಕ್ಕೆ ಪ್ರಮುಖವಾಗಿ ಸಂಬಂಧಿಸಿದವರನ್ನು ನಾವು ಲಕ್ಷ್ಯಕ್ಕೆ ತೆಗೆದುಕೊಳ್ಳದೆ, ಅವರೊಡನೆ ವಿಚಾರವನ್ನು ಚರ್ಚಿಸದೆ ಏಕಪಕ್ಷವಾಗಿ ನಿರ್ಣಯಿಸುವುದು ಒಳ್ಳೆಯದಲ್ಲ. ತಮ್ಮ ಅಭಿಲಾಷೆಯನ್ನು ಕುರಿತು ದಿವಾನರಿಗೆ ಹೇಳಿಕಳುಹಿಸಿದ್ದೇನೆ. ಅವರ ಈಗ ಇಲ್ಲಿಗೆ ಬರುವ ನಿರೀಕ್ಷಣೆಯಿದೆ. ರಾಜ್ಯಾಡಳಿತದ ವ್ಯವಸ್ಥೆಯಲ್ಲಿ ಯಾವ ಬದಲಾವಣೆಯೇ ಆಗಲಿ, ತಾವು ಮತ್ತು ತಮ್ಮ ದಿವಾನರು ಪರಸ್ಪರ ಪ್ರೀತಿಗೌರವಗಳಿಂದ ವರ್ತಿಸಬೇಕೆಂಬುದು ನನ್ನ ಅಭಿಪ್ರಾಯ. ಆ ಮಧುರಸಂಬಂಧಕ್ಕೆ ಯಾವ ವಿಧವಾದ ಆತಂಕವೂ ಉಂಟಾಗ ಬಾರದೆಂಬುದು ನನ್ನ ಅಪೇಕ್ಷೆ. ತಮ್ಮ ತಮ್ಮಲ್ಲಿ ವಿರಸವುಂಟಾದರೆ ಅದರಿಂದ ತಮಗೂ ಒಳ್ಳೆಯದಲ್ಲ. ದೇಶಕ್ಕೂ ಒಳ್ಳೆಯದಲ್ಲ."

"ನಿಮ್ಮ ಸಲಹೆಯಂತೆ ನಡೆದುಕೊಳ್ಳಲು ನಮಗೆ ಪೂರ್ಣ ಅಭಿಲಾಷೆಯಿದೆ. ಆದರೆ ನಮ್ಮ ದಿವಾನರೂ ಅಂಥ ಅಭಿಲಾಷೆಯಿಂದ ಪ್ರೇರೇಪಿತರಾಗಿದ್ದಾರೆಯೆ

ಎಂಬ ವಿಚಾರದಲ್ಲಿ ನನಗೆ ಇನ್ನೂ ಸಂದೇಹವಿದೆ. ರೆಸಿಡೆಂಟ್ ಸಾಹೇಬರು ಈ ವಿಚಾರವಾಗಿ ನಮ್ಮ ದಿವಾನರಿಗೂ ಸೂಚನೆಕೊಡುವುದು ಒಳ್ಳೆಯದೆಂದು—"

"ಆ ವಿಚಾರ ನನಗೆ ಬಿಡಿ. ಪೂರ್ಣಯ್ಯನವರಿಗೆ ಏನು ಏನು ಹೇಳಬೇಕೋ ಅದನ್ನೆಲ್ಲಾ ನಾನು ಅವರಿಗೆ ಹೇಳಿದ್ದೇನೆ. ಬೇಕಾದರೆ ಮತ್ತೆ ಹೇಳುತ್ತೇನೆ. ತಾವು ಸಣ್ಣಪುಟ್ಟ ವಿಷಯಗಳನ್ನೆಲ್ಲಾ ಮಹತ್ವದ್ದೆಂದು ಭಾವಿಸಿ ತಮ್ಮ ದಿವಾನರ ವಿಚಾರವಾಗಿ ಮನಸ್ಸು ಕೆಡಿಸಿಕೊಳ್ಳಬಾರದು."

ಸಮ್ಮುಖದ ಹರಿಕಾರ ಬಾಗಿಲಲ್ಲಿ ಬಂದು ನಿಂತು ಮಹಾರಾಜರಿಗೆ ನಮಸ್ಕರಿಸಿ "ದಿವಾನ್ ಸಾಹೇಬರು ಸನ್ನಿಧಾನದ ದರ್ಶನಕ್ಕಾಗಿ ಬಂದಿದ್ದಾರೆ." ಎಂದು ಬಿನ್ನವಿಸಿಕೊಂಡ.

"ಸನ್ನಿಧಾನಕ್ಕೆ ಬರಲಿ. ನಾವು ಅವರಿಗಾಗಿಯೇ ಕಾಯುತ್ತ ಇದ್ದೇವೆ." ಎಂದು ರೆಸಿಡೆಂಟ್ ಕೋಲ್ ಸಾಹೇಬರು ಹೇಳಿದರು.

ಹರಿಕಾರ ನಮಸ್ಕರಿಸಿ ಹೋಗಿ ಪೂರ್ಣಯ್ಯನವರನ್ನು ಒಳಕ್ಕೆ ಕರೆದುಕೊಂಡು ಬಂದ.

ಪೂರ್ಣಯ್ಯನವರು ಸಜ್ಜೆಗೆ ಬಂದೊಡನೆಯೇ ಮಹಾರಾಜರಿಗೂ, ರೆಸಿಡೆಂಟರಿಗೂ ನಮಸ್ಕರಿಸಿದರು.

"ಕುಳಿತುಕೊಳ್ಳಿ ದಿವಾನರೆ."

"'ಸನ್ನಿಧಾನದೊಡನೆ ಮಾತನಾಡುತ್ತಿರುತ್ತೇನೆ. ಒಡನೆಯೇ ಅಲ್ಲಿಗೆ ಬರಬೇಕು' ಎಂದು ರೆಸಿಡೆಂಟ್ ಸಾಹೇಬರು ಹೇಳಿಕಳುಹಿಸಿದ್ದರು.—"

"ಕುಳಿತುಕೊಳ್ಳಿ. ರೆಸಿಡೆಂಟ್ ಸಾಹೇಬರು ಈಗತಾನೆ ನಮಗೆ ಆ ಮಾತು ಹೇಳಿದರು."

"ನಾವೂ ಅದೇ ಮಾತನಾಡುತ್ತಿದ್ದೆವು ಪೂರ್ಣಯ್ಯನವರೆ."

"ಯಾವ ವಿಚಾರ, ಅಪ್ಪಣೆಯಾಗಲಿ ಬಿನ್ನವಿಸಿಕೊಳ್ಳುತ್ತೇನೆ ರೆಸಿಡೆಂಟರೆ."

"ಪ್ರಭುಗಳು ಪ್ರಾಪ್ತವಯಸ್ಕರಾಗಿದ್ದಾರೆ. ವಿದ್ಯಾವಂತರಾಗಿದ್ದಾರೆ. ಅವರಿಗೆ ಸಂಸ್ಥಾನದ ಆಡಳಿತದ ಪರಿಚಯ ಮಾಡಿಕೊಡಬೇಕಾದದ್ದು ನಮ್ಮ ಕರ್ತವ್ಯ."

"ಅವಶ್ಯ ಕರ್ತವ್ಯ. ಈ ವಿಚಾರದಲ್ಲಿ ನನಗೆ ಹೇಗೆ ಆಜ್ಞೆ ಆಗುತ್ತದೆಯೋ ಹಾಗೆ ನಡೆದುಕೊಳ್ಳುತ್ತೇನೆ. – ಆಡಳಿತವನ್ನೆಲ್ಲಾ ಪೂರ್ಣವಾಗಿ ಮಹಾಸ್ವಾಮಿಯವರಿಗೆ ವಹಿಸಿಕೊಡಬೇಕೆಂದಾದರೆ ಅದಕ್ಕೂ ನಾನು ಸಿದ್ಧ. ನನಗೂ

ವಯಸ್ಸಾಯಿತು. ಹಿಂದಿನಂತೆ ಶ್ರಮಿಸುವುದಕ್ಕೆ ಬೇಕಾದ ದೇಹಶಕ್ತಿಯಿಲ್ಲ. ಇನ್ನು ಮುಂದೆ ಆಡಳಿತ ತರುಣ ಹಸ್ತಗಳಿಗೆ ಹೋಗಬೇಕಾದ್ದು ಸಹಜವೇ."

"ಈ ವಿಚಾರದಲ್ಲಿ ನಾನು ಎರಡು ಮಾತು ಹೇಳಬಹುದೆ ಮಹಾರಾಜರೆ."

"ಅಗತ್ಯವಾಗಿ. ಈ ವಿಚಾರದಲ್ಲಿ ತಮ್ಮ ಸಲಹೆ ತುಂಬ ಅಮೂಲ್ಯವಾದುದು."

"ಪೂರ್ಣಯ್ಯನವರೆ, ನನ್ನ ಮಾತುಕೇಳಿ. ಆಡಳಿತದ ಎಲ್ಲ ಜವಾಬುದಾರಿಯನ್ನು ಒಮ್ಮೆಲೇ ಮಹಾರಾಜರಿಗೂ ವಹಿಸುವುದೆಂದರೆ ಅದರಿಂದ ಅವರಿಗೆ ತುಂಬಾ ಶ್ರಮ:ವಾದೀತು. ಹೀಗೆ ಮಾಡೋಣ. ಆಡಳಿತದ ವಿವರಗಳನ್ನೆಲ್ಲಾ ಎಂದಿನಂತೆ ನೀವೇ ನೋಡಿಕೊಳ್ಳಿ. ಸರ್ಕಾರದ ಹೆಸರಿನಲ್ಲಿ ಜಾಹೀರಾಗುವ ಎಲ್ಲ ಆಜ್ಞೆಗಳನ್ನೂ ಪೂರ್ವಭಾವಿಯಾಗಿ ಮಹಾರಾಜರಿಗೆ ಒಪ್ಪಿಸಿ, ಅವಕ್ಕೆ ಅವರ ಶ್ರೀಹಸ್ತ, ರಾಜಮುದ್ರೆ ಹಾಕಿಸಿಬಿಡಿ. ರಾಜಮುದ್ರೆ ಮಹಾರಾಜರಲ್ಲೇ ಇರಲಿ."

"ತಾವು ಹೇಗೆ ಅಪೇಕ್ಷಿಸುತ್ತೀರೋ ಅದರಂತೆ ನಡೆದುಕೊಳ್ಳುವುದು ತಮ್ಮ ಸೇವಕನಾದ ನನ್ನ ಕರ್ತವ್ಯ."

"ತಮ್ಮ ಕರ್ತವ್ಯ ನಿಷ್ಠೆಯ ವಿಚಾರದಲ್ಲಿ ನನಗೆ ಯಾವ ಅನುಮಾನವೂ ಇಲ್ಲ. ತಾವು ಈ ಸಂಸ್ಥಾನಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸಿರುವಿರೆಂಬುದರಲ್ಲೂ ಸಂದೇಹವಿಲ್ಲ. ನಾನು ಈ ವ್ಯವಸ್ಥೆಯನ್ನು ಸೂಚಿಸಿದ್ದರಲ್ಲಿ ನನ್ನ ಅಭಿಪ್ರಾಯ ಇಷ್ಟೇಯೆ. ಸಂಸ್ಥಾನದ ಆಡಳಿತಕ್ಕೆ ನಿಮ್ಮ ಅನುಭವ ದಕ್ಷತೆಗಳ ಲಾಭ ದೊರೆಯಬೇಕು. ಹಾಗೆಯೇ ಆಡಳಿತದ ವಿವರಗಳು, ಸಮಸ್ಯೆಗಳು, ಅವುಗಳ ಪರಿಹಾರಮಾರ್ಗಗಳನ್ನು ಕುರಿತು ಮಹಾರಾಜರವರಿಗೂ ಅನುಭವ ದೊರೆಯಬೇಕು.—"

"ಸದ್ಯಕ್ಕೆ ರೆಸಿಡೆಂಟ್ ಸಾಹೇಬರ ಸಲಹೆ ಸೂಕ್ತವೆಂದು ತೋರುತ್ತದೆ."

"ಸನ್ನಿಧಾನದ ಅಭಿಪ್ರಾಯ ಹಾಗಿದ್ದರೆ ಹಾಗೆಯೇ ನಡೆದುಕೊಳ್ಳುತ್ತೇನೆ."

"ಸಾಧ್ಯವಾದಷ್ಟು ಶೀಘ್ರವಾಗಿ ಈ ವ್ಯವಸ್ಥೆ ಆಚರಣೆಗೆ ಬರಲಿ, ದಿವಾನರೆ."

"'ಶುಭಸ್ಯ ಶೀಘ್ರಂ' ಎನ್ನುತ್ತಾರೆ ನಮ್ಮ ಹಿರಿಯರು. ನಾಳೆಯಿಂದಲೇ ಈ ವ್ಯವಸ್ಥೆಯಂತೆ ನಡೆದುಕೊಳ್ಳುತ್ತೇನೆ, ರೆಸಿಡೆಂಟರೆ ಸರ್ಕಾರಿ ಕಾಗದ ಪತ್ರಗಳನ್ನು ಒಪ್ಪಿಸಿಕೊಳ್ಳುವುದಕ್ಕೆ ಸನ್ನಿಧಾನಕ್ಕೆ ಯಾವಾಗ ಅವಕಾಶವಿರಬಹುದು

ದೆಂಬುದನ್ನು ತಿಳಿಸಿದರೆ, ಪ್ರತಿದಿನವೂ ಆ ಹೊತ್ತಿಗೆ ಅವರ ದರ್ಶನ ತೆಗೆದುಕೊಳ್ಳುತ್ತೇನೆ. ಸನ್ನಿಧಾನದವರು ಈ ರಾಜಮುದ್ರೆಗಳನ್ನು ಒಪ್ಪಿಸಿಕೊಳ್ಳಬೇಕು."

"ಸ್ವೀಕರಿಸಿ ಮಹಾರಾಜರೆ."

"ಆಗಲಿ – ರೆಸಿಡೆಂಟ್ ಸಾಹೇಬರು ನಮ್ಮ ವಿಚಾರವಾಗಿ ಇಷ್ಟೊಂದು ಪ್ರೀತಿ ವಿಶ್ವಾಸಗಳನ್ನು ತೋರುತ್ತಿರುವುದು ನಮ್ಮ ಸಂಸ್ಥಾನದ ಭಾಗ್ಯವೆಂದು ನಾವು ಭಾವಿಸುತ್ತೇವೆ. ದಿವಾನರೆ, ನಾವು ಪ್ರತಿದಿನವೂ ಯಾವ ಹೊತ್ತಿನಲ್ಲಿ ಸರ್ಕಾರಿ ಕಾಗದ ಪತ್ರಗಳನ್ನು ಒಪ್ಪಿಸಿಕೊಳ್ಳುತ್ತೇವೆಯೆಂಬುದನ್ನು ನಾಳೆ ಬೆಳಗ್ಗೆ ನಿಮಗೆ ಶ್ರುತಪಡಿಸುತ್ತೇವೆ."

"ಅಪ್ಪಣೆಯಾದರೆ—"

"ಹೋಗಿ ಬನ್ನಿ ದಿವಾನರೆ."

"ನಾನೂ ಹೋಗಬಹುದು ತಾನೆ ?"

"ಆಗಬಹುದು, ರೆಸಿಡೆಂಟರೆ."

§

"ನೀವು ವ್ಯವಸ್ಥೆಗೆ ಒಪ್ಪಿ ಆ ಹುಡುಗನ ಕೈಗೆ ರಾಜಮುದ್ರೆಗಳನ್ನು ಕೊಟ್ಟು ಬಂದಿದ್ದು ತುಂಬಾ ತಪ್ಪಾಯಿತು ಭಾವಾಜಿ."

"ನೀನು ಬುದ್ಧಿಯಿಲ್ಲದ ಮಾತನಾಡುತ್ತಿದ್ದಿ, ಕುಪ್ಪಣ್ಣ. ಹುಡುಗನಾದರೇನು ವಯಸ್ಸಾದವನಾದರೇನು ರಾಜ, ರಾಜನೇ. ಅವನು ರಾಜ್ಯದ ಆಡಳಿತವನ್ನು ಮಂತ್ರಿಯಲ್ಲಿ ಬಿಟ್ಟಿರುವವರೆಗೆ ಆ ಮಾತು ಬೇರೆ. ತಾನೇ ಸ್ವತಂತ್ರನಾಗಿ ರಾಜ್ಯವಾಳಲು ರಾಜ ಮನಸ್ಸು ಮಾಡಿದರೆ, ಮಂತ್ರಿ ಏನು ಮಾಡಲಾದೀತು ? ರಾಜನ ಅಪೇಕ್ಷೆಗೆ ಒಪ್ಪಿಗೆ ಕೊಡಬೇಕು; ಇಲ್ಲ ಮಂತ್ರಿ ಪದವಿಯನ್ನು ಬಿಟ್ಟು ಹೊರಡಬೇಕು."

"ನಾನು ಒಂದು ಮಾತು ಹೇಳುತ್ತೇನೆ–ಭಾವಾಜಿ ಕೋಪ ಮಾಡಿಕೊಳ್ಳಕೂಡದು. ನಿಮಗೆ ವಯಸ್ಸು ಹೆಚ್ಚಾದ ಹಾಗೆ ಬುದ್ಧಿ ಮಂಕಾಗುತ್ತಿದೆ. ಪರಿಸ್ಥಿತಿ ನಿಮಗೆ ಅರ್ಥವಾಗುವುದಿಲ್ಲ ನೀವು ಬೇರೆಯವರ ಮಾತನ್ನು ಕೇಳುವುದಿಲ್ಲ. ಪರಿಣಾಮ ನೀವು ಒಳ್ಳೆಯವರು ಎನಿಸಿಕೊಳ್ಳುತ್ತೀರಿ – ನಿಮ್ಮ ಅನಂತರ ನಿಮ್ಮ ಮಕ್ಕಳು ಮೊಮ್ಮಕ್ಕಳು ಚಿಕ್ಕನಾಯಕನ ಹಳ್ಳಿಗೆ ಹೋಗಬೇಕು. ಅಷ್ಟೇಯೆ !"

"ಕುಪ್ಪಣ್ಣ ! ನೀನು ಹೀಗೆಲ್ಲಾ ಮಾತನಾಡುವುದು ಚೆನ್ನಾಗಿಲ್ಲ. ಇನ್ನೂ

ಹಿರಣ್ಣಿಯಂಥ ಹುಡುಗ ಹೀಗೆ ಮಾತನಾಡಿದರೆ, ಅವನನ್ನು ಬೈದು ಬುದ್ಧಿ ಹೇಳ ಬೇಕಾದವನು ನೀನು – ಅಂಥಾದ್ದರಲ್ಲಿ ನೀನೇ ಹೀಗಾಡಿದರೆ ಹೇಗೆ? ನಾನು ಕೇಳುತ್ತೇನೆ – ನಿಮಗೇನು ಕಡಮೆ ಆಗಿರುವುದು? ನೀನು ದೊಡ್ಡ ಕೆಲಸ ದಲ್ಲಿದ್ದೀಯೆ. ಈಗಂತೂ ನನ್ನ ಕೆಲಸವನ್ನೆಲ್ಲಾ ನೀನೇ ನೋಡಿಕೊಳ್ಳುತ್ತ ಇದ್ದೀಯೆ; ಚೆನ್ನಾಗಿ ಸಂಪಾದನೆ ಮಾಡಿದ್ದೀಯ. ನಮ್ಮ ಹುಡುಗರೂ ನಮ್ಮ ಕಛೇರಿಯಲ್ಲೇ ದೊಡ್ಡ ಕೆಲಸಗಳಲ್ಲಿದ್ದಾರೆ. ಯಳಂದೂರು ಜಹಗೀರಿ ಇದೆ – ಇನ್ನೇನಾಗಬೇಕು ನಿಮಗೆ!"

"ಹಾಗೆಂದು ಕೂತುಕೊಂಡಿರಿ – ಆಮೇಲೆ ಎಲ್ಲ ಸರಿಯಾಗುತ್ತದೆ! ದಿವಾನ್ ಸಾಹೇಬರು ನಮ್ಮ ಮಾತು ಕೇಳುವುದಿಲ್ಲ. ನಾವು ಅವರ ಕಣ್ಣ ಮುಂದಿನ ಹುಡುಗರು! ನೀವಾದರೂ ಹೇಳಿ ತಿಪ್ಪಯ್ಯನವರೆ. ಅನೇಕ ವರ್ಷ ಗಳಿಂದ ನೀವು ಅವರ ಸೇವೆ ಮಾಡಿದ್ದೀರಿ. ನಿಮ್ಮಂಥವರು ಹೇಳಿದರಾದರೂ ಅವರ ತಲೆಗೆ ಹಿಡಿಯಬಹುದು."

"ಇದೆಲ್ಲಾ ಅವರ ಚಿತ್ತಕ್ಕೆ ವೇದ್ಯವಾದ ವಿಚಾರವೇ. ನಮ್ಮ ಮನಸ್ಸಮಾ ಧಾನಕ್ಕಾಗಿ ನಾವು ಹೇಳಿಕೊಳ್ಳಬೇಕು. ಕುಪ್ಪಣ್ಣನವರ ಮಾತು ಇಷ್ಟು, ದಿವಾನರೆ: ರಾಜರ ಅನುಗ್ರಹ ಎನ್ನುವುದು ಆಷಾಢಮಾಸದ ಸೂರ್ಯ ಪ್ರಕಾಶ ಇದ್ದ ಹಾಗೆ! ಈಗ ಇರುತ್ತದೆ; ಇನ್ನೊಂದು ಕ್ಷಣಕ್ಕಿಲ್ಲ! ಅರಮನೆಯವರಿಗೆ ತಮ್ಮ ವಿಚಾರದಲ್ಲಿ ಹೆದರಿಕೆಯಿದೆ – ಹಳೇಹುಲಿ ಎಂತ. ನಿಮ್ಮ ಮಾತು ಬೇರೆ. ನಿಮ್ಮನ್ನು ಕಂಡ ಹಾಗೆ ನಿಮ್ಮ ಮಕ್ಕಳನ್ನು ಕಾಣುತ್ತಾರೇನು? ನಿಮ್ಮ ದಿವಾನಗಿರಿ ಅವರಿಗೆ ಕೊಡುತ್ತಾರೇನು? ರಾಜರ ಮನೋವೃತ್ತಿ ಹೇಗಿದೆ ಎಂಬುದನ್ನು ನಾನು ನಿಮಗೆ ಹೇಳಬೇಕೆ? ನಿಮ್ಮ ಕೈಬಲವಾಗಿದ್ದಾಗಲೇ, ಈ ದಿವಾನ್ ಪದವಿ ನಿಮ್ಮ ವಂಶಕ್ಕೆ ಉಳಿಯುವ ಹಾಗೆ ಮಾಡಬೇಕು—"

"ಸರಿ, ಸರಿ. ಅದೇ ಹಳೇ ರಾಗತಾನೆ! ಆ ಮಾತು ಮುಗಿದು ಎಷ್ಟೋ ದಿನ ಆಯಿತು. ಕಂಪನಿ ಸರ್ಕಾರದವರು 'ಅದು ಆಗುವುದಿಲ್ಲ' ಅಂದು ಆಯ್ತು. ನಾನು ಜಹಗೀರಿಗೆ ಒಪ್ಪಿಕೊಂಡಿದ್ದಾಯಿತು."

"ಹಾಗಲ್ಲ ಭಾವಾಜಿ. ನಮ್ಮ ಮಾತು ಸ್ವಲ್ಪ ಕೇಳಿ. ಈಗ ಮತ್ತೆ ಪ್ರಯತ್ನ ಮಾಡಿ. ಜಹಗೀರಿಯೂ ಇರಲಿ. ಯಾರು ಬೇಡವೆನ್ನುತ್ತಾರೆ? ಆದರೆ ವಂಶದ ಗೌರವಕ್ಕೆ ತಕ್ಕ ಅಧಿಕಾರವೂ ವಂಶಕ್ಕೆ ಉಳಿಯಲಿ. ಐಶ್ವರ್ಯದ

ಹತ್ತಿರವಿಷ್ಟು ಬಲ ಅಧಿಕಾರದಲ್ಲಿದೆ. ಆದ್ದರಿಂದ ಅದನ್ನು ಉಳಿಸಿಕೊಳ್ಳಬೇಕು. ಬಿಟ್ಟು ಕೊಡಬಾರದು."

"ಆಯಿತು. ಈಗೇನು ಮಾಡಬೇಕು ಅದಾದರೂ ಹೇಳಿ. – ನೀನು ಏನು ಹೇಳುತ್ತಿ ತಿಪ್ಪಯ್ಯ."

"ನಾನೇನು ಹೇಳಲಿ? ಅದನ್ನು ದಿವಾನ್ ಸಾಹೇಬರೇ ನಿರ್ಣಯಿಸಬೇಕು."

"ನಾವು ನಿರ್ಣಯಿಸುವುದಿರಲಿ. ಮೊದಲು ನಿಮ್ಮ ಆಲೋಚನೆ ಏನು ಅದನ್ನಾದರೂ ಹೇಳಿ."

"ನಾನು ಹೇಳಲೆ ಭಾವಾಜಿ: ರೆಸಿಡೆಂಟ್ ಕೋಲ್ ಸಾಹೇಬ ಹೇಳಿದಂತೆ ನೀವು ರಾಜಮುದ್ರೆಯನ್ನು ಆ ಹುಡುಗನ ಕೈಗೆ ಕೊಟ್ಟು, ಆಡಳಿತದ ವಿಚಾರದಲ್ಲಿ ಆತ ಹೇಳಿದಂತೆ ನಡೆದುಕೊಳ್ಳುವುದಕ್ಕೆ ಒಪ್ಪಿದಿರಲ್ಲ."

"ಹೌದು. ಒಪ್ಪಿದೆ."

"ಅದಕ್ಕೆ ಪ್ರತಿಯಾಗಿ 'ವಂಶಪಾರಂಪರ್ಯವಾದ ದಿವಾನಿಕೆ ನಮ್ಮ ಮನೆತನಕ್ಕೆ ಉಳಿಸಿಕೊಡಬೇಕು' ಎಂತ ಆ ಕೋಲ್ ಸಾಹೇಬನನ್ನೇ ಕೇಳಿ."

"ಅವರನ್ನು ಕೇಳಿದರೇನಾಯಿತು? ಕಂಪನಿ ಸರ್ಕಾರ ಅದಕ್ಕೊಪ್ಪಬೇಕಲ್ಲ."

"ಅವರು ಯಾಕೆ ಒಪ್ಪಬೇಕು? ಈಗ ಮಹಾರಾಜರು ಸ್ವತಂತ್ರರಾಗಿದ್ದಾರಲ್ಲ! ಕೋಲ್ ಸಾಹೇಬ ಅವರಿಗೇ ಹೇಳಿ ಈ ಕೆಲಸ ಮಾಡಿಸಿ ಕೊಡಲಿ."

"ಅಷ್ಟು ತಾನೆ. ಪ್ರಯತ್ನ ಮಾಡೋಣ."

"ಸುಮ್ಮನೆ ಹಾಗೆ ಹೇಳಿ ಪ್ರಯೋಜನವಿಲ್ಲ ಭಾವಾಜಿ. ಆದಷ್ಟು ಬೇಗ ನಿಮ್ಮನ್ನು ಕೆಲಸದಿಂದ ತೆಗೆದುಹಾಕಬೇಕೆಂದು ಅರಮನೆಯಲ್ಲಿ ಪಿತೂರಿ ನಡೆಯುತ್ತಿದೆ. – ಏನು ತಿಪ್ಪಯ್ಯನವರೇ."

"ಆ ಸುದ್ದಿ ನನ್ನ ಕಿವಿಗೂ ಬಿದ್ದಿದೆ ಕುಪ್ಪಣ್ಣನವರೆ."

"ನೋಡಿದಿರಾ! ತಡಮಾಡಿದರೆ ಕೆಲಸ ಕೆಡುತ್ತದೆ ಭಾವಾಜಿ."

"ಆಗಲಿ; ಕೋಲ್ ಸಾಹೇಬರ ಹತ್ತಿರ ಮಾತನಾಡುತ್ತೇನೆ."

"ಮಾತನಾಡುವುದು ಮಾತ್ರವಲ್ಲ. 'ನೀವು ಹೇಳಿದ ಷರತ್ತಿಗೆ ನಾನು ಒಪ್ಪಲಿಲ್ಲವೆ. ಈಗ ಮಹಾರಾಜನನ್ನು ಈ ಷರತ್ತಿಗೆ ಒಪ್ಪಿಸಿ. ಇಲ್ಲದಿದ್ದರೆ ನಾನು ದಿವಾನನಾಗಿರಲು ಸಾಧ್ಯವಿಲ್ಲ' – ಎನ್ನುವವರೆಗೆ ನೀವು ಹೋಗಬೇಕು."

"ಹಾಗೆಂದರೆ, 'ಹೋದರೆ ಹೋಗು' ಎನ್ನುತ್ತಾರೆ!"

"ಅಲ್ಲೇ ನೀವು ತಪ್ಪು ಮಾಡುತ್ತಿರುವುದು ಭಾವಾಜಿ. ಹಾಗೆನ್ನುವ ಧೈರ್ಯ ಮಹಾರಾಜನಿಗೂ ಇಲ್ಲ. ಕೋಲ್ ಸಾಹೇಬನಿಗೂ ಇಲ್ಲ. ಈ ರಾಜ್ಯದ ಆಡಳಿತದ ಒಳಗುಟ್ಟು ಅವನಿಗೇನು ಗೊತ್ತು? ಈ ರಾಜನಿಗೇನು ಗೊತ್ತು? ಅವರು ಆ ಜಾಡು ಗೊತ್ತುಹಚ್ಚಿಕೊಳ್ಳುವುದಕ್ಕೆ ಮೊದಲೇ ನೀವು ನಿಮ್ಮ ಕಾರ್ಯ ಸಾಧಿಸಬೇಕು. ಆಡಳಿತದ ವಿಚಾರ ಚೆನ್ನಾಗಿ ಬಲ್ಲವರು ಬಚ್ಚೀರಾಯರು ಒಬ್ಬರಿದ್ದರು. ಈಗ ಅವರೂ ಹಾಸುಗೆ ಹಿಡಿದು ಮಲಗಿದ್ದಾರೆ."

"ಸರಿ. ನೋಡೋಣ."

"ನೀವು ಇವತ್ತೇ ಕೋಲ್ ಸಾಹೇಬನನ್ನು ನೋಡಬೇಕು ಭಾವಾಜಿ. ತಡಮಾಡಲೇಕೂಡದು. ಇದರಲ್ಲೆಲ್ಲಾ ಯಾರ ಕೈವಾಡ ಮೊದಲು ಫಲಿಸುತ್ತದೋ ಅವರ ಕಾರ್ಯ ಫಲಿಸುತ್ತದೆ. ಕೋಲ್ ಸಾಹೇಬನ ಹತ್ತಿರ ಅರಮನೆಯವರ ಕೈಬಲವಾಗುವುದಕ್ಕೆ ಮುಂಚೆ ನಾವು ಕೆಲಸ ಸಾಧಿಸಿಬಿಡಬೇಕು."

"ಆಗಲಿ ಕುಪ್ಪಣ್ಣ. ಇನ್ನು ನಿನ್ನ ಕೆಲಸ ನೀನು ನೋಡಿಕೋ ಹೋಗು. ಅರಮನೆಯಿಂದ ಏನಾದರೂ ಸುದ್ದಿ ಬಂದರೆ ತಿಳಿಸು."

"ನಾನೇ ಬಂದು ಹೇಳುತ್ತೇನೆ, ಭಾವಾಜಿ."

§

"ತಾನು ಬಯಸಿದ್ದು ಒಂದಾದರೆ, ಅದು ಆದದ್ದು ಇನ್ನೊಂದು" – ಎಂಬ ಅನುಭವ ಕೋಲ್ ಸಾಹೇಬನಿಗೆ ಉಂಟಾಗಲು ಹೆಚ್ಚು ಕಾಲ ಬೇಕಾಗಲಿಲ್ಲ.

ಶ್ರೀಮನ್ಮಹಾರಾಜಾಧಿರಾಜ ಶ್ರೀ ಕೃಷ್ಣರಾಜಒಡೆಯರವರೇನೋ ಆತನ ಮಾತಿಗೆ ಪೂರ್ಣಗೌರವ ಕೊಟ್ಟು ನಡೆದುಕೊಂಡರು. ಪೂರ್ಣಯ್ಯನವರೊಡನೆ ಪ್ರೀತಿಗೌರವಗಳಿಂದ ವರ್ತಿಸಿದರು. ರಾಜ್ಯಾಡಳಿತದ ವಿಚಾರದಲ್ಲಿ ತುಂಬ ಶ್ರದ್ಧೆವಹಿಸಿ ಕೋಲ್ ಸಾಹೇಬನ ಮೆಚ್ಚುಗೆಗೆ ಪಾತ್ರರಾದರು.

ಆದರೆ ಪೂರ್ಣಯ್ಯನವರ ರೀತಿಯೇ ಬೇರೆಯಾಯಿತು. ಇಳಿವಯಸ್ಸಿನ ಪರಿಣಾಮವಾಗಿ ಅವರ ಮೈ ಮನಸ್ಸುಗಳಲ್ಲಿ ತಲೆದೋರಿದ ದೌರ್ಬಲ್ಯವನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳಲು ನಿರ್ಧರಿಸಿದ್ದವರ ಕೈಗೊಂಬೆಯಂತಾದರು ಪೂರ್ಣಯ್ಯನವರು. ಇದು ಕೋಲ್ ಸಾಹೇಬನ ಮನಸ್ಸಿಗೆ ತುಂಬ ನೋವನ್ನುಂಟು ಮಾಡಿತು. ಪರಿಸ್ಥಿತಿ ಹದ ಮೀರದಂತೆ ನೋಡಿಕೊಳ್ಳಬೇಕೆಂದು ಅವನು ಪೂರ್ಣಯ್ಯನವರಿಗೆ ಮಾಡಿದ ಸದುಪದೇಶವೊಂದೂ ಪರಿಣಾಮಕಾರಿಯಾಗಲಿಲ್ಲ.

ಆರು ತಿಂಗಳು ಕಳೆಯುವುದರೊಳಗಾಗಿ ಪೂರ್ಣಯ್ಯನವರ ನಡವಳಿಕೆ ಅಸಹನೀಯವಾಯಿತು. ಆ ಅನಿಷ್ಟ ಪರಿಸ್ಥಿತಿಯಿಂದ ಕೃಷ್ಣರಾಜ ಒಡೆಯರನ್ನು ಹೇಗೆ ರಕ್ಷಿಸುವುದೆಂಬುದು ಕೋಲ್ ಸಾಹೇಬನಿಗೆ ದೊಡ್ಡ ಸಮಸ್ಯೆಯಾಯಿತು. ಕೊನೆಗವನು, ಇಲ್ಲಿನ ಆಗುಹೋಗುಗಳನ್ನೆಲ್ಲಾ ತನ್ನ ಮೇಲ್ಪಟ್ಟ ಅಧಿಕಾರಿಗಳಿಗೆ ವರದಿ ಮಾಡುವುದು ಉಚಿತವೆಂದು ಭಾವಿಸಿ ಈ ರೀತಿ ಒಂದು ಪತ್ರ ಬರೆಸಿದನು:

"....ಭಾರತೀಯ ಆಡಳಿತಗಾರರಲ್ಲಿ ಪೂರ್ಣಯ್ಯನವರು ಪ್ರಪ್ರಥಮ ವರ್ಗಕ್ಕೆ ಸೇರಿದವರಾಗಿದ್ದರೆಂಬುದು ನಿಜವಾದರೂ ಅವರ ಇತ್ತೀಚಿನ ನಡವಳಿಕೆ ನನಗೆ ತುಂಬಾ ನಿರಾಶೆಯನ್ನುಂಟುಮಾಡಿದೆ. ಮುದಿತನ, ಅದರಿಂದುಂಟಾಗುವ ದೇಹ ಮತ್ತು ಮಾನಸಿಕ ದೌರ್ಬಲ್ಯ, ದುಷ್ಟ ಜನರ ಪ್ರೇರೇಪಣೆ ಇವೆಲ್ಲವುಗಳ ಪರಿಣಾಮವಾಗಿ ಪೂರ್ಣಯ್ಯನವರ ನಡತೆ ಕೆಳಮಟ್ಟಕ್ಕಿಳಿದಿದೆಯೆಂದು ಸೂಚಿಸಲು ನನಗೆ ತುಂಬ ದುಃಖವಾಗುತ್ತದೆ.

"ಈಗ್ಗೆ ಸ್ವಲ್ಪಕಾಲದ ಹಿಂದೆ ಅವರು ನನ್ನ ಭೇಟಿಗೆ ಬಂದಿದ್ದಾಗ,ಮೈಸೂರು ರಾಜ್ಯದ ಆಡಳಿತದಲ್ಲಿ ಮಹಾರಾಜರು ಭಾಗವಹಿಸುವಂತೆ ನಾನು ವ್ಯವಸ್ಥೆ ಮಾಡಿದ್ದು ತಪ್ಪಾಯಿತೆಂದು ನನಗೆ ತೋರಿಸಿಕೊಡಲು ತುಂಬ ಪ್ರಯತ್ನಿಸಿದರು. ಅಷ್ಟು ಮಾತ್ರವಲ್ಲ, ಅದರಿಂದಾಗಿ ನಾನು ಕಂಪನಿ ಸರ್ಕಾರದ ಆಗ್ರಹಕ್ಕೆ ಪಾತ್ರ ನಾಗುವುದು ಖಂಡಿತವೆಂದು ಬೆದರಿಸಿದರು. ಕೊನೆಗೆ, ತಮಗೂ ಕಂಪನಿ ಸರ್ಕಾರಕ್ಕೂ ಆದ ಕೌಲಿನ ಪ್ರಕಾರ ತಮಗೆ ಸಂಸ್ಥಾನದ ದಿವಾನಿ ಅಧಿಕಾರ ದೊರೆತಿದೆಯೆಂದೂ, ಆ ಅಧಿಕಾರವನ್ನು ಕಿತ್ತುಕೊಳ್ಳುವ ಶಕ್ತಿ ಯಾರಿಗೂ ಇಲ್ಲ ವೆಂದೂ ವಾದಿಸಿದರು. ಅಲ್ಲದೆ ತಮ್ಮ ಅನಂತರ ಯಾರು ಸಂಸ್ಥಾನದ ದಿವಾನರಾಗ ಬೇಕೆಂಬುದನ್ನು ನಿರ್ಧರಿಸುವ ಹಕ್ಕು ತಮ್ಮದೆಂದೂ ತಾವು ತಮ್ಮ ಮಗನೋ, ತಮ್ಮ ಮೈದುನನೋ, ಅವನ ಮಗನೋ ಯಾರನ್ನು ತಾವು ನಿಯಮಿಸುತ್ತಾರೋ ಅವರು ದಿವಾನರಾಗುವರೆಂದೂ ಹೇಳಿದರು.

"ಅವರ ಈ ಹೇಳಿಕೆ ನನಗೆ ತುಂಬ ಆಶ್ಚರ್ಯವನ್ನುಂಟು ಮಾಡಿತು. ಪೂರ್ಣಯ್ಯನವರಂಥ ವ್ಯಕ್ತಿಯ ಹೃದಯದಲ್ಲಿ ಇಂಥಾ ಭಾವನೆಗಳನ್ನು ಬೆಳೆಯು ಗೊಡುವುದು ಉಭಯತಾಪಿ ಒಳ್ಳೆಯದಲ್ಲವೆಂದು ಭಾವಿಸಿ, ಅವರ ಈ ಭಾವನೆ ಗಳೆಲ್ಲವೂ ತಪ್ಪೆಂದು ನಾನು ಬಲವಾಗಿ ವಾದಿಸಿದೆ.

"ಅಲ್ಲಿಂದಾಚೆಗೆ ಅವರ ವರ್ತನೆ ಇನ್ನೂ ಕೇಡಾಯಿತು. ಅವರ ಬುದ್ಧಿ ಏಕೆ

ಹೀಗೆ ಮಾರ್ಪಡುತ್ತಿದೆಯೆಂಬುದನ್ನು ಅರ್ಥಮಾಡಿಕೊಳ್ಳಲು ನಾನು ಅವರ ಮತ್ತು ಅವರ ಸುತ್ತಮುತ್ತ ಇರುವ ವ್ಯಕ್ತಿಗಳ ವಿಚಾರವಾಗಿ ಕೊಂಚ ತಪಾಸಣೆ ನಡೆಸಬೇಕಾಯಿತು. ನನ್ನ ಈ ಪ್ರಯತ್ನದ ಫಲಿತಾಂಶವನ್ನು ನಿಮ್ಮ ಗಮನಕ್ಕೆ ತರುವುದು ಅವಶ್ಯಕವೆಂದು ಭಾವಿಸುತ್ತೇನೆ.

" ಶ್ರೀಮನ್ಮಹಾರಾಜರ ಪಟ್ಟಾಭಿಷೇಕ ಕಾಲದಲ್ಲಿ ಬಚ್ಚೇರಾಯ ಎಂಬುವರನ್ನು ತೋಷೀಖಾನೆಯ ಪ್ರಧಾನಾಧಿಕಾರಿಗಳನ್ನಾಗಿ ನಿಯಮಿಸಲಾಯಿತೆಂಬುದು ತಮಗೆ ತಿಳಿದಿರಬಹುದು. ಇವರೂ ದಿವಾನ್ ಪೂರ್ಣಯ್ಯನವರೂ ಸಮವಯಸ್ಕರು – ಸುಮಾರು ಅರವತ್ತೈದು ಎಪ್ಪತ್ತು ವರ್ಷ. ಇಬ್ಬರೂ ಬಹು ಕಾಲದಿಂದ ಒಟ್ಟಿಗೆ ಕೆಲಸ ಮಾಡಿದವರು. ಬಚ್ಚೇರಾಯರು ಪೂರ್ಣಯ್ಯನವರಂತೆಯೇ ದಕ್ಷರು. ವಾಸ್ತವವಾಗಿ ನಾವು ಇವರನ್ನು ಎರಡನೆಯ ದಿವಾನರೆಂದು ತಿಳಿದು ವ್ಯವಹರಿಸುತ್ತಿದ್ದೆವು. ಪೂರ್ಣಯ್ಯನವರು ಎಲ್ಲ ವಿಚಾರಗಳಲ್ಲೂ ಅವರ ಸಲಹೆ ಸೂಚನೆಗಳನ್ನು ತೆಗೆದುಕೊಂಡೇ ನಡೆಯುತ್ತಿದ್ದರು. ತಮ್ಮ ಎಷ್ಟೋ ಮುಖ್ಯ ಕೆಲಸಗಳನ್ನು ಅವರಿಗೆ ವಹಿಸುತ್ತಿದ್ದರು. ಆದರೆ, ಈಗೊಂದು ವರ್ಷದ ಹಿಂದೆ ಬಚ್ಚೇರಾಯರು ವ್ಯಾಧಿಗ್ರಸ್ತರಾಗಿ ಮಲಗಿದರು. ಇತ್ತೀಚೆಗಂತೂ ಅವರಿಗೆ ಬುದ್ಧಿಭ್ರಮೆಯುಂಟಾಗಿದೆ. ಹೀಗಾಗಿ ಅವರ ನೆರವೂ ಮಂತ್ರಾಲೋಚನೆಯೂ ಪೂರ್ಣಯ್ಯನವರಿಗೆ ಇಲ್ಲದೆಹೋಯಿತು. ಈ ಕೊರತೆಯನ್ನು ಸರಿಪಡಿಸಿಕೊಳ್ಳುವುದಕ್ಕಾಗಿ ಪೂರ್ಣಯ್ಯನವರು, ತಮ್ಮ ಮನೆತನದ ಜನರನ್ನೇ ಹತ್ತಿರಕ್ಕೆ ಸೇರಿಸಿಕೊಂಡು, ಅವರನ್ನು ತಮ್ಮ ಪ್ರತಿನಿಧಿಗಳನ್ನಾಗಿ ಮಾಡಿಕೊಂಡು, ಅವರ ಮೂಲಕ ತಮ್ಮ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಆರಂಭಿಸಿದರು. ಹೀಗಾದದ್ದೇ ಇಂದಿನ ಎಲ್ಲ ತಕರಾರುಗಳಿಗೂ ಕಾರಣವೆಂದು ಭಾವಿಸುತ್ತೇನೆ. ಹೀಗೆ ಅವರ ಸಮೀಪವರ್ತಿಗಳಾಗಿ ಅವರ ಪರವಾಗಿ ಕಾರ್ಯನಡೆಸುತ್ತಿರುವವರಲ್ಲಿ ಇಬ್ಬರು ಮುಖ್ಯರು. ಇವರಲ್ಲಿ ಒಬ್ಬ ಕುಪ್ಪಣ್ಣ. ಈತ ಪೂರ್ಣಯ್ಯನವರ ಭಾವಮೈದುನ. ಇನ್ನೊಬ್ಬ ಇನ್ನೂ ಚಿಕ್ಕವಯಸ್ಸಿನ ಹುಡುಗ. ಇಪ್ಪತ್ತು ಇಪ್ಪತ್ತೈದು ವರ್ಷವಿರಬಹುದು – ಹಿರಣ್ಯಪ್ಪ ಎಂದು ಅವನ ಹೆಸರು. ಅವನು ಪೂರ್ಣಯ್ಯನವರ ಭಾವಮೈದುನನ ಮಗನೆಂದು ತೋರುತ್ತದೆ. ಪೂರ್ಣಯ್ಯನವರ ದೇಹಶಕ್ತಿ ಕುಗ್ಗಿದಂತೆ ಈ ಜನರ ಪ್ರಾಬಲ್ಯ ಬೆಳೆಯುತ್ತಿದೆ. ಅವರು ಸ್ವಾರ್ಥ ಸಾಧನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಪೂರ್ಣಯ್ಯನವರಿಗೆ ಈ ಆನುವಂಶಿಕ ದಿವಾನಿಕೆಯ ಹುಚ್ಚು ಹಿಡಿಸಿದ್ದಾರೆಂದು ನನ್ನ ನಂಬಿಕೆ. ಪೂರ್ಣಯ್ಯನವರು

ಗಳಿಸಿದ್ದ ಅಧಿಕಾರ, ಕೀರ್ತಿ ಇವೆರಡನ್ನೂ ಪೂರ್ಣೋಪಯೋಗಕ್ಕೆ ತಂದುಕೊಂಡು ಸ್ವಾರ್ಥಸಾಧನೆ ಮಾಡಲು ಈ ಜನರು ನಿರ್ಧರಿಸಿದ್ದಾರೆ. ಇವರ ದುರ್ಬೋಧನೆಯಿಂದಲೇ ಪೂರ್ಣಯ್ಯನವರು ದಾರಿ ತಪ್ಪಿದ್ದಾರೆಂದು ನಾನು ದೃಢವಾಗಿ ನಂಬಿದ್ದೇನೆ. ಈ ಜನರ ಜೊತೆಗೆ ಇನ್ನೊಬ್ಬ ಸೇರಿಕೊಂಡಿದ್ದಾನೆ. ಇವನ ಹೆಸರು ತಿಪ್ಪಯ್ಯ. ಇವನು ಬಹುಕಾಲದಿಂದ ಪೂರ್ಣಯ್ಯನವರ ಅನುಯಾಯಿ. ಹಳೇ ಕಳ್ಳ. ಪೂರ್ಣಯ್ಯನವರ ಮೇಲೆ ಇವನ ಪ್ರಭಾವವೂ ತುಂಬ ಇದೆ. ಮೇಜರ್ ವಿಲ್ಕ್ಸ್‌ರವರು ರೆಸಿಡೆಂಟ್ ಆಗಿದ್ದ ಕಾಲದಲ್ಲಿ ಇವನು ಮೈಸೂರು ಕಿಲ್ಲೇದಾರನಾಗಿದ್ದ. ಕಾಮಗಾರಿಗಳ ಹೆಸರಿನಲ್ಲಿ ಬೇಕಾದಷ್ಟು ನುಂಗಿದ. ಇವನ ಮೇಲೆ ಅನೇಕ ದೂರುಗಳು ಬಂದು ಅವು ಸ್ಥಿರವಾದದ್ದರಿಂದ ಮೇಜರ್ ವಿಲ್ಕ್ಸ್‌ರವರು ಇವನನ್ನು ಕಿಲ್ಲೇದಾರಿಯಿಂದ ತೆಗೆದುಹಾಕುವಂತೆ ಪೂರ್ಣಯ್ಯನವರನ್ನು ಒತ್ತಾಯಪಡಿಸಿದರು. ಆದರೇನು ಬೀದಿಯ ಬಾಗಿಲಿನಿಂದ ಹೊರದೂಡಲ್ಪಟ್ಟ ಈ ಕಳ್ಳ, ಹಿತ್ತಿಲ ಬಾಗಿಲಿನಿಂದ ಒಳಕ್ಕೆ ಬಂದ! ಪೂರ್ಣಯ್ಯನವರು ಇವನನ್ನು ಮೈಸೂರು ಕಿಲ್ಲೇದಾರಿಯಿಂದ ತೆಗೆದು ಮೈಸೂರು ಶಾಲೆಯ ರಚನೆಯ ಮೇಲ್ವಿಚಾರಣೆಗೆ ಹಾಕಿದರು! ತೋಳನಿಗೆ ಬೇಕಾದದ್ದೂ ಅದೇ, ಕುರುಬ ಮಾಡಿದ್ದೂ ಅದೇ ಎಂದ ಹಾಗಾಯಿತು. ಪೂರ್ಣಯ್ಯನವರ ಮೇಲೆ ಇವನ ಪ್ರಭಾವ ಎಷ್ಟೆಂಬುದನ್ನು ಈ ಪ್ರಸಂಗದಿಂದ ಅರ್ಥಮಾಡಿಕೊಳ್ಳಬಹುದು.

"ನಾನು ಇಷ್ಟೆಲ್ಲಾ ಪೀಠಿಕೆ ಹೇಳುವುದಕ್ಕೆ ಕಾರಣವಿದೆ. ನೆನ್ನೆ ರಾತ್ರಿ ತುಂಬಾ ಹೊತ್ತಾದಮೇಲೆ ಅರಮನೆಯಿಂದ ಒಬ್ಬ ಹರಿಕಾರ ಬಂದು ಶ್ರೀಮನ್ಮಹಾರಾಜರವರಿಂದ ತಂದಿದ್ದ ಪತ್ರವನ್ನು ನನಗೆ ತಲುಪಿಸಿದ. ಅದರ ಸಾರಾಂಶ ಇಷ್ಟು: ಈ ದಿನ, ಸರ್ಕಾರದ ಸಂಬಳ ಬಟವಾಡೆ ದಿನ; ಮಹಾರಾಜರು ಮಾಮೂಲಿನಂತೆ ಪೂರ್ಣಯ್ಯನವರ ಕಿರಿಯ ಮಗನಿಗೆ ಸಲ್ಲಬೇಕಾದ ಸಂಬಳವನ್ನು ಈ ಬೆಳಗ್ಗೆ ಕಳುಹಿಸಿಕೊಟ್ಟರು. ಆದರೆ ದಿವಾನರು ಆ ಮೊಬಲಗನ್ನು ತೆಗೆದುಕೊಳ್ಳದೆ ಹಿಂದಿರುಗಿಸಿದರು. ಸಂಜೆ ಅರಮನೆಯಲ್ಲಿ ಒಳ ಓಲಗ ಸೇರಿದ್ದಾಗ, ಮಹಾರಾಜರು ಪೂರ್ಣಯ್ಯನವರನ್ನು 'ನಿಮ್ಮ ಹುಡುಗನ ಸಂಬಳ ಏತಕ್ಕೆ ಹಿಂದಕ್ಕೆ ಕಳುಹಿಸಿದಿರಿ' ಎಂದು ಕೇಳಿದರು. ಅದಕ್ಕೆ ಪೂರ್ಣಯ್ಯನವರು ಅಲ್ಲಿ ನೆರೆದಿದ್ದ ಅಧಿಕಾರಿಗಳೆಲ್ಲರ ಎದುರಿನಲ್ಲೇ '.ನಾನಾಗಲೀ ನನ್ನ ವಂಶದವರಾಗಲೀ ಯಾರೂ ನಿಮ್ಮ ಚಾಕರರಲ್ಲ. ಆದ್ದರಿಂದ ನಮ್ಮ ಹುಡುಗ ನೀವು ಕಳುಹಿಸಿದ ಸಂಬಳ ತೆಗೆದುಕೊಳ್ಳಲಿಲ್ಲ' ಎಂದು ಕೂಗಾಡಿದರು. ಅವರ ನಡತೆ, ಅವರ ಮಾತಿನ ಧೋರಣೆ ಎಲ್ಲ ತುಂಬ

ಅವಮಾನಕರವಾಗಿತ್ತು. ನಮ್ಮ ರಾಜಪೀಠದ ಘನತೆ ಗೌರವಗಳನ್ನು ರಕ್ಷಿಸುವುದರಲ್ಲಿ ನೀವು ಆಸಕ್ತರಾದುದರಿಂದ ಈ ವಿಚಾರವನ್ನು ನಿಮ್ಮ ಗಮನಕ್ಕೆ ತರದೆ ಯಾವ ಕಾರ್ಯಕ್ರಮವನ್ನೂ ಕೈಗೊಳ್ಳಬಾರದೆಂದು ನಿಮಗೆ ಈ ಪತ್ರ ಬರೆಸಿದೆ. ನೀವು ಸೂಚಿಸಿದಂತೆ ಆಗಲಿ.

"ಈ ಕಾಗದವನ್ನು ನೋಡಿ ನನ್ನ ಮನಸ್ಸಿಗೆ ತುಂಬ ಕಸಿವಿಸಿಯಾಯಿತು. ಈ ಪ್ರಸಂಗವನ್ನು ಕುರಿತು ನನ್ನ ಪ್ರತಿಕ್ರಿಯೆಯೇನೆಂಬುದನ್ನು ಮಹಾರಾಜರಿಗೆ ತಿಳಿಸುವ ಉದ್ದೇಶದಿಂದ ನಾನು ಈ ದಿನ ಬೆಳಗ್ಗೆ ಅವರನ್ನು ಭೇಟಿಮಾಡಿದೆ.

"ಆ ಭೇಟಿಯ ಕಾಲದಲ್ಲಿ ಮಹಾರಾಜರು, 'ನಮ್ಮ ದಿವಾನರ ಹೀನಾಯಕರವಾದ ಈ ವರ್ತನೆಯಿಂದ ನಮ್ಮ ಮನಸ್ಸಿಗೆ ಅಪರಿಮಿತವಾದ ನೋವುಂಟಾಗಿದೆ. ಆದರೂ ಅವರ ನಡತೆಯ ಲೋಪದೋಷಗಳನ್ನು ವಿವೇಚಿಸುವಾಗ ಅವರ ವಯೋಧರ್ಮವನ್ನು ಗಮನದಲ್ಲಿಟ್ಟುಕೊಂಡು ವರ್ತಿಸುತ್ತೇವೆ. ಅದೇನೇ ಆಗಲಿ, ತಮ್ಮ ನಡವಳಿಕೆ ಎಷ್ಟು ಹೀನಾಯಕರವಾಗಿತ್ತೆಂಬುದನ್ನು ಅವರಿಗೆ ಸ್ಪಷ್ಟಪಡಿಸಿ, ಇನ್ನುಮುಂದೆ ಅವರು ಅಂಥ ಪ್ರಮಾದಗಳಿಗೆ ಅವಕಾಶಕೊಡಕೂಡದೆಂದೂ ತಮ್ಮ ನಡವಳಿಕೆಯನ್ನು ಸರಿಪಡಿಸಿಕೊಳ್ಳುವುದು ಆವಶ್ಯಕವೆಂದು ಅವರಿಗೆ ತಿಳಿಸಿ' ಎಂದರು.

"ಪೂರ್ಣಯ್ಯನವರ ನಡವಳಿಕೆ ತೀರ ಅನುಚಿತವೂ ಹೀನಾಯಕರವೂ ಆದುದೆಂದು ನನ್ನ ಮನಸ್ಸಿಗೆ ಸ್ಪಷ್ಟವಾಯಿತು. ಈ ವಿಚಾರವನ್ನು ಕುರಿತು ಮಹಾರಾಜರೆದುರಿನಲ್ಲೇ ಅವರಿಗೆ ನಾಲ್ಕು ಎಚ್ಚರಿಕೆಯ ಮಾತು ಹೇಳುವುದು ಆವಶ್ಯಕವೆಂದು ಭಾವಿಸಿ, ಪೂರ್ಣಯ್ಯನವರನ್ನು ಒಡನೆಯೇ ಕರೆಸುವಂತೆ ಮಹಾರಾಜರಿಗೆ ಸೂಚಿಸಿದೆ.

"ಮಹಾರಾಜರ ಕರೆಯನ್ನೊಪ್ಪಿಕೊಂಡು ಪೂರ್ಣಯ್ಯನವರು ಅರಮನೆಗೆ ಬಂದರು. ಆದರೆ ಕೋಪದಿಂದ ಕುದಿಯುತ್ತಿದ್ದರು. ಸಜ್ಜೆಯ ಬಾಗಿಲಲ್ಲೇ 'ನಾನು ಯಾರ ಚಾಕರನೂ ಅಲ್ಲ. ನನ್ನನ್ನು ಕೇಳುವವರು ಯಾರು? ನಾನು ಯಾರಿಗೂ ಉತ್ತರ ಕೊಡಬೇಕಾಗಿಲ್ಲ' ಎಂದು ಕೂಗಾಡಿದರು. ಇದರಿಂದ ಅವರ ಮನಸ್ಸಿನ ಸ್ಥಿತಿಯನ್ನರಿತು ಅವರು ಸಜ್ಜೆಯೊಳಕ್ಕೆ ಬಂದೊಡನೆಯೇ ನಾನು 'ಪೂರ್ಣಯ್ಯನವರೇ ತಾವು ಸಾವಧಾನವಾಗಿ ನನ್ನ ಮಾತು ಕೇಳಬೇಕು' ಎಂದು ಹೇಳಿದೆ. ಅದಕ್ಕವರು 'ನೀವು ಏನು ಹೇಳಬೇಕಾದರೂ ಹೇಳಿ ಮಾಡುತ್ತೇನೆ. ಕೇಳಿ ನಡಸಿಕೊಡುತ್ತೇನೆ' ಎಂದರು. ಆಗ ನಾನು 'ನಿಮ್ಮ ಮಕ್ಕಳು

ತುಂಬಾ ತಪ್ಪುಮಾಡಿದ್ದಾರೆ. ಅವರ ತಪ್ಪಿತಕ್ಕೆ ನೀವು ಬೆಂಬಲ ಕೊಡಲಾರಿರೆಂದು ನಾನು ಭಾವಿಸಿದ್ದೇನೆ' ಎಂದೆ. ಅದಕ್ಕವರು ಬಲು ದೊಡ್ಡ ಧ್ವನಿಯಲ್ಲಿ 'ಆಯಿತಲ್ಲ, ನನ್ನ ಮಗ ಮಾಡಿದ ಮಹಾಪರಾಧವೇನು?' ಎಂದು ಕೂಗಿಕೊಂಡರು. ನಾನು ಹಿಂದಿನ ದಿನದ ಪ್ರಸಂಗವನ್ನವರಿಗೆ ವಿವರಿಸಿ, ಮಹಾರಾಜರ ಸನ್ನಿಧಿಯಲ್ಲಿರುವಾಗ ಅವರು ಕೋಪಕ್ಕೆಡೆಗೊಡಬಾರದೆಂದು ಸೂಚಿಸಿದೆ.

"ಈ ಮಾತು ಕೇಳಿದೊಡನೆ ಪೂರ್ಣಯ್ಯನವರ ಚಹರೆಯೇ ಬದಲಾಯಿಸಿತು. ಅವರು ಕ್ರುದ್ಧರಾಗಿ 'ಇದರಲ್ಲಿ ನನ್ನ ಮಗನದು ಏನೇನೂ ತಪ್ಪಿಲ್ಲ. ಆ ಸಂಬಳದ ಹಣ ಹಿಂದಕ್ಕೆ ಕಳುಹಿಸಿದವನು ನಾನು' ಎಂದರು. ಪರಿಸ್ಥಿತಿ ಇನ್ನೂ ಪ್ರಕೋಪಕ್ಕೆ ಹೋಗಲು ಬಿಡಬಾರದೆಂದು ನಾನು 'ನಿಮ್ಮ ಮಗನ ತಪ್ಪಿತವನ್ನು ಮುಚ್ಚಬೇಡಿ. ಆತನಿಗೆ ಹೇಳಿ ಕಳುಹಿಸಿ. ಅವನು ಮಹಾರಾಜರಿಗೆ ನಮಸ್ಕರಿಸಿ, ತಾನು ಮಾಡಿದ್ದು ತಪ್ಪಾಯಿತೆಂದು ಹೇಳಿಬಿಡಲಿ' ಎಂದೆ. ಈ ಮಾತು ಕೇಳಿ ಪೂರ್ಣಯ್ಯನವರು ತುಂಬ ರೇಗಿ 'ನಮಗೆ ನಾವೇ ಒಡೆಯರು. ನನಗೆ, ನನ್ನ ಮಕ್ಕಳಿಗೆ ಬೇರೆ ಒಡೆಯರು ಇನ್ನಾರೂ ಇಲ್ಲ. ನಮ್ಮ ವಂಶದವರು ಯಾರೂ ಇನ್ನು ಮುಂದೆ ಈ ರಾಜರ ಸೇವೆ ಮಾಡಕೂಡದು ಎಂದು ನಿರ್ಧರಿಸಿಬಿಟ್ಟಿದ್ದೇವೆ' ಎಂದರು! – ಅದೂ ಹೇಗೆ? ಹುಚ್ಚರಂತೆ ಕೂಗುತ್ತಾ! ಭಯವನ್ನುಂಟು ಮಾಡುವಂತೆ ಮೈ ಕೈ ಆಡಿಸುತ್ತ!

"ಪೂರ್ಣಯ್ಯನವರ ಈ ವರ್ತನೆ ನನ್ನ ಸಮತೆಯನ್ನೂ ಕೆಡಿಸಿತು. ಅವರು ಈ ಹುಚ್ಚಾಟವನ್ನು ಮುಂದುವರೆಸಿದರೆ, ಮಹಾರಾಜರಿಗೆ ಅವರ ದಿವಾನರಿಂದಾಗುತ್ತಿರುವ ಅವಮಾನವನ್ನು ನೋಡಿಕೊಂಡು ನಾನು ಸುಮ್ಮನಿರುವುದು ಸಾಧ್ಯವಿಲ್ಲವೆಂದೆನಿಸಿತು. ಪರಿಸ್ಥಿತಿ ಕೈಮೀರಿ ಹೋಗದಂತೆ ನೋಡಿಕೊಳ್ಳಬೇಕೆಂದು ಮಹಾರಾಜರನ್ನು ಕುರಿತು 'ನಾನಾಗಲೀ ತಮ್ಮ ದಿವಾನರಾಗಲೀ ಇಲ್ಲಿಂದ ಒಡನೆಯೇ ಹೊರಟು ಹೋಗಲು ಅನುಮತಿ ಕೊಡಿ. ಏಕೆಂದರೆ ನಾನು ಮಹಾರಾಜರ ಸಮ್ಮುಖದಲ್ಲಿರುವಾಗ ನನ್ನ ಪ್ರಾಣವನ್ನಾದರೂ ತೆತ್ತು ಸನ್ನಿಧಾನದ ಗೌರವವನ್ನು ರಕ್ಷಿಸುವುದು ನನ್ನ ಕರ್ತವ್ಯ' ಎಂದೆ.

"ಈ ಮಾತು ಕೇಳಿದೊಡನೆಯೇ ಪೂರ್ಣಯ್ಯನವರು ನನಗೊಬ್ಬನಿಗೇ ಥಟ್ಟನೆ ಸಲಾಮು ಮಾಡಿ ಮಹಾರಾಜರ ಸನ್ನಿಧಾನವನ್ನು ಕೂಡ ಗಮನಕ್ಕೆ ತಂದುಕೊಳ್ಳದೆ ಅಲ್ಲಿಂದ ದಡದಡನೆ ಹೊರಟುಹೋದರು.

"ಪೂರ್ಣಯ್ಯನವರು ಈ ರೀತಿ ರೂಕ್ಷವಾಗಿ ನಡೆದುಕೊಂಡರೂ ಮಹಾ

ರಾಜರು ಮಾತ್ರ ಅವರ ವಿಚಾರವಾಗಿ ಗೌರವದಿಂದಲೇ ನಡೆದುಕೊಂಡರು. ಅವರು ತಮಗೆ ನಮಸ್ಕರಿಸದೇ ಇದ್ದರೂ ತಾವೇ ತಮ್ಮ ಪೀಠದಿಂದ ಎದ್ದು ನಿಂತು ಅವರಿಗೆ ಪ್ರತಿವಂದನೆ ಮಾಡಿದರು.

"ದಿವಾನರು ಹೋದಮೇಲೆ ಅವರು ನಡೆದುಕೊಂಡ ರೀತಿ ನನಗೆ ತುಂಬ ಆಶ್ಚರ್ಯವನ್ನುಂಟುಮಾಡಿತೆಂದು ಮಹಾರಾಜರಿಗೆ ತಿಳಿಸಿ ಅವರ ಆ ವರ್ತನೆಗೆ ಕಾರಣವೇನಿರಬಹುದೆಂದು ಕೇಳಿದೆ. ಅದಕ್ಕವರು 'ಕಾರಣವೇನೆಂಬುದು ನಮಗೂ ತಿಳಿಯದು. ಆದರೆ ಅವರ ವರ್ತನೆ ನಮಗೆ ಆಶ್ಚರ್ಯವನ್ನುಂಟು ಮಾಡಲಿಲ್ಲ. ಏಕೆಂದರೆ ಪೂರ್ಣಯ್ಯನವರು ನಮ್ಮನ್ನು ಲಘುವಾಗಿ ಕಾಣುವುದೂ, ನಮ್ಮೊಡನೆ ಒರಟಾಗಿ ಮಾತನಾಡುವುದೂ ಬಹುದಿನಗಳಿಂದ ತಪ್ಪದೆ ನಡೆದಿದೆ. ಆದರೆ ಅದನ್ನು ತಮ್ಮಲ್ಲಿ ಹೇಳಲಿಲ್ಲ. ಏಕೆಂದರೆ ಅನುಭವಿಯಾದ ವೃದ್ಧರು ನಮ್ಮ ಹಿತಕ್ಕಾಗಿ ನಮ್ಮ ಮೇಲೆ ಇಟ್ಟಿರಬಹುದಾದ ಹತೋಟಿಯ ಬಗ್ಗೆ ನಾವು ವಿರೋಧ ಪ್ರದರ್ಶನ ಮಾಡುತ್ತಿದ್ದೇವೆಂಬ ತಪ್ಪು ಅಭಿಪ್ರಾಯ ನಿಮಗೆ ಬರಬಹುದೆಂದು ಶಂಕಿಸಿದೆವು. ವಾಸ್ತವವಾಗಿ ನಮಗೆ ಪೂರ್ಣಯ್ಯನವರ ವಿಚಾರದಲ್ಲಿ ತುಂಬ ಗೌರವವಿದೆ. ಅವರು ನಮಗೆ ತಂದೆಯ ಸಮಾನರು. ಆದರೆ ಅವರು ಮಾತ್ರ ನಮ್ಮಲ್ಲಿ ಯಾವ ವಿಧವಾದ ವಾತ್ಸಲ್ಯವನ್ನೂ ತೋರುತ್ತಿಲ್ಲ. ನಮ್ಮ ಸ್ಥಾನಕ್ಕೆ ಸಲ್ಲಬೇಕಾದ ಗೌರವವನ್ನು ಸಲ್ಲಿಸುತ್ತಿಲ್ಲ. ಅದರ ಬದಲು ಹತ್ತು ಜನರ ಮುಂದೆ, ನಾವು ಬುದ್ಧಿಯಿಲ್ಲದ ಹುಡುಗರು, ಮೂರ್ಖರು ಎಂದು ತೋರಿಸಲು ಪ್ರಯತ್ನಿಸುತ್ತಾರೆ. ಈಗತಾನೆ ನಡೆದ ಪ್ರಸಂಗವನ್ನು ನೀವೇ ಕಣ್ಣಾರ ಕಂಡಿರಲ್ಲ. ಅವರ ವರ್ತನೆ ಹೇಗಿತ್ತು ನಿಮಗೇ ತಿಳಿದಿದೆ.' ಎಂದರು.

"ನಾನು ಮಹಾರಾಜರನ್ನು ಸಮಾಧಾನಗೊಳಿಸಿ, ಅವರು ಪೂರ್ಣಯ್ಯನವರ ಬಗ್ಗೆ ತೋರಿದ ಸಹನೆ ಎಷ್ಟು ಘನವಾದುದೆಂಬುದನ್ನು ನಾನು ಅರಿತಿದ್ದೇನೆಂದೂ, ಪೂರ್ಣಯ್ಯನವರ ನಡತೆ ನನಗೆ ತುಂಬಾ ಅಸಮಾಧಾನವನ್ನುಂಟು ಮಾಡಿದೆಯೆಂದೂ ತಿಳಿಸಿದೆ.

"ಮಹಾರಾಜರವರು ಈ ವಿಚಾರವಾಗಿ ನನ್ನಲ್ಲಿ ಪ್ರಸ್ತಾಪ ಮಾಡಲಿಲ್ಲವಾದರೂ ಪೂರ್ಣಯ್ಯನವರ ವಿರಸಕ್ಕೆ ಕಾರಣವಾಗಿರಬಹುದಾದ ಕೆಲವು ಅಂಶಗಳನ್ನು ಇಲ್ಲಿ ಸೂಚಿಸಬಹುದಾಗಿದೆ: ಆದರೆ ಈ ಪ್ರಕರಣಗಳಿಗೆ ಪೂರ್ಣಯ್ಯನವರ ಬೆಂಬಲವಿದೆಯೆಂದಾಗಲೀ ಅವರ ಸೂಚನೆಯಂತೆ ಇವು ನಡೆದುವೆಂದಾಗಲೀ

ಹೇಳಲಾರೆ. ಆದರೆ, ಪೂರ್ಣಯ್ಯನವರ ಅಧಿಕಾರವನ್ನು, ಅವರ ಸಮೀಪವರ್ತಿಗಳು ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆಂಬುದರಲ್ಲಿ ಸಂದೇಹವಿಲ್ಲ.

"ಈಗ್ಗೆ ಕೆಲವು ಕಾಲದ ಹಿಂದೆ ಮಹಾರಾಜರು ನಂಜನಗೂಡಿಗೆ ಹೋಗಿದ್ದಾಗ ಪೂರ್ಣಯ್ಯನವರ ಸಂಸಾರಕ್ಕೆ ಸಂಬಂಧಿಸಿದ ಇಬ್ಬರು ಸಂಸ್ಥಾನದ ತೋಷೀಖಾನೆಯಿಂದ, ಸುಮಾರು ಒಂದು ಲಕ್ಷ ಹದಿನಾಲ್ಕು ಸಾವಿರ ವರಹಗಳಷ್ಟು ಬೆಲೆಬಾಳುವ ಜವಾಹಿರಿ ಮುಂತಾದ ಅಮೂಲ್ಯ ವಸ್ತುಗಳನ್ನು ತೆಗೆದು ಬೇರೆಯೆಡೆಗೆ ಸಾಗಿಸಿದರು. ಈ ಬಗ್ಗೆ ವಿಚಾರಣೆ ನಡೆದ ಮೇಲೆ, ಅವನ್ನು ಮತ್ತೆ ತೋಷೀಖಾನೆಗೆ ಹಿಂದಿರುಗಿಸಲು ಒಪ್ಪಿದ್ದಾರೆ! ಇದೇ ರೀತಿ ಸರ್ಕಾರಕ್ಕೆ ಸೇರಿದ ಅಮೂಲ್ಯ ವಸ್ತುಗಳನ್ನು ಪೂರ್ಣಯ್ಯನವರ ಮನೆಯಿಂದ ರಾತ್ರಿಯ ಹೊತ್ತಿನಲ್ಲಿ ಬೇರೆಯೆಡೆಗೆ ಸಾಗಿಸುವ ಪ್ರಯತ್ನ ಕೂಡ ಇನ್ನೊಂದಾವರ್ತಿ ನಡೆಯಿತು. ಸರ್ಕಾರಿ ತೋಷೀಖಾನೆಯಲ್ಲಿಯೇ ಪೂರ್ಣಯ್ಯನವರ ವಾಸಗೃಹವೂ ಇರುವುದು ಸರ್ಕಾರದ ನಿಧಿಗೆ ದೊಡ್ಡ ಅಪಾಯವಾಗಿರುವಂತೆ ತೋರುತ್ತದೆ.

"ಇದಲ್ಲದೆ ಪೂರ್ಣಯ್ಯನವರು ತಮ್ಮ ಆಡಳಿತ ಕಾಲದಲ್ಲಿ ಸರ್ಕಾರಿ ಖಜಾನೆಯಿಂದ ಸ್ವಂತವೆಚ್ಚಕ್ಕಾಗಿ ಹಣವನ್ನು ತೆಗೆದುಕೊಂಡಿದ್ದಾರೆಂದೂ ಆಪಾದನೆಯಿದೆ. ಈ ಸಂಬಂಧದಲ್ಲಿ ತನಿಖೆ ನಡೆಯಬಹುದೆಂದೂ ತಾವು ಸರ್ಕಾರಕ್ಕೆ ಹಣ ಕೊಡಬೇಕಾಗಿದ್ದಲ್ಲಿ ಅದನ್ನು ಕೊಡುವುದಾಗಿಯೂ ಪೂರ್ಣಯ್ಯನವರು ಒಪ್ಪಿದ್ದಾರೆ. ಮಹಾರಾಜರು, ಪೂರ್ಣಯ್ಯನವರು ಮತ್ತು ನಾನು ಈ ಮೂವರಿಗೂ ಒಪ್ಪಿಗೆಯಾಗಿರುವ ಮೂರು ಮಂದಿ ಸಂಸ್ಥಾನದ ಅಧಿಕಾರಿಗಳು ಈಗ ಲೆಕ್ಕಪತ್ರಗಳನ್ನು ಪರಿಶೋಧಿಸುತ್ತಿದ್ದಾರೆ. ಇದರ ಪರಿಣಾಮ ಏನಾಗುವುದೆಂಬುದನ್ನು ಕಾದು ನೋಡಬೇಕಾಗಿದೆ.

"ತಾವು ರಾಜ್ಯಾಡಳಿತವನ್ನು ವಹಿಸಿಕೊಂಡಾಗಿನಿಂದ ಮಹಾರಾಜರು ಆಡಳಿತದ ವಿಚಾರದಲ್ಲಿ ಆಸಕ್ತಿ, ದಕ್ಷತೆ, ದೂರದೃಷ್ಟಿಗಳನ್ನು ತೋರಿದ್ದಾರೆ. ಇದು ತುಂಬ ಸಂತೋಷದಾಯಕವಾದ ವಿಚಾರ.

"ಈ ಪತ್ರದಲ್ಲಿ ನಾನು ಸೂಚಿಸಿರುವ ಅಂಶಗಳನ್ನೆಲ್ಲಾ ಕಂಪನಿ ಸರ್ಕಾರದವರು ಗಮನಕ್ಕೆ ತಂದುಕೊಂಡು, ಪೂರ್ಣಯ್ಯನವರನ್ನು ದಿವಾನ್ ಪದವಿಯಿಂದ ನಿವೃತ್ತಿ ಮಾಡುವುದು ಉಚಿತವೆಂದು ನನ್ನ ಅಭಿಪ್ರಾಯ. ಇದರಿಂದ ಅವರು ಗಳಿಸಿದ ಕೀರ್ತಿಗೆ ಕಳಂಕ ತಟ್ಟದೆ, ಅದು ಉಳಿಯುತ್ತದೆ. ಸಂಸ್ಥಾನದ ಆಡಳಿತದಲ್ಲಿ ಉದ್ಭವಿಸಬಹುದಾದ ಸಮಸ್ಯೆಗಳಿಗೆ ಎಡೆಯಿಲ್ಲದಂತಾಗುತ್ತದೆ. ಮಹಾ

ರಾಜರು ಅನಾವಶ್ಯಕವಾದ ಕಿರುಕುಳಗಳನ್ನು ಅನುಭವಿಸಿದೆ ಸ್ವಸ್ಥಚಿತ್ತರಾಗಿ ರಾಜ್ಯದ ಆಡಳಿತವನ್ನು ನೋಡಿಕೊಳ್ಳಲು ಅವಕಾಶ ಏರ್ಪಡುತ್ತದೆ.

"ಈ ವಿಚಾರದಲ್ಲಿ ಕಂಪನಿ ಸರ್ಕಾರದವರು ಸೂಕ್ತ ಕಾರ್ಯಕ್ರಮವನ್ನು ನಿರ್ಧರಿಸಿ ಆ ಬಗ್ಗೆ ನನಗೆ ತಕ್ಕ ನಿರ್ದೇಶನ ಕೊಡಬೇಕೆಂದು ಪ್ರಾರ್ಥಿಸುತ್ತೇನೆ."

§

"ಬನ್ನಿ ದಾಸರೆ, ಇತ್ತೀಚೆಗೆ ತಮ್ಮ ದರ್ಶನವೇ ಅಪರೂಪವಾಯಿತಲ್ಲ!"

"ಮಹಾಸ್ವಾಮಿಯವರು ಕ್ಷಮಿಸಬೇಕು. ಇತ್ತೀಚೆಗೆ ನನ್ನ ದೇಹಾರೋಗ್ಯ ಚೆನ್ನಾಗಿಲ್ಲ."

"ನೋಡಿದರೇ ಗೊತ್ತಾಗುತ್ತದೆ – ತುಂಬ ಬಡವಾಗಿದ್ದೀರಿ ದಾಸರೆ."

"ಇನ್ನೇನು ಹೇಳಿ. ನಾನೇನು ಬೆಳೆಯುವ ಪೈರೆ? ಆಗಲೋ ಈಗಲೋ ನೆಲಕ್ಕುರುಳ ಬೇಕಾದ ಹಳೆಯ ಮರ."

"ಹಾಗೆನ್ನಬೇಡಿ ದಾಸರೆ."

"ಆಯಿತು. ನಾವು ಆಡಿದರೇನು ಆಡದಿದ್ದರೇನು? ಅವನು ಮನಸ್ಸು ಮಾಡಿದ ಹಾಗೆ ನಡೆಯುತ್ತದೆ. – ಈಗ ನಾನು ಬಂದ ಉದ್ದೇಶ: ಒಂದೆರಡು ವಿಚಾರಗಳನ್ನು ಕುರಿತು ಸನ್ನಿಧಾನದಲ್ಲಿ ಮಾತನಾಡುವುದಿತ್ತು."

"ಹೇಳಿ ದಾಸರೆ. ಅದಕ್ಕೇನು."

"ಮೊದಲು ಸ್ವಂತ ವಿಚಾರವನ್ನೇ ಹೇಳುತ್ತೇನೆ. ಮಹಾಸ್ವಾಮಿಯವರ ಪಟ್ಟಾಭಿಷೇಕವಾದೊಡನೆಯೇ ನಾನು ಸ್ವಗ್ರಾಮಕ್ಕೆ—"

"ಚಿಕ್ಕನಾಯಕನ ಹಳ್ಳಿ ಅಲ್ಲವೆ?"

"ಹೌದು. ಪ್ರಭುಗಳ ಪಟ್ಟಾಭಿಷೇಕವಾದೊಡನೆಯೇ ಅಲ್ಲಿಗೆ ಹಿಂದಿರುಗ ಬೇಕೆಂದು ಅಪೇಕ್ಷೆಪಟ್ಟೆ. ಆದರೆ ಮಹಾಮಾತೃಶ್ರೀಯವರ ಒತ್ತಾಯದಿಂದ ನನ್ನ ಸಂಸಾರವನ್ನು ಇಲ್ಲಿಗೇ ಕರೆಸಿಕೊಂಡು ಇಲ್ಲೇ ಇರಬೇಕಾಯಿತು. ಇನ್ನಾದರೂ ನಾವು ಹಿಂದಕ್ಕೆ ಹೋಗಲು ಅನುಮತಿ ಕೊಡಬೇಕು."

"ಚೆನ್ನಾಗಿ ಹೇಳಿದಿರಿ ದಾಸರೆ. ಅರಮನೆಯ ಆಶ್ರಯವನ್ನು ಬಯಸಿ ಹೊಸ ಹೊಸ ಸಂಸಾರಗಳು ಮೈಸೂರಿಗೆ ಬಂದು ನೆಲೆಸುತ್ತಿದ್ದರೆ, ನೀವು, ಮೈಸೂರಿನಲ್ಲಿದ್ದವರು ಇಲ್ಲಿಂದ ಹೋಗಬೇಕೆನ್ನುತ್ತೀರಲ್ಲ! ಹೇಗೆ – 'ಆಗಲಿ' ಎನ್ನುವುದು."

"ಈ ವಿಚಾರದಲ್ಲಿ ಅವರವರ ಸೌಕರ್ಯ ಅನುಸರಿಸಿ ನಡೆದುಕೊಳ್ಳ ಬೇಕಾಗುತ್ತದೆ ಪ್ರಭು. ಇನ್ನು ಮುಂದೆ ನಾವು ಇಲ್ಲಿರುವುದಕ್ಕಿಂತ ಅಲ್ಲಿರುವುದೇ ಲೇಸೇನೋ ಎನಿಸಿತು."

"ಅಷ್ಟುತಾನೆ. ನಿಮ್ಮ ಸಂಸಾರ ಇಲ್ಲಿರುವುದೇ ಲೇಸೆಂಬಂತೆ ಮಾಡಿದ ರಾಯಿತುತಾನೆ. ಈ ವಿಚಾರದಲ್ಲಿ ನಾವೇನು ಸ್ವತಂತ್ರಿಸಿ ನಡೆಯುತ್ತಿಲ್ಲ ದಾಸರೆ. ಮಹಾಮಾತೃಶ್ರೀಯವರ ಆದೇಶದಂತೆ ನಡೆಯುತ್ತ ಇದ್ದೇವೆ."

"ಹಾಗೆಂದರೆ ?"

"ತಮ್ಮ ಸಂಸಾರ ಇಲ್ಲಿಂದ ಕದಲದೆ ಮೈಸೂರಿನಲ್ಲೇ ಸ್ಥಿರವಾಗಿರ ಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಅದಕ್ಕೆ ತಕ್ಕ ವ್ಯವಸ್ಥೆ ಮಾಡಬೇಕೆಂದು ಅವರು ನಮಗೆ ಆಜ್ಞೆ ಮಾಡಿದ್ದರು. ಅದರಂತೆ ವ್ಯವಸ್ಥೆ ಮಾಡುತ್ತೇವೆ. ನಿಮ್ಮ ಮಕ್ಕಳು, ವೆಂಕಟರಮಣಯ್ಯನವರು ನಮ್ಮ ಅರಮನೆಯಲ್ಲಿ ನಾಮತೀರ್ಥದ ತೊಟ್ಟಿಯ ಮೇಲ್ವಿಚಾರಕರಾಗಿರಲಿ. ಕೋಟೆಯ, ಬೆಟ್ಟದ ದೇವಸ್ಥಾನಗಳ ವ್ಯವಸ್ಥೆ ನೋಡಿಕೊಳ್ಳಲಿ. ಅದು ಅವರ ಸ್ವಭಾವಕ್ಕೆ ತಕ್ಕ ಕೆಲಸ ಎಂದು ಮಹಾ ಮಾತೃಶ್ರೀಯವರು ನಿರ್ಧರಿಸಿದ್ದರು. ಅವರ ಈ ಆಜ್ಞೆಯನ್ನು ತಕ್ಕಕಾಲದಲ್ಲಿ ನಿಮಗೆ ತಿಳಿಯಪಡಿಸುವುದೊಂದೇ ನಮಗೆ ಉಳಿದಿದ್ದ ಕೆಲಸ. ತಿಳಿಸಿ ಆಯಿತು. ಅದನ್ನು ಒಪ್ಪಿಕೊಳ್ಳತಕ್ಕದ್ದು ನಿಮ್ಮ ಕರ್ತವ್ಯ."

"ಮಹಾಸ್ವಾಮಿಯವರ ಅಪೇಕ್ಷೆ ತಿಳಿಯಿತಲ್ಲ. ವೆಂಕಟರಮಣನ ಸಂಗಡ ಮಾತನಾಡಿ ಮತ್ತೆ ಪ್ರಭುಗಳಲ್ಲಿ ಬಿನ್ನವಿಸಿಕೊಳ್ಳುತ್ತೇನೆ."

"ಮತ್ತೆ ಬಿನ್ನವಿಸಿಕೊಳ್ಳುವುದೇನು ? ನಾಳೆಯಿಂದಲೇ ಅವರು ಮೇಲ್ವಿಚಾರಣೆಯ ಭಾರ ವಹಿಸುವಂತೆ ಹೇಳಿ ದಾಸರೆ. ಇದಾಯಿತಲ್ಲ. ಇನ್ನೊಂದು ವಿಚಾರ: ನಿಮ್ಮ ಅಪೇಕ್ಷೆಯಂತೆ, ನಿಮ್ಮ ಗ್ರಾಮದಲ್ಲಿ ಒಂದು ದೇವಾಲಯ ನಿರ್ಮಾಣ ಆಗಬೇಕೆಂದೂ—"

"ಮಹಾಮಾತೃಶ್ರೀಯವರು ಹೇಳಿದ್ದರೇನು ?–ಮಹಾತಾಯಿ ! ಎಂದೋ ಯಾವುದೋ ಸಂದರ್ಭದಲ್ಲಿ ಮಾಡಿದ ಪ್ರಾರ್ಥನೆಯನ್ನು ನೆನಪಿನಲ್ಲಿಟ್ಟುಕೊಂಡು ಅದನ್ನು ಸನ್ನಿಧಾನಕ್ಕೆ ತಿಳಿಸಿದ್ದಾರಲ್ಲ ! ಆ ವಿಚಾರ ಮುಂದೆ ಮಾತನಾಡಬಹುದು. ಈಗ ಮಹಾಸ್ವಾಮಿಯವರು ನನ್ನ ಇನ್ನೊಂದು ಬಿನ್ನಹವನ್ನು ಲಾಲಿಸಬೇಕು."

"ಆಗಲಿ, ಹೇಳಿ ದಾಸರೆ."

" ದಿವಾನ ಪೂರ್ಣಯ್ಯನವರ ವಿಚಾರ; – ಸರ್ಕಾರಿ ಹಣಕಾಸಿನ ಬಾಬತು—"

" ಹೌದು. ಆ ವಿಚಾರದಲ್ಲಿ—"

" ನಾನು ಒಂದೆರಡು ಮಾತು ಬಿನ್ನವಿಸಿಕೊಳ್ಳುವುದಿದೆ."

" ವಿಚಿತ್ರವಾಗಿದೆಯಲ್ಲ! ಎಲ್ಲ ರಾಜಕೀಯವನ್ನೂ ಬಿಟ್ಟು ದೂರಹೋಗಿದ್ದ ನೀವು ಮತ್ತೆ ರಾಜಕೀಯಕ್ಕೆ ಹಿಂದಿರುಗಿದಹಾಗಿದೆಯಲ್ಲ."

" ಅಂಥದೇನಿಲ್ಲ ಪ್ರಭು. ನನ್ನ ಮಾತಿನಲ್ಲಿ ರಾಜಕೀಯವೇನಿಲ್ಲ. ವೈಯಕ್ತಿಕ ಪ್ರಾರ್ಥನೆ ಅಷ್ಟೇಯೆ. ಕೊನೆಯ ಲೆಕ್ಕದಲ್ಲಿ, ಪ್ರಮೋದೂತ ಕಾರ್ತಿಕ ಬಹುಳ ಅಮಾವಾಸ್ಯೆಯವರೆವಿಗೆ – ಒಟ್ಟು ಆರುಲಕ್ಷ ಮೂವತ್ತೆರಡು ಸಾವಿರ ಕಂಠೀರಾಯ ವರಹ ಪೂರ್ಣಯ್ಯನವರ ಮೇಲೆ ಬಾಕಿ ಹೊತ್ತಿತಂತೆ."

" ಹಾಗೆಂಬುದು ನಿಮಗೆ ಗೊತ್ತಾದ ಬಗೆ ?"

" ಅದನ್ನು ಹೇಳಲೇಬೇಕೆಂದು ಮಹಾಸ್ವಾಮಿಯವರ ಆಜ್ಞೆಯಾದರೆ ಬಿನ್ನವಿಸಿಕೊಳ್ಳುತ್ತೇನೆ."

" ಹೇಳಿ ಕೇಳೋಣ. ಈ ವಿಚಾರ ಇನ್ನೂ ಗುಪ್ತವಾಗಿರುವಾಗಲೇ ನಿಮ್ಮ ಕಿವಿಗೆ ಹೇಗೆ ಬಿತ್ತು ಎಂಬುದು ನಮಗೆ ತಿಳಿಯಬೇಡವೆ ?"

" ತಿಳಿಸುತ್ತೇನೆ ಪ್ರಭು. ಪೂರ್ಣಯ್ಯನವರಿಂದಲೇ ತಿಳಿಯಿತು."

" ಹಾಗೇನು ? – ಅವರೇ ತಿಳಿಸಿದರೋ."

" ಹಾಗಲ್ಲ. ನಾನೇ ಕೇಳಿ ತಿಳಿದುಕೊಂಡೆ."

" ಈ ವಿಚಾರದಲ್ಲಿ ನಿಮ್ಮ ಈ ವಿಶೇಷ ಆಸಕ್ತಿಗೆ ಕಾರಣ ?"

" ಇದೆ ಮಹಾಪ್ರಭು. ಅದನ್ನು ಬಿನ್ನವಿಸಿಕೊಳ್ಳುತ್ತೇನೆ. ಮಹಾಸ್ವಾಮಿಯವರು ಈ ವಿಚಾರದಲ್ಲಿ ತುಂಬ ಉದಾರವಾಗಿ ನಡೆದುಕೊಳ್ಳಬೇಕೆಂದು ಬೇಡಿಕೊಳ್ಳುತ್ತೇನೆ."

" ನೀವೇಕೆ ಈ ರಾಜಕೀಯದ ಕೆಸರಿನಲ್ಲಿ ಸಿಕ್ಕಿ ಬೀಳುತ್ತಿದ್ದೀರಿ ದಾಸರೆ ?"

" ಅನಿವಾರ್ಯವಾದದ್ದರಿಂದ ಎನ್ನಬಹುದು ; ಕರ್ತವ್ಯದೃಷ್ಟಿಯಿಂದ ಎನ್ನಬಹುದು ;—"

" ಆಯಿತು ಹೇಳಿ – ಅದೇನು ಕೇಳೋಣ."

" ಈ ಮೊಬಲಗಿನಲ್ಲಿ ಅವರು ದಾನಧರ್ಮವಾಗಿ ಕೊಟ್ಟಿದ್ದು ; ತಮ್ಮ ಸೇವಕರಿಗೆ ಇನಾಮಾಗಿ ಕೊಟ್ಟಿದ್ದು ; ಅವರ ಮನೆ ಖರ್ಚು; ಅವರ ಸಂಬಂಧಿಗಳ

ಗಾಗಿ ಮನೆಗಳನ್ನು ಕಟ್ಟಿಸಿಕೊಟ್ಟ ಖರ್ಚು ಈ ನಾಲ್ಕು ಬಾಬುಗಳು ಸೇರಿವೆ ಯೆಂದು ಕೇಳಿದೆ."

"ಸೇರಿದೆ ಎಂದಿಟ್ಟುಕೊಳ್ಳೋಣ—"

"ಈ ಎಲ್ಲ ಮೊಬಲಗನ್ನೂ ಪೂರ್ಣಯ್ಯನವರಿಂದ ವಸೂಲು ಮಾಡುವುದು ನ್ಯಾಯವಲ್ಲವೇನೋ ಎನಿಸುತ್ತದೆ. ನನಗೆ."

"ಏಕೆ ನ್ಯಾಯವಲ್ಲ ? ಸಂಸ್ಥಾನದ ಹಣವನ್ನು ಸಂಸ್ಥಾನಕ್ಕೆ ಸಂಬಂಧಿಸದ ಕಾರ್ಯಗಳಲ್ಲಿ ವಿನಿಯೋಗಿಸಿದರೆ, ಆ ಹಣವನ್ನು ಹಾಗೆ ವೆಚ್ಚ ಮಾಡಿದವರಿಂದ ವಸೂಲು ಮಾಡಿಕೊಳ್ಳುವುದು ಹೇಗೆ ತಪ್ಪಾದೀತು ದಾಸರೆ."

"ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದ್ದು ನ್ಯಾಯವೇ ಆಗಿದೆ. ಆದರೆ, ಅವರು ಮಾಡಿರುವ ಈ ವೆಚ್ಚಗಳೆಲ್ಲವೂ ಸಂಸ್ಥಾನಕ್ಕೆ ಸಂಬಂಧಿಸಿದುವಲ್ಲ ಎಂಬ ವಿಚಾರ ಮೊದಲು ನಿರ್ಧಾರವಾಗಬೇಕಲ್ಲ."

"ಅಂದರೆ ?"

"ದಾನ ಧರ್ಮದ ಮಾತೇ ಆಗಲಿ. ಮಹಾಸ್ವಾಮಿಯವರು ನನ್ನ ಮಾತು ನಂಬುವುದಾದರೆ ಪೂರ್ಣಯ್ಯನವರು ತಾವೇ ಸ್ವತಂತ್ರಿಸಿ ಈ ವೆಚ್ಚ ಮಾಡಿಲ್ಲ. ಪ್ರಭುಗಳ ಪಟ್ಟಾಭಿಷೇಕವಾದ ಮಾರನೆಯ ದಿನ ಇರಬೇಕು – ಆತ ಮಹಾ ಮಾತೃಶ್ರೀಯವರ ದರ್ಶನ ತೆಗೆದುಕೊಂಡು ಆಡಳಿತದ ವಿಚಾರದಲ್ಲಿ ಅವರ ನಿರ್ದೇಶನ ಕೇಳಿದ. ಆಗ ನಾನೂ ಸನ್ನಿಧಾನದ ಸಮ್ಮುಖದಲ್ಲಿದ್ದೆ.—"

"ಆಗೇನು ನಡೆಯಿತು ?"

"ಆಗ ಮಹಾಮಾತೃಶ್ರೀಯವರು ಹೇಳಿದರು – ಹಿಂದಿನ ಆಡಳಿತದಲ್ಲಿ ಎಷ್ಟೋ ವ್ಯಕ್ತಿಗಳಿಗೆ, ಧರ್ಮ ಸಂಸ್ಥೆಗಳಿಗೆ ಅನ್ಯಾಯವಾಗಿದೆ. ಅದನ್ನು ಸರಿಪಡಿಸ ಬೇಕು ಎಂದರು. ಯದುವಂಶದ ಪೂರ್ವಿಕರ ಪದ್ಧತಿಯಂತೆ ಆಡಳಿತ ನಡೆಯ ಬೇಕು ಎಂದರು. ಆ ಸೂಚನೆಯನ್ನನುಸರಿಸಿ, ಪೂರ್ಣಯ್ಯನವರು ಈ ದಾನ ಧರ್ಮಗಳನ್ನು ಮಾಡಿದ್ದಾರೆಂದು ನನ್ನ ನಂಬಿಕೆ. ಇಂಥ ಕಾರ್ಯಗಳು ಹಿಂದಿನಿಂದ ಅರಮನೆ ನಡೆಸಿಕೊಂಡು ಬಂದ ಕಾರ್ಯಗಳು. ಪೂರ್ಣಯ್ಯನವರು ಅರಮನೆಯ ಪ್ರತಿನಿಧಿಯಾಗಿ ಈ ಕಾರ್ಯಗಳನ್ನು ನೆರವೇರಿಸಿದ್ದಾರೆ. ಈ ವೆಚ್ಚ ಅವರು ವಹಿಸಿಕೊಳ್ಳಬೇಕೆಂದರೆ ತಪ್ಪಾದೀತೇನೋ ಎಂದು ನನ್ನ ಶಂಕೆ."

"ಒಳ್ಳೆಯದು. ಇತರ ವೆಚ್ಚಗಳ ಮಾತು ?"

"ಉಳಿದಿದ್ದರಲ್ಲಿ – ಸೇವಕರಿಗೆ ಕೊಟ್ಟ ಇನಾಮು – ಈ ವಿಚಾರ ಮತ್ತೆ

ವಿಮರ್ಶೆಮಾಡಿನೋಡಬೇಕಾದ್ದು. ಅವರ ಸೇವಕರು ಎಂದು ಇದ್ದವರು ಸಂಸ್ಥಾನದ ಸೇವಕರೂ ಆಗಿದ್ದರಲ್ಲ. ಅವರ ಸೇವೆಗಾಗಿ ಇನಾಮು ಕೊಟ್ಟಾಗ, ಅವರ ಯಾವ ಸೇವೆಗಾಗಿ ಈ ಇನಾಮು ಕೊಡಲಾಯಿತು ಎಂಬ ಪ್ರಶ್ನೆಗೆ ದೊರೆಯುವ ಉತ್ತರದ ಮೇಲೆ ಈ ವಿಚಾರ ನಿರ್ಣಯಿಸಬೇಕಾದೀತು. ಇಂಥ ವಿಚಾರಣೆಯಿಂದ ಪೂರ್ತಿ ಹೊಣೆಗಾರಿಕೆ ಪೂರ್ಣಯ್ಯನವರ ಮೇಲೆ ಹೊರಬಹುದು, ಹೊರದೆಹೋಗ ಬಹುದು."

"ಮಿಕ್ಕವೆಚ್ಚ."

"ಅವರ ಬಂಧುಗಳಿಗೆ ಮನೆ ಕಟ್ಟಿಸಿದ ವೆಚ್ಚ ಸಂಸ್ಥಾನದ ವೆಚ್ಚವೆಂದರೆ, ಆ ಮನೆಗಳನ್ನು ಸರ್ಕಾರ ವಹಿಸಿಕೊಳ್ಳಬಹುದು. ಇಲ್ಲದಿದ್ದರೆ ಪೂರ್ಣಯ್ಯನವ ರಿಂದಾಗಲಿ, ಮನೆಯಲ್ಲಿರುವವರಿಂದಾಗಲೀ ಆ ವೆಚ್ಚ ವಸೂಲು ಮಾಡಬಹುದು."

"ಇನ್ನೊಂದು ?"

"ಇದರಲ್ಲಿ ಬಹುಭಾಗದ ಹಣ ಅನ್ನದಾನಕ್ಕಾಗಿ ವಿನಿಯೋಗವಾಗಿದೆ. ಆ ಪುಣ್ಯ ಅವರಿಗೇ ಇರಲಿ ಎಂಬುದು ಪ್ರಭುಗಳ ಅಪೇಕ್ಷೆಯಾದರೆ ಆ ಮೊಬಲಗನ್ನು ಪೂರ್ಣಯ್ಯನವರಿಂದಲೇ ವಸೂಲು ಮಾಡಬಹುದು."

"ಇಷ್ಟುತಾನೆ ನಿಮ್ಮವಾದ."

"ನಾನು ಯಾರ ಪಕ್ಷವನ್ನೂ ವಹಿಸಿ ವಾದ ಮಾಡುತ್ತಿಲ್ಲ ಪ್ರಭು. ಈ ವಿಚಾರಣೆಗೆ ರೆಸಿಡೆಂಟ್ ಸಾಹೇಬರೂ ಸಂಬಂಧಿಸಿದ್ದಾರೆಂದು ಕೇಳಿದೆ. ನಮ್ಮ ಧರ್ಮದೃಷ್ಟಿ, ವಿಚಾರದೃಷ್ಟಿ ಬೇರೆ. ಅವರದು ಬೇರೆ. ನಮಗೆ ಪೂರ್ವಾಚಾರವಾದದ್ದು ನ್ಯಾಯಸಮ್ಮತವಾದದ್ದು ಅವರಿಗೆ ವಿಚಿತ್ರವಾಗಿ, ಅನ್ಯಾಯವಾಗಿ ಕಾಣಬಹುದು. ಅವರು ಆ ರೀತಿ ಹೇಳಬಹುದು. ತಮ್ಮ ಹೇಳಿಕೆಯನ್ನು ವಾದದಿಂದ ಸಮರ್ಥಿಸ ಬಹುದು. ಆದರೆ ಈ ವಿಚಾರದಲ್ಲಿ ಪ್ರಭುಗಳು ಕೊನೆಯ ತೀರ್ಮಾನ, ಕೈಗೊಳ್ಳುವಾಗ, ಈ ಬಗ್ಗೆ ನಮ್ಮ ದೃಷ್ಟಿ ಏನು ಎಂಬುದೂ ಪ್ರಭುಗಳಿಗೆ ತಿಳಿದಿದ್ದರೆ ಎಲ್ಲರಿಗೂ ನ್ಯಾಯ ದೊರೆಕೀತೆಂದು ಭಾವಿಸಿ, ಮಹಾಸ್ವಾಮಿಯವರಲ್ಲಿ ಈ ಅಂಶ ಗಳನ್ನೆಲ್ಲಾ ನಿವೇದಿಸಿಕೊಂಡಿದ್ದೇನೆ."

"ಒಳ್ಳೆಯ ಕೆಲಸ ಮಾಡಿದಿರಿ ದಾಸರೆ."

"ಸನ್ನಿಧಾನಕ್ಕೆ ನನ್ನಿಂದ ಶ್ರಮವಾಯಿತೇನೋ. – ಅಪ್ಪಣೆಯಾದರೆ, ನಾನಿನ್ನು—"

"ಅಂಥದೇನಿಲ್ಲ. ಹೋಗಿಬನ್ನಿ. – ನಾಳೆಯಿಂದ ವೆಂಕಟರಮಣಯ್ಯನವರು ಅರಮನೆಗೆ ಬರಲಿ. ನೀವು ಹೇಳಿದ್ದ ದೇವಾಲಯದ ವಿಚಾರ—"

"ಇನ್ನೊಂದಾವರ್ತಿ ಬಿನ್ನವಿಸಿಕೊಳ್ಳುತ್ತೇನೆ."

"ಆಗಲಿ."

§

ರೆಸಿಡೆಂಟ್ ಕೋಲ್ ಸಾಹೇಬರ ವರದಿ ಹೋಗಿ ಏಳೆಂಟು ತಿಂಗಳು ಕಳೆಯುವ ಹೊತ್ತಿಗೆ ಕಂಪನಿ ಸರ್ಕಾರದಿಂದ ಅದಕ್ಕೆ ಉತ್ತರ ಬಂತು – ದಿವಾನ್ ಪೂರ್ಣಯ್ಯನವರನ್ನು ಕೆಲಸದಿಂದ ನಿವೃತ್ತಿ ಮಾಡಬಹುದೆಂದು. ಈ ಪತ್ರ ಬಂದೊಡನೆಯೇ ಕೋಲ್ ಸಾಹೇಬರು ಮಹಾರಾಜರ ಸನ್ನಿಧಾನಕ್ಕೆ ಬಂದರು. ಕುಶಲ ಪ್ರಶ್ನೆಗಳಾದ ಮೇಲೆ ಪತ್ರದ ಸುದ್ದಿಯನ್ನವರಿಗೆ ತಿಳಿಸಿ ಹೇಳಿದರು :

"ಈ ಒಂದು ವಿಚಾರ ಇತ್ಯರ್ಥವಾಯಿತಲ್ಲ. ಪೂರ್ಣಯ್ಯನವರನ್ನು ಕರೆಸಿಕೊಂಡು ಅವರಿಗೆ ಈ ವಿಚಾರ ತಿಳಿಸುತ್ತೇನೆ. ಅದಕ್ಕೆ ಮೊದಲು ಅವರಿಗೆ ತಿಳಿಸಬೇಕಾದ ಇನ್ನೊಂದು ಅಂಶ ಇದೆ. ಆ ವಿಚಾರವಾಗಿ ತಮ್ಮ ಅಭಿಪ್ರಾಯ ತಿಳಿದರೆ, ನಾನು ಅವರೊಡನೆ ಈ ಮಾತು ಆಡಲು ತುಂಬ ಸಹಾಯವಾಗುತ್ತದೆ."

"ಯಾವ ವಿಚಾರ ಹೇಳಿ ರೆಸಿಡೆಂಟರೆ ?"

"ಅದೇ. ಪೂರ್ಣಯ್ಯನವರಿಂದ ಸಂಸ್ಥಾನಕ್ಕೆ ಬರಬೇಕಾದ ಬಾಕಿ ಹಣದ ವಿಚಾರ. ಅದಕ್ಕೇನು ಮಾಡುವುದು ?"

"ಈ ವಿಚಾರದಲ್ಲಿ ನಿಮ್ಮ ಸೂಚನೆ ಏನು ?"

"ನನ್ನ ಅಭಿಪ್ರಾಯದಲ್ಲಿ ಅವರು ಸಂಸ್ಥಾನದ ಬೊಕ್ಕಸಕ್ಕೆ ಈ ಹಣ ಕೊಡಲೇಬೇಕು. ಅವರೂ ಕೂಡ ಲೆಕ್ಕವನ್ನು ಸರಿ ಎಂದು ಒಪ್ಪಿಕೊಂಡಿದ್ದಾರಲ್ಲ."

"ಅವರೇನೊ ಒಪ್ಪಿಕೊಂಡಿದ್ದಾರೆ. ಸರಿ. ಆದರೆ—"

"ಅದನ್ನವರಿಂದ ವಸೂಲು ಮಾಡುವುದು ಸಾಧ್ಯವಿಲ್ಲ ಎಂದು ತಮ್ಮ ಅಭಿಪ್ರಾಯವೇನು ?"

"ಹಾಗಲ್ಲ."

"ಒಂದೇ ಗಂಟಿನಲ್ಲಿ ಅಷ್ಟೊಂದು ಮೊಬಲಗು ಕೊಡುವುದು ಅವರಿಗೆ ಸಾಧ್ಯವಿಲ್ಲದಿದ್ದಲ್ಲಿ – ಕಂತುಗಳಲ್ಲಿ ಕೊಡಲಿ. ಅವರಿಗೆ ಕೊಟ್ಟಿರುವ ಜಹಗೀರಿಯ ಆದಾಯದಿಂದ ಅವರು ಈ ಬಾಕಿ ತೀರಿಸಲಿ."

"ಸರಿಯೇ. ನಾವು ತೀರಿಸಬೇಕೆಂದರೆ ತೀರಿಸುತ್ತಾರೆ. ಆ ಮಾತು ಬೇರೆ. ನಮ್ಮ ವಿಚಾರ ಏನೆಂದರೆ—ಅವರಿಗೂ ಇಳಿವಯಸ್ಸಾಯಿತು. ಈಗ ಈ ಹೊರೆ ಅವರ ಮೇಲೆ ಹೇರುವುದು ಬೇಡ. ಅವರು ನಿರಾತಂಕವಾಗಿ ತಮ್ಮ ವಿಶ್ರಾಂತಿ ಸುಖವನ್ನು ಅನುಭವಿಸಲಿ."

"ಅಂದರೆ, ಇಷ್ಟು ದೊಡ್ಡ ಮೊಬಲಗನ್ನು ವಸೂಲು ಮಾಡದೆ ಬಿಟ್ಟುಬಿಡ ಬೇಕೆಂಬುದು ತಮ್ಮ ಅಭಿಪ್ರಾಯವೇನು ?–ಹಾಗೆ ಮಾಡಿದರೆ, ಅದು ಸಮರ್ಪಕ ವಾದ ವ್ಯವಸ್ಥೆಯೆಂದು ನನಗೆ ತೋರುವುದಿಲ್ಲ. ಸಂಸ್ಥಾನದ ಹಣವನ್ನು ಯಾರು ಬೇಕಾದರೂ ತಿಂದು ಸುಲಭವಾಗಿ ಜೀರ್ಣಿಸಿಕೊಳ್ಳಬಹುದೆಂಬ ಅಪಾಯಕರವಾದ ಭಾವನೆ ಅಧಿಕಾರಿಗಳಲ್ಲಿ ಹಬ್ಬಿದರೆ ಅದು ಸಂಸ್ಥಾನದ ಹಿತದೃಷ್ಟಿಯಿಂದ ಒಳ್ಳೆಯದಲ್ಲ ಎಂದು ನನ್ನ ಅಭಿಪ್ರಾಯ."

"ನಾವೂ ಅದೇ ಅಭಿಪ್ರಾಯವುಳ್ಳವರೇ. ಆದರೆ ಪೂರ್ಣಯ್ಯನವರ ಮೇಲೆ ಬಾಕಿ ಬಿದ್ದಿರುವ ಖರ್ಚಿನ ಬಾಬುಗಳ ವಿವರಗಳನ್ನು ನಾವು ಎಚ್ಚರಿಕೆಯಿಂದ ವಿಮರ್ಶಿಸಿದ್ದೇವೆ. ನಮಗೆ ತಿಳಿದು ಬಂದ ಅಂಶಗಳ ಆಧಾರದ ಮೇಲೆ ಆ ವೆಚ್ಚಗಳ ಹೊರೆಯನ್ನು ಅವರ ಮೇಲೆ ಹೊರಿಸುವುದು ಸರಿಯಲ್ಲವೆಂದು ನಮಗೆ ಮಂದಟ್ಟಾಗಿದೆ."

"ಹಾಗಿದ್ದರೆ, ಏನು ಮಾಡಬೇಕು; ತಾವು ತಿಳಿಸಿದರೆ ಅದನ್ನೂ ಆಲೋಚಿಸಬಹುದು."

"ಅಷ್ಟನ್ನೂ ಬಿಟ್ಟುಬಿಡೋಣ. ಈ ಲೆಕ್ಕದಲ್ಲಿ ಅವರು ಏನನ್ನೂ ಕೊಡ ಬೇಕಾಗಿಲ್ಲವೆಂದು ಅವರಿಗೆ ಹೇಳೋಣ. ಈ ನಿರ್ಣಯದಿಂದ ನಾವು ಅವರೊಡನೆ ನ್ಯಾಯದಿಂದ ವರ್ತಿಸಿದಂತಾಗುತ್ತದೆಂದು ನಮ್ಮ ಭಾವನೆ."

"ಮಹಾರಾಜರ ಅಭಿಪ್ರಾಯ ಹಾಗಿದ್ದರೆ ಹಾಗೆಯೇ ಆಗಲಿ. ಪೂರ್ಣಯ್ಯ ನವರು ಸಂಸ್ಥಾನಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸಿದ್ದಾರೆ. ಅವರಿಗೆ ಯಾವ ಅನುಕೂಲ ದೊರೆತರೂ ಅದರಿಂದ ನನಗೆ ಸಂತೋಷವೇ. ತಾವು ಕೊಟ್ಟ ನಿರ್ಣಯ ದಲ್ಲಿ ನ್ಯಾಯ, ದಯೆ ಇವೆರಡರ ಅಪೂರ್ವ ಸಮರಸವಿದೆ. ಈ ನಿರ್ಣಯ ಮಹಾರಾಜರ ನ್ಯಾಯಪರತೆ, ಘನ ಔದಾರ್ಯಗಳ ದ್ಯೋತಕವೆಂದು ನಾನು ಭಾವಿಸುತ್ತೇನೆ."

"ಆ ಮಾತೇಕೆ ಬಿಡಿ. ಪೂರ್ಣಯ್ಯನವರು ಬದುಕಿರುವಷ್ಟು ಕಾಲವೂ ಅವರು ಸುಖವಾಗಿರಬೇಕೆಂದು ನಮ್ಮ ಅಪೇಕ್ಷೆ. ಅವರ ವಿಚಾರವಾಗಿ ನಮಗೆ

ಅಪೂರ್ವ ಗೌರವವಿದೆ. ಆದ್ದರಿಂದ ಅವರು ಕೆಲಸದಿಂದ ನಿವೃತ್ತರಾದ ಮೇಲೂ ಅವರಿಗೆ ಈಗ ಸಲ್ಲುತ್ತಿರುವ ಐದುನೂರು ಕಂಠೀರಾಯ ವರಹಗಳ ಮಾಶಾಸನ ಸಲ್ಲುತ್ತಲೇ ಇರಬೇಕೆಂಬುದೂ ನಮ್ಮ ಅಪೇಕ್ಷೆ."

ಮಹಾರಾಜರ ಈ ಮಾತುಗಳನ್ನು ಕೇಳಿ ಕೋಲ್ ಸಾಹೇಬರಿಗೆ ಏಕಕಾಲದಲ್ಲಿ ಸಂತೋಷಾಶ್ಚರ್ಯಗಳುಂಟಾದುವು. ಅವರು ಒಂದರೆಕ್ಷಣ ಸುಮ್ಮನಿದ್ದು ಅನಂತರ ಹೇಳಿದರು :

"ಪ್ರಭುಗಳ ಔದಾರ್ಯ ನನ್ನ ನಿರೀಕ್ಷೆಗಿಂತ ಹೆಚ್ಚಾಯಿತು. ಇದಕ್ಕಿಂತ ಹೆಚ್ಚಿನ ಔದಾರ್ಯವನ್ನು ಪೂರ್ಣಯ್ಯನವರು ಕೂಡ ತಮ್ಮಿಂದ ನಿರೀಕ್ಷಿಸಲಾರರು. ಅವರು ತಮ್ಮ ವಿಚಾರವಾಗಿ ರೂಕ್ಷವಾದ, ಅನುಚಿತವಾದ, ಅವಿನಯ ವರ್ತನೆಯನ್ನು ತೋರಿದ್ದರೂ ತಾವು ಅದೆಲ್ಲವನ್ನೂ ಮರೆತು ಉದಾರವಾಗಿ ವರ್ತಿಸಿದುದು ತಮ್ಮ ವೈಯಕ್ತಿಕ ಹಾಗೂ ಸ್ಥಾನದ ಘನತೆಯನ್ನು ಉಜ್ವಲಗೊಳಿಸಿದೆ. ಪೂರ್ಣಯ್ಯನವರು ಈ ಔದಾರ್ಯಕ್ಕಾಗಿ ತಮಗೆ ಅಪಾರ ಋಣಿಗಳು."

"ನಮಗೆ ಆ ಹೊಗಳಿಕೆ ಬೇಕಿಲ್ಲ ರೆಸಿಡೆಂಟರೆ. ವಯೋಧರ್ಮದ ಮತ್ತು ಸುತ್ತಮುತ್ತಲಿನ ಪರಿಸ್ಥಿತಿ, ಪ್ರಭಾವಗಳ ಪರಿಣಾಮವಾಗಿ ಪೂರ್ಣಯ್ಯನವರು ಆ ರೀತಿ ವರ್ತಿಸಿದರೆಂಬುದನ್ನು ನಾವು ಬಲ್ಲೆವು. ಆದ್ದರಿಂದಲೇ ಅವರ ಆ ವರ್ತನೆಯನ್ನು ಆಗಿಂದಾಗಲೇ ಮರೆತುಬಿಡುತ್ತಿದ್ದೆವು. ಅವರು ಪೂಜ್ಯರು. ಅವರ ಸೌಖ್ಯ ಸಾಧನೆಗಾಗಿ ನಾವು ಏನು ಬೇಕಾದರೂ ಮಾಡಲು ಸಿದ್ಧರಿದ್ದೇವೆ."

"ಈ ಮಾತು ಕೇಳಿ ನನಗೆ ತುಂಬ ಸಂತೋಷವಾಯಿತು. ನಾನು ಪೂರ್ಣಯ್ಯನವರನ್ನು ಕಂಡು ಮಾತನಾಡುತ್ತೇನೆ. ಪ್ರಭುಗಳ ಕ್ಷಮಾಬುದ್ಧಿಯನ್ನೂ ಔದಾರ್ಯವನ್ನೂ ಕಂಡು ಪೂರ್ಣಯ್ಯನವರು ತಮ್ಮ ತಪ್ಪಿತಗಳಿಗಾಗಿ ಪಶ್ಚಾತ್ತಾಪ ಪಡುವುದಲ್ಲದೆ, ತಮಗೆ ಕೃತಜ್ಞತೆಯನ್ನರ್ಪಿಸುವರೆಂದು ನಂಬಿದ್ದೇನೆ. ಪೂರ್ಣಯ್ಯನವರೊಡನೆ ಮಾತನಾಡಿದ ಮೇಲೆ ಮತ್ತೆ ತಮ್ಮ ದರ್ಶನ ತೆಗೆದುಕೊಳ್ಳುತ್ತೇನೆ."

"ಆಗಬಹುದು."

"ಪೂರ್ಣಯ್ಯನವರು ಅಧಿಕಾರದಿಂದ ನಿವೃತ್ತರಾದಮೇಲೆ, ಆಡಳಿತ ವ್ಯವಸ್ಥೆ ಹೇಗಿರಬೇಕೆಂಬುದನ್ನೂ ಪ್ರಭುಗಳು ಚಿತ್ತಕ್ಕೆ ತಂದುಕೊಳ್ಳಬೇಕು. ಆ ಸಂಬಂಧದಲ್ಲಿ ನನ್ನಿಂದಾಗಬಹುದಾದ ಸೇವೆಯನ್ನು ಸಲ್ಲಿಸಲು ನಾನು ಸಿದ್ಧನಿದ್ದೇನೆ."

"ಸಂತೋಷ. ಆ ವಿಚಾರವನ್ನು ಕುರಿತು ನಾವು ಆಲೋಚನೆ ಮಾಡುತ್ತೇವೆ. ನೀವು ನಮ್ಮನ್ನು ಇನ್ನೊಮ್ಮೆ ಭೇಟಿಯಾದಾಗ ಹೊಸ ವ್ಯವಸ್ಥೆಯ ವಿವರಗಳನ್ನು ಕುರಿತು ಮಾತನಾಡೋಣ."

§

ಆಡಳಿತದ ವಿಚಾರದಲ್ಲಿ ಹೈದರನ ಕೈಯಲ್ಲಿ ಪಳಗಿದ ಆಸಾಮಿ ಪೂರ್ಣಯ್ಯನವರು. ಯಾವ ಅಧಿಕಾರಿಯೇ ಆಗಿರಲಿ, ಕೊನೆಗೆ ತನ್ನ ಮಗನೇ ಆಗಿರಲಿ ಅವನು ರಾಜ್ಯದ ಹಿತಕ್ಕೆ ವಿರುದ್ಧವಾಗಿ ವರ್ತಿಸಿದನೆಂದು, ಸ್ವಾರ್ಥ ದೃಷ್ಟಿಯಿಂದ ಜನರಿಗೆ ಹಿಂಸೆ ಕೊಟ್ಟನೆಂದು ಅನುಮಾನ ಬಂದರೆ ಸಾಕು, ಅವನನ್ನು ಹಿಡಿದು ತರಿಸಿ, ಬಟ್ಟೆ ಸುಲಿಸಿ, ಬಹಿರಂಗವಾಗಿ ಚರ್ಮದ ಚಾವಟಿಯಿಂದ ಹೊಡೆಸುತ್ತಿದ್ದುದು ಹೈದರನ ಶಿಕ್ಷಾಪದ್ಧತಿಯಾಗಿತ್ತು. ಏನಿಲ್ಲದಿದ್ದರೂ ಈ ಪದ್ಧತಿಯಿಂದ ಆಡಳಿತದ ಪ್ರಮುಖ ವ್ಯಕ್ತಿಯ ವಿಚಾರವಾಗಿ ಅಧಿಕಾರಿಗಳಿಗೆ ಅಪಾರ ಭಯವಿರುತ್ತಿತ್ತು; ಇಂಥ ತೀವ್ರವಾದ ಕಾರ್ಯಕ್ರಮದ ಭಯ, ಆಡಳಿತದ ಹಿತದೃಷ್ಟಿಯಿಂದ ಅತ್ಯಾವಶ್ಯಕವೆಂದು ಪೂರ್ಣಯ್ಯನವರೂ ಭಾವಿಸಿದ್ದರು. ಆದರೆ ಅವರು ನೀತಿಗೆಟ್ಟ ಅಧಿಕಾರಿಗಳನ್ನು ಹೈದರನಂತೆ ಅರಮನೆಯ ಹೊರಅಂಗಳದಲ್ಲಿ ಚರ್ಮದ ಚಾವಟಿಯಿಂದ ಹೊಡೆಸುತ್ತಿರಲಿಲ್ಲ. ನಿಜ. ಆದರೆ, ಯಾವ ಅಧಿಕಾರಿಯ ವರ್ತನೆಯ ವಿಚಾರವಾಗಿಯಾಗಲೀ ಅನುಮಾನವುಂಟಾದರೆ ಸಾಕು, ಆ ವಿಚಾರವನ್ನು ಅವರು ಕೂಲಂಕಷವಾಗಿ ವಿಮರ್ಶಿಸಿ, ಅಧಿಕಾರಿ ತಪ್ಪಿತಸ್ಥನೆಂದು ತಿಳಿದು ಬಂದಲ್ಲಿ ಅವನನ್ನು ಒಡನೆಯೇ ಕೆಲಸದಿಂದ ತೆಗೆದುಹಾಕಿಬಿಡುತ್ತಾರೆ; ಅಷ್ಟು ಮಾತ್ರವಲ್ಲ ಅವನು ರಾಜ್ಯದ ಸೇವೆಗೆ ಅನರ್ಹನೆಂದು ಘೋಷಿಸಿಬಿಡುತ್ತಾರೆ; ಅಲ್ಲಿಂದಾಚೆಗೆ ಅವನು ಎಂಥ ಪ್ರಭಾವಶಾಲಿಗಳಿಂದ ಒತ್ತಾಯ ತರಲಿ ಅವನನ್ನು ಮತ್ತೆ ಸರ್ಕಾರಿ ಕೆಲಸಕ್ಕೆ ಸೇರಿಸುವುದೇ ಇಲ್ಲ—ಎಂಬ ಭಾವನೆ ಪ್ರಚಲಿತವಾಗಿದ್ದಿತಾಗಿ ಅವರ ಆಡಳಿತದಲ್ಲಿ ಒಂದು ಬಿಗಿಯಿತ್ತು. ಅವರ ವಿಚಾರವಾಗಿ ಅಧಿಕಾರಿಗಳಿಗೆ ಭಯವಿತ್ತು.

ಪೂರ್ಣಯ್ಯನವರು, ಕೆಲಸದಿಂದ ನಿವೃತ್ತರಾದಮೇಲೆ ಈ ಭಯ ತಾನಾಗಿ ತಪ್ಪಿಹೋಯಿತು. ಜೊತೆಗೆ ತರುಣ ಮಹಾರಾಜರು ತುಂಬ ದಯಾಪರರೆಂದು ಸುದ್ದಿ ಬೇರೆ ಹಬ್ಬಿತು! ಇನ್ನು ಕೇಳಬೇಕಾದ್ದೇನು?

ಟಪ್ಪೂ ಸುಲ್ತಾನ ಸತ್ತಮೇಲೆ ಅವನ ಆಡಳಿತಕ್ಕೊಳಪಟ್ಟಿದ್ದ ರಾಜ್ಯ

ಕಟ್ಟು ಹರಿದ ಪಂಜಿನ ಹಾಗಾದಂತೆ, ಪೂರ್ಣಯ್ಯನವರು ಅಧಿಕಾರದಿಂದ ನಿವೃತ್ತ ರಾದೊಡನೆ ಮೈಸೂರು ಸಂಸ್ಥಾನದ ಆಡಳಿತ ತುಟಿ ಮೀರಿದ ಹಲ್ಲಾಯಿತು. ಅಧಿಕಾರಿಗಳೂ ಪ್ರಭಾವಶಾಲಿಗಳೂ ಸ್ವಾರ್ಥಸಾಧನೆಗೆ ಇದೇ ಸಮಯವೆಂದು ಭಾವಿಸಿ ತಮ್ಮ ಕೈಚಳಕವನ್ನು ತೋರಿಸಲಾರಂಭಿಸಿದರು.

ಶ್ರೀಮನ್ಮಹಾರಾಜ ಕೃಷ್ಣರಾಜ ಒಡೆಯರೇನೋ ಮೊದಲಿಗಿಂತ ಹೆಚ್ಚು ಶ್ರದ್ಧೆಯಿಂದ ಆಡಳಿತದ ಮೇಲ್ವಿಚಾರಣೆ ಮಾಡುತ್ತಿದ್ದರು. ಆಡಳಿತವನ್ನು ಉತ್ತಮ ಗೊಳಿಸಲು ಅತ್ಯುತ್ತಮವಾದ ಸಲಹೆಗಳನ್ನುಳ್ಳ ಆಜ್ಞೆಗಳನ್ನು ಮೇಲಿಂದ ಮೇಲೆ ಹೊರಡಿಸುತ್ತಿದ್ದರು.

ಆದರೆ, ಅವನ್ನು ಅನುಸರಿಸುವ ಅಧಿಕಾರಿಗಳು ಬೇಕಲ್ಲ!

ಇತ್ತ ಅರಮನೆಗೆ ಸಂಬಂಧಿಸಿದ್ದವರಲ್ಲಿ ಹಲವಾರು ಮಂದಿ ಸ್ವಾರ್ಥ ಸಾಧನೆಯ ದೃಷ್ಟಿಯಿಂದ ಈ ನೀತಿಗೆಟ್ಟ ಅಧಿಕಾರಿಗಳ ರಕ್ಷಣೆಗಾಗಿ ನಿಂತರು. ರಾಜ್ಯದ ಸ್ಥಿತಿಗತಿಗಳೇನೆಂಬುದು ಮಹಾರಾಜರಿಗೆ ತಿಳಿಯದಿರುವಂತೆ, ಅವರ ಸುತ್ತ ಅಭೇದ್ಯ ಕೋಟೆಯಾದರು. ಅವರ ವಿದ್ಯಾಭಿಮಾನ, ಕಲಾಭಿಮಾನ, ರಸಿಕತೆ, ಔದಾರ್ಯಗಳನ್ನು ತಮ್ಮ ಸ್ವಾರ್ಥಸಾಧನೆಗಾಗಿ ಉಪಯೋಗಿಸಿಕೊಂಡರು.

ಆಡಳಿತದಲ್ಲಿ ಸ್ವಜನ ಪಕ್ಷಪಾತ, ಲಂಚಕೋರತನ ಬೆಳೆಯಿತು. ಅದನ್ನು ಮುಚ್ಚಿಕೊಳ್ಳುವುದಕ್ಕಾಗಿ ಮಹಾರಾಜರ ಮುಂದೆ ಅತ್ಯಂತ ದೈನ್ಯದಿಂದ ನಡೆದು ಕೊಳ್ಳುವುದು, ಅವರಿಗೆ ಪ್ರಿಯವಾದ ಕೆಲಸವನ್ನು ಅತ್ಯಂತ ಅಚ್ಚುಕಟ್ಟಾಗಿ ಶ್ರದ್ಧೆ ಯಿಂದ ಮಾಡುವಂತೆ ತೋರಿಸಿಕೊಳ್ಳುವುದು, ತಮಗೆ ಬೇಕಾದಂತೆ ನಡೆದು ಕೊಳ್ಳುವುದು – ಇದು ರಾಜ್ಯದ ಅಧಿಕಾರಿಗಳ ಮತ್ತು ಮಹಾರಾಜರ ಆಪ್ತವರ್ಗ ದಲ್ಲಿದ್ದ ಹಲವಾರು ಮಂದಿ ದುಷ್ಟರ ಕಾರ್ಯನೀತಿಯಾಯಿತು.

ಈ ದುಷ್ಟರ ಕೈವಾಡ ಅಷ್ಟಕ್ಕೇ ನಿಲ್ಲಲಿಲ್ಲ; ವಯಸ್ಸಿನಿಂದ ಹಿರಿಯನೂ, ಆಡಳಿತದಲ್ಲಿ ಹೆಚ್ಚು ಅನುಭವಿಯೂ ಮೇಲಾಗಿ ಮಹಾರಾಜರ ಹಿತಚಿಂತಕನೂ ಆದ ರೆಸಿಡೆಂಟ್ ಕೋಲ್ ಸಾಹೇಬನಿಗೆ ಅರಮನೆಯ ವ್ಯವಹಾರವೂ ಆಡಳಿತದ ದಕ್ಷತೆಯೂ ಹದಗೆಡುತ್ತಿದೆಯೆಂಬುದರ ಅರಿವಾದರೆ ತಮಗೆ ಉಳಿಬಾಳಿಲ್ಲವೆಂಬು ದನ್ನು ಅರಿತು ರೆಸಿಡೆಂಟರ ಕಛೇರಿಯಲ್ಲಿದ್ದ ತಮ್ಮಂಥ ಜನರನ್ನು ಕೂಡಿಕೊಂಡು ಕೋಲ್ ಸಾಹೇಬನ ಸುತ್ತ ಇನ್ನೊಂದು ಅಭೇದ್ಯ ಕೋಟೆಯನ್ನು ನಿರ್ಮಿಸಿದರು.

ಸಮಯ ಸಾಧಿಸಿ ಮಹಾರಾಜರು, ರೆಸಿಡೆಂಟರು ಇವರಿಬ್ಬರೊಡನೆಯೂ ಪರಸ್ಪರ ಚಾಡಿಮಾತುಗಳನ್ನು ಹೇಳಿ ಅವರವರ ಸ್ನೇಹವನ್ನೂ ಕೆಡಸಿದರು.

ಹೀಗಾಗಿ ಮೊದಮೊದಲು ಆಡಳಿತದ ವಿಚಾರವಾಗಿ ಯಾವ ದೂರು ಬಂದರೂ ಅದನ್ನು ವಿಚಾರಿಸಿ ಆ ಬಗ್ಗೆ ಏನು ಮಾಡಬೇಕೆಂಬ ಬಗೆಗೆ ಮಹಾ ರಾಜರಿಗೆ ಸಲಹೆ ಸೂಚನೆಗಳನ್ನು ಕೊಡುತ್ತಿದ್ದ ಕೋಲ್, ತಟಸ್ಥನಾದನು. ಇದರಿಂದ ಎರಡು ಕಡೆಯ ಸ್ವಾರ್ಥಸಾಧಕರಿಗೂ ಹಬ್ಬವಾಯಿತು.

ಮೈಸೂರು ಸಂಸ್ಥಾನದ ಆಡಳಿತ ಮೇಲುನೋಟಕ್ಕೆ ಲಕ್ಷಣವಾಗಿ ಕಂಡರೂ, ಕಟ್ಟೆ ಹಿಡಿದ ಬಿದುರಿನಂತೆ ಒಳಗೊಳಗೇ ಹುಳಿತು ದಿನದಿನಕ್ಕೆ ದುರ್ಬಲ ವಾಯಿತು. ಈ ಸಂದರ್ಭವನ್ನು ಸಾಧಿಸಿಕೊಂಡು ಒಬ್ಬೊಬ್ಬ ಪ್ರಮುಖ ಸ್ವಾರ್ಥಿಯೂ ತನಗೆ ಬೇಕುಬೇಕಾದವರನ್ನು ಅಧಿಕಾರ ಸ್ಥಾನಗಳಿಗೇರಿಸಿ ತಮ್ಮ ಸ್ಥಾನವನ್ನೂ ಆದಾಯವನ್ನೂ ಭದ್ರಮಾಡಿಕೊಂಡನು. ತಾವು ಏನು ಮಾಡಿದರೂ ತಮ್ಮನ್ನು ರಕ್ಷಿಸಿಕೊಳ್ಳುವವರು ಅರಮನೆಯಲ್ಲಿ ಪ್ರಭಾವಶಾಲಿಗಳಾಗಿದ್ದಾರೆಂಬು ದನ್ನು ಅರಿತ ಅಧಿಕಾರಿಗಳು ಯಾವ ವಿಧವಾದ ಭಯವೂ ಇಲ್ಲದೆ ತಮ್ಮ ಸುಲಿಗೆ ಯನ್ನು ನಡೆಸಿದರು.

ಇತ್ತ ಇಂಥ ಹೀನಕಾರ್ಯಗಳು ಮಹಾರಾಜರ ಗಮನಕ್ಕೆ ಬರದಂತೆ ತಡೆಯುವುದು ಅರಮನೆಯ ದುಷ್ಟರ ಕೆಲಸವಾದರೆ, ಗೇಣುದ್ದದ್ದನ್ನು ಮಾರುದ್ದಕ್ಕೆ ಎಳೆದು ಬಣ್ಣಿಸಿ ಮಹಾರಾಜರ ವಿರುದ್ಧವಾಗಿ ಕೋಲ್ ಸಾಹೇಬನ ಮನಸ್ಸನ್ನು ಉದ್ರೇಕಗೊಳಿಸುವುದು ಅವನೆಡೆಯಲ್ಲಿದ್ದ ದುಷ್ಟರ ಕಾರ್ಯನೀತಿಯಾಯಿತು.

ಹೀಗಾಗಿ ಮಹಾಜರ ಸ್ವಂತ ಆಡಳಿತ ಆರಂಭವಾದ ಕೆಲವು ವರ್ಷಗಳು ಕಳೆಯುವುದರೊಳಗಾಗಿ, ಮಹಾರಾಜರ ವಿಚಾರವಾಗಿ ಯಾವ ಮಾತು ಹೇಳಿದರೂ ಅದನ್ನು ನಂಬುವಂತಾಯಿತು ಕೋಲ್ ಸಾಹೇಬನ ಸ್ಥಿತಿ !

ಅಂಥ ಮಾತುಗಳ ಮೇಲೆ ಆಧಾರಪಟ್ಟು, ಅವನು ಮದರಾಸು ಗೌರ್ನರ್ ರವರಿಗೆ ಒಂದು ದೀರ್ಘವಾದ ಪತ್ರ ಬರೆದು, ಅದರಲ್ಲಿ ಮಹಾರಾಜರ ದುರಾಡಳಿತ ದಿಂದ ರಾಜ್ಯದ ಸ್ಥಿತಿಗತಿಗಳು ತುಂಬ ಕೆಟ್ಟಿವೆಯೆಂದೂ ಪೂರ್ಣಯ್ಯನವರು ಕೂಡಿಟ್ಟಿದ್ದ ಎಪ್ಪತ್ತು ಲಕ್ಷ ವರಹಗಳ ನಿಧಿಯೆಲ್ಲವೂ ವೆಚ್ಚವಾಗಿಹೋಗಿದೆಯೆಂದೂ ಆದ್ದರಿಂದ ಮೈಸೂರು ರಾಜವಂಶ ಮತ್ತು ಕಂಪೆನಿ ಸರ್ಕಾರದ ನಡುವೆ ಆಗಿದ್ದ ಕರಾರಿನ ವಿಧಿಯನ್ನು ಉಪಯೋಗಿಸಿಕೊಂಡು ಮೈಸೂರು ಸಂಸ್ಥಾನದ ಆಡಳಿತ ವನ್ನು ಕಂಪನಿ ಸರ್ಕಾರ ವಹಿಸಿಕೊಳ್ಳುವುದೇ ಯೋಗ್ಯವೆಂದೂ ಸೂಚಿಸಿದನು !

ಆಡಳಿತ ಮಹಾರಾಜರ ಕೈತಪ್ಪಿ ರೆಸಿಡೆಂಟರ ಕೈಗೆ ಬಂದರೆ ತಾವು ಇನ್ನಷ್ಟು ಸ್ವಾರ್ಥಸಾಧನೆ ಮಾಡಿಕೊಳ್ಳಬಹುದೆಂದು ಯೋಚಿಸಿದ್ದ ರೆಸಿಡೆಂಟರ ಕಛೇರಿಯ ದುಷ್ಟರ ತಂತ್ರಕ್ಕೆ ಕೋಲ್ ಬಲಿಯಾದನು.

§

ಟಿಪ್ಪೂ ಸುಲ್ತಾನನ ಮರಣಾನಂತರ ಅವನ ರಾಜ್ಯದ ಹಂಚಿಕೆಯ ವಿಚಾರವಾಗಿ ಚರ್ಚೆ ನಡೆದಾಗ ಅದನ್ನು ಎರಡು ಸಮಪಾಲು ಮಾಡಿ ಒಂದನ್ನು ಕಂಪನಿ ಸರ್ಕಾರದವರು ಇಟ್ಟುಕೊಳ್ಳಬೇಕೆಂದೂ ಇನ್ನೊಂದನ್ನು ನಿಜಾಮರಿಗೆ ಕೊಡಬೇಕೆಂದೂ, ಮೈಸೂರು ರಾಜಮನೆತನಕ್ಕೊಂದು ರಾಜ್ಯವನ್ನು ಕಲ್ಪಿಸಬಾರದೆಂದೂ ವಾದಿಸಿದವರಲ್ಲಿ ಸರ್ ಥಾಮಸ್ ಮನ್ರೋ ಒಬ್ಬ ಪ್ರಮುಖ ವ್ಯಕ್ತಿ. ಒಂದು ವೇಳೆ ಮೈಸೂರು ರಾಜಮನೆತನಕ್ಕೆ ಸುಲ್ತಾನನ ರಾಜ್ಯದ ಒಂದು ಭಾಗವನ್ನು ಬಿಟ್ಟುಕೊಟ್ಟರೂ, ಮುಂದೆ ಒಂದಲ್ಲ ಒಂದು ದಿನ ಕಂಪೆನಿ ಸರ್ಕಾರ ಆ ರಾಜ್ಯವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕಾದ ಸಂದರ್ಭ ಬಂದೇ ಬರುತ್ತದೆಂದೂ ಅವನು ಅಂದೇ ಅಭಿಪ್ರಾಯಪಟ್ಟಿದ್ದನು.

ಪ್ರಕೃತ ಈ ಸರ್ ಥಾಮಸ್ ಮನ್ರೋವೇ ಮದರಾಸಿನ ಗೌರ್ನರ್ ಆಗಿದ್ದು ಅವನೇ ಮೈಸೂರು ಸಂಸ್ಥಾನದ ಸ್ಥಿತಿಗತಿಗಳನ್ನು ಪರಿಶೀಲಿಸಲು ಇಲ್ಲಿಗೆ ಬರಲಿರುವನೆಂದು ಕೋಲ್ ಸಾಹೇಬನ ಕಛೇರಿಗೆ ಸುದ್ದಿ ಬಂದೊಡನೆಯೇ ಅವನಿಗೆ ಕೋಟೆ ಕಟ್ಟಿ ನಿಂತಿದ್ದ ಸ್ವಾರ್ಥಿಗಳ ತಂಡದ ಎದೆ ಉಬ್ಬಿತು. ತಮ್ಮ ತಂತ್ರ ಫಲಿಸಿತೆಂದು ಅವರು ಹಿಗ್ಗಿದರು.

ಮನ್ರೋ ಸಾಹೇಬ ವಿಚಾರಣೆ ನಡೆಸುವುದಕ್ಕೆ ಬಂದಾಗ, ಮೈಸೂರು ರಾಜ್ಯದ ಅವ್ಯವಸ್ಥೆಗೆಲ್ಲಾ ಅರಸರೂ ಅವರ ಪರಿವಾರದವರೂ ಕಾರಣರೆಂದೂ, ಅವರ ಕೈಯಿಂದ ಆಡಳಿತವನ್ನು ತಪ್ಪಿಸಿ, ರೆಸಿಡೆಂಟರ ಕೈಗೆ ಕೊಟ್ಟರೆ ಕಂಪನಿ ಸರ್ಕಾರದ ಹಿತಸಾಧನೆಯಾಗುವುದಲ್ಲದೆ, ಮೈಸೂರು ಸಂಸ್ಥಾನದ ಪ್ರಜೆಗಳಿಗೆ ಸುಖವಾಗುವುದೆಂದೂ ಅವನಿಗೆ ಮುಂದಟ್ಟು ಮಾಡಿಕೊಡಬೇಕೆಂದೂ ನಿರ್ಧರಿಸಿದರು. ಈ ನಿರ್ಧಾರವನ್ನು ಸಾಧಿಸಲು ಕೋಲ್ ಸಾಹೇಬನನ್ನು ಉಪಯೋಗಿಸುವುದು ಅವರಿಗೆ ಕಷ್ಟವಾಗಲಿಲ್ಲ.

ಮೈಸೂರಿಗೆ ಬಂದ ಮನ್ರೋವನ್ನು ಮಹಾರಾಜರು ಆದರದಿಂದ ಸ್ವಾಗತಿಸಿ

ದರು. ಮೊದಲು ಎರಡು ದಿನಗಳು ಅವರು ಒಬ್ಬರನ್ನೊಬ್ಬರು ಭೇಟಿಮಾಡಿ ಪರಸ್ಪರ ಕುಶಲವನ್ನು ವಿಚಾರಿಸಿಕೊಂಡರು.

ಮೂರನೆಯ ದಿನ ಮನ್ರೋ, ಕೋಲ್ ಅನ್ನೂ ತನ್ನ ಜೊತೆಯಲ್ಲಿ ಕರೆದು ಕೊಂಡು ಬಂದು ರಾಜ್ಯದ ಸ್ಥಿತಿಗಳ ವಿಚಾರವಾಗಿ ಮಹಾರಾಜರೊಡನೆ ಮಾತು ಆರಂಭಿಸಿದ. ಮಾತು ಸ್ವಲ್ಪ ಬಿರುಸಾಗಿಯೇಯಿತ್ತು.

"—ನಿಮ್ಮ ಹಿರಿಯರು ಮತ್ತು ಕಂಪನಿ ಸರ್ಕಾರದ ನಡುವೆ ಆಗಿರುವ ಕರಾರಿನಂತೆ, ನಿಮ್ಮ ರಾಜ್ಯಾಡಳಿತ ಸರಿಯಾಗಿಲ್ಲದೆ ಅದರ ಫಲವಾಗಿ ನೀವು ಕರಾರಿನ ಪ್ರಕಾರ ಕಂಪನಿಗೆ ಸಲ್ಲಿಸಬೇಕಾದ ಪೊಗದಿ ಮೊಬಲಗನ್ನು ಕಾಲಕಾಲಕ್ಕೆ ಸರಿಯಾಗಿ ಸಲ್ಲಿಸುವುದು ಸಾಧ್ಯವಿಲ್ಲವೆಂದು ತೋರಿಬಂದಲ್ಲಿ, ನಿಮ್ಮ ರಾಜ್ಯದ ಆಡಳಿತವನ್ನು ಕಂಪನಿ ಸರ್ಕಾರ ವಹಿಸಿಕೊಳ್ಳಬಹುದಾಗಿದೆ ಎಂಬ ಅಂಶವನ್ನು ನಿಮಗೆ ಸ್ನೇಹಪೂರ್ವಕವಾಗಿ ಮುಖತಃ ತಿಳಿಸಬೇಕೆಂದೇ ನಾನು ಇಲ್ಲಿಗೆ ಬರಬೇಕಾಯಿತು."

"ತಾವು ನಮ್ಮ ಮೇಲಿನ ಸ್ನೇಹದಿಂದ ಪ್ರೇರೇಪಿತರಾಗಿ ನಮ್ಮಲ್ಲಿ ಇಷ್ಟೊಂದು ಅಭಿಮಾನವಿಟ್ಟು, ಈ ವಿಚಾರವಾಗಿ ನಮಗೆ ನೆನಪು ಕೊಡಲು ಇಲ್ಲಿಯವರೆಗೆ ದಯಮಾಡಿಸಿದ್ದು ತುಂಬಾ ಸಂತೋಷ. ಕರಾರಿನ ಪ್ರಕಾರ ನಮ್ಮ ಜವಾಬುದಾರಿಯೇನೆಂಬುದನ್ನು ನಾವಾದರೂ ಮರೆತಿಲ್ಲ. ಮರೆಯುವುದೂ ಇಲ್ಲ."

"ತಾವು ಈ ಆಶ್ವಾಸನ ಕೊಟ್ಟಿದ್ದು ಒಳ್ಳೆಯದೇ ಆಯಿತು. ತಮ್ಮ ಸದಾಶಯದಲ್ಲಿ ನಮಗೆ ಅನುಮಾನ ಇಲ್ಲ. ಆದರೆ, ತಮ್ಮ ರಾಜ್ಯದ ಆರ್ಥಿಕಸ್ಥಿತಿ, ನೀವು ನಿಮ್ಮ ಸದಾಶಯವನ್ನು ಪೂರ್ಣಗೊಳಿಸುವುದಕ್ಕೆ ದೊಡ್ಡ ಅಡಚಣೆಯಾದೀತೇನೋ ಎಂಬ ಅನುಮಾನಕ್ಕೆ ಎಡೆಕೊಟ್ಟಿದೆ. ಆದ್ದರಿಂದಲೇ, ನಾವು ನಿಮ್ಮ ಭೇಟಿಮಾಡಿ ಈ ವಿಚಾರ ಚರ್ಚಿಸಬೇಕಾದ ಪ್ರಮೇಯವುಂಟಾದದ್ದು."

"ಗೌರ್ನರ್ ಸಾಹೇಬರ ಶಂಕೆ ನಿರಾಧಾರವಾದದ್ದು ಎಂದು ನಮಗೆ ತೋರುತ್ತದೆ."

"ನೀವು ಈ ಮಾತು ಒಪ್ಪುತ್ತೀರಾ ರೆಸಿಡೆಂಟರೆ ?"

"ಗೌರ್ನರ್‌ರವರ ಶಂಕೆಗೆ ಆಧಾರವಿದೆಯೆಂದು ನನ್ನ ಅಭಿಪ್ರಾಯ."

"ಕೇಳಿದಿರಾ ಮಹಾರಾಜರೆ."

"ರೆಸಿಡೆಂಟ್ ಸಾಹೇಬರಿಗೆ ಈ ಅಭಿಪ್ರಾಯ ಹೇಗೆ ಬಂತೋ ನಮಗೆ ತಿಳಿಯದು. ಅವರು ನಮ್ಮ ಪರಮ ಮಿತ್ರರು. ಅವರ ಮನಸ್ಸಿನಲ್ಲಿ ಅಂಥ

ಸಂಶಯವೇನಾದರೂ ಉಂಟಾಗಿದ್ದಲ್ಲಿ ನಮ್ಮೊಡನೆ ಮಾತನಾಡಿ ಅವರ ಸಂಶಯ ವನ್ನು ಪರಿಹರಿಸಿಕೊಳ್ಳಬಹುದಾಗಿತ್ತು."

"ರೆಸಿಡೆಂಟರು ತಮ್ಮನ್ನು ಕೇಳಲಿಲ್ಲ ತಾನೆ? – ಹೋಗಲಿಬಿಡಿ. ಈ ಶಂಕೆಗೆ ತಮ್ಮ ಸಮಾಧಾನವೇನು ಹೇಳಿದರಾಯಿತು. ನಾವೂ ಅದನ್ನು ಕೇಳಬಹುದು."

"ಸಮಾಧಾನವಿನ್ನೇನು ? ಕಂಪನಿ ಸರ್ಕಾರಕ್ಕೆ ಸಲ್ಲಬೇಕಾದ ಪೊಗದಿಯ ಕಂತು ಯಾವುದೂ ಬಾಕಿ ಬಿದ್ದಿಲ್ಲ. ಈವರೆಗೆ ಎಲ್ಲವೂ ಪಾವತಿ ಆಗಿದೆ. ಅಲ್ಲವೆ ನರಸಪ್ಪನವರೆ."

"ಸನ್ನಿಧಾನದವರು ಅಪ್ಪಣೆ ಕೊಡಿಸಿದ್ದು ಸರಿಯಾಗಿದೆ. ಬೇಕಾದರೆ, ಗೌರ್‍ನರ್ ಸಾಹೇಬರು ನಮ್ಮ ಲೆಕ್ಕವನ್ನು ಪರಿಶೀಲಿಸಿ ತಮ್ಮ ಶಂಕೆಯನ್ನು ಪರಿ ಹರಿಸಿಕೊಳ್ಳಬಹುದು."

"ಇಂಥ ಬುದ್ಧಿವಂತಿಕೆಯ ಮಾತಿನಿಂದ ಗೌರ್‍ನರ್‌ರವರಿಗೆ ತೃಪ್ತಿ ಆಗುವು ದಿಲ್ಲ. ಅವರು ನಿಮ್ಮ ಲೆಕ್ಕವನ್ನು ಪರಿಶೀಲಿಸಿ ಈ ಅಂಶವನ್ನು ತಿಳಿದುಕೊಳ್ಳ ಬೇಕಾಗಿಲ್ಲ. ಪೊಗದಿಯ ಮೊಬಲಗು ಸರಿಯಾಗಿ ಸಂದಾಯವಾಗಿದೆಯೆ ಇಲ್ಲವೆ ಎಂಬ ಅಂಶ ಕಂಪೆನಿಯ ಲೆಕ್ಕಗಳಿಂದಲೇ ಅವರಿಗೆ ವೇದ್ಯವಾಗಿರುತ್ತದೆ. ಆ ಮಾತು ಬಿಡಿ. ಗೌರ್‍ನರ್ ಸಾಹೇಬರ ಶಂಕೆಗೆ ಕಾರಣ ಇಷ್ಟೇಯೆ. ಈ ಸಂಸ್ಥಾನ ದಲ್ಲಿ ಅಪವ್ಯಯ ಮಿತಿ ಮೀರಿದೆ. ಭಂಡಾರ ಬರಿದಾಗಿದೆ. ಪೂರ್ಣಯ್ಯನವರು ತಮ್ಮ ಆಡಳಿತದ ಅವಧಿಯಲ್ಲಿ ಶೇಖರಿಸಿಟ್ಟಿದ್ದ ಎಪ್ಪತ್ತು ಲಕ್ಷ ವರಹದ ನಿಧಿಯನ್ನು ನೀವು ಪೋಲು ಮಾಡಿದ್ದೀರಿ. —"

"ಎಪ್ಪತ್ತು ಲಕ್ಷ ವರಹ! – ಪೂರ್ಣಯ್ಯನವರು ಕೂಡಿಟ್ಟಿದ್ದು! – ಇದೇನು ಹೀಗೆ ಹೇಳುತ್ತಿದ್ದೀರಿ ಕೋಲ್ ಸಾಹೇಬರೆ. ಪೂರ್ಣಯ್ಯನವರು ಬಿಟ್ಟಿದ್ದು ಏಳು ಲಕ್ಷ ವರಹದ ನಿಧಿ – ಎಪ್ಪತ್ತು ಲಕ್ಷವಲ್ಲ!"

"ನನಗೆ ಚೆನ್ನಾಗಿ ನೆನಪಿದೆ. ಅದು ಏಳಲ್ಲ ಎಪ್ಪತ್ತು. ಪೂರ್ಣಯ್ಯನವರು ಕೂಡಿಟ್ಟಿದ್ದ ಹಣದಲ್ಲಿ ಈಗೆಷ್ಟು ಉಳಿದಿದೆ ಹೇಳಿ ? – ಒಂದು ಕುರುಡು ಕಾಸೂ ಉಳಿದಿಲ್ಲ. ನಾನು ಅದನ್ನು ಬಲ್ಲೆ !"

"ನಿಜ. ಒಂದು ಕಾಸೂ ಉಳಿದಿಲ್ಲ. ಪೂರ್ಣಯ್ಯನವರು ಇಟ್ಟಿದ್ದ ನಿಧಿಯೆಲ್ಲ ವೆಚ್ಚವಾಗಿದೆ."

"ಮಹಾರಾಜರ ಈ ಮಾತನ್ನು ಗೌರ್‍ನರ್‌ಸಾಹೇಬರು ಲಕ್ಷ್ಯಕ್ಕೆ ತಂದು ಕೊಳ್ಳಬೇಕು. ನಾನು ಹೇಳಿದ್ದು ಸರಿತಾನೆ."

"ಎಲ್ಲ ಸರಿಯಲ್ಲ ರೆಸಿಡೆಂಟ್ ಸಾಹೇಬರೆ. ಆ ಎಪ್ಪತ್ತು ಲಕ್ಷದ ಮಾತು ನಿಜವಲ್ಲ. ಪೂರ್ಣಯ್ಯನವರಿಂದ ಸಂಸ್ಥಾನಕ್ಕೆ ಬರಬೇಕಾಗಿದ್ದ ಬಾಕಿ ಮೊಬಲಗು ಹದಿನಾಲ್ಕು ಲಕ್ಷ ವರಹ. ನಿಮಗೆ ಗೊತ್ತಿರುವಂತೆ ಅದರಲ್ಲಿ ಅರ್ಧದಷ್ಟು ಅವರು ಕೊಟ್ಟರು. ಇನ್ನು ಅರ್ಧದಷ್ಟು ನಾವು ಬಿಟ್ಟೆವು. ಇದು ನಡೆದದ್ದು ನಿಮ್ಮ ಎದುರಿನಲ್ಲಿ ತಾನೆ. ಮುಚ್ಚುಮರೆಯೇನಿಲ್ಲವಲ್ಲ."

"ಮಹಾರಾಜರೆ, ನನ್ನ ಮಾತು ಸ್ವಲ್ಪ ಕೇಳಿ; ಮಿಸ್ಟರ್ ಕೋಲ್ ನೀವೂ ಕೇಳಿ, ನನ್ನ ಪ್ರಶ್ನೆಗೆ ನೇರವಾದ ಉತ್ತರ ಕೊಡಿ; ಈ ಎಪ್ಪತ್ತು ಲಕ್ಷದ ನಿಧಿ, ಆ ಏಳು ಲಕ್ಷದ ನಿಧಿ ಬೇರೆ ಬೇರೆ ತಾನೆ ?"

"ಖಂಡಿತವಾಗಿ; ಅದು ಬೇರೆ. ಇದು ಬೇರೆ. ಇದು ಏಳು ಸರಿ."

"ಕೇಳಿದಿರಾ ಮಹಾರಾಜರೆ. ನೀವು ಏಳು ಲಕ್ಷದ ನಿಧಿಯ ವಿಚಾರ ಹೇಳಿದ್ದು ಸರಿಯೆಂದು ರೆಸಿಡೆಂಟರು ಒಪ್ಪಿಕೊಂಡಿದ್ದಾರೆ. ಅದಲ್ಲದೆ–ಎಪ್ಪತ್ತು ಲಕ್ಷದ ಇನ್ನೊಂದು ನಿಧಿ ಏನಾಯಿತು ಎಂಬುದು ರೆಸಿಡೆಂಟರ ಪ್ರಶ್ನೆ. ಅಲ್ಲವೆ ಮಿಸ್ಟರ್ ಕೋಲ್."

"ಹೌದು. ಗೌರ್ನರ್‌ರವರು ಹೇಳಿದ್ದು ಸರಿಯಾಗಿದೆ."

"ತಮ್ಮಿಬ್ಬರ ಮಾತೂ ಆಶ್ಚರ್ಯಕರವಾಗಿದೆ. ಪೂರ್ಣಯ್ಯನವರು ನಿವೃತ್ತ ರಾದಾಗ ಏಳು ಲಕ್ಷದ ನಿಧಿಯಲ್ಲದೆ ಬೇರೆ ಯಾವ ನಿಧಿಯೂ ಇರಲಿಲ್ಲ."

"ನಿಮ್ಮ ಹೇಳಿಕೆಯನ್ನು ಮಹಾರಾಜರು ನಿರಾಕರಿಸುತ್ತಿದ್ದಾರೆ ಮಿಸ್ಟರ್ ಕೋಲ್. ಆ ನಿಧಿ ಇತ್ತೆಂದು ತೋರಿಸುವುದಕ್ಕೆ ಆಧಾರ ?"

"ಆಧಾರವಿದೆ. ಪೂರ್ಣಯ್ಯನವರ ಮಕ್ಕಳು ಅನಂತರಾಯರು ಸ್ವಹಸ್ತ ದಿಂದ ಬರೆದಿಟ್ಟಿರುವ ಚೀಟಿಯಲ್ಲಿ ಈ ಅಂಶವಿದೆ ಎಂದು ನಮ್ಮ ದುಬಾಷಿ ರಾಮಸ್ವಾಮಿ ಮೊದಲಿಯರರು ಹೇಳಿದ್ದು ನನಗೆ ಚೆನ್ನಾಗಿ ನೆನಪಿದೆ."

"ಅಂಥದೊಂದು ಚೀಟಿಯಿದೆಯೆಂದೇ ಇಟ್ಟುಕೊಳ್ಳೋಣ, ವಾದಕ್ಕಾಗಿ. ಅದರಲ್ಲಿ ನಮೂದಾಗಿರುವ ಮೊಬಲಗು ನಮ್ಮ ಕೈಗೆ ಬಂತೆ ಎಂಬುದು ಮುಖ್ಯವಾದ ಅಂಶ. ಅದಕ್ಕೆ ಆಧಾರಗಳಿದ್ದರೆ ತಿಳಿಸಿ."

"ನಮ್ಮ ದುಬಾಷಿಗಳಲ್ಲಿ ಮಾತನಾಡಿ ಈ ಬಗ್ಗೆ ತಕ್ಕ ವಿವರಗಳನ್ನೊದ ಗಿಸಬಲ್ಲೆ."

"ಒದಗಿಸುವುದಾದರೆ ಒದಗಿಸಿ, ನೋಡೋಣ! ನಿಮ್ಮ ದುಬಾಷಿಯಾಗಿದ್ದ ರಾಮಸ್ವಾಮಿ ಮೊದಲಿಯಾರ್ ಈಗ ನಮ್ಮ ಅಂಚೆ ಕಛೇರಿ ಭಕ್ಷಿಯಾಗಿದ್ದಾರಲ್ಲ–

ಅವರನ್ನು ಈಗಲೇ ಇಲ್ಲಿಗೆ ಕರೆಸೋಣವೇನು ? – ಇಲ್ಲೇ ಗೌರ್ನರ್‌ರವರ ಸಮ್ಮುಖ ದಲ್ಲೇ ವಿಚಾರಣೆ ನಡೆದುಹೋಗಲಿ."

ಕೋಲ್‌ರವರ ಮುಖ ಥಟ್ಟನೆ ಪೆಚ್ಚಾದ್ದನ್ನು ಗೌರ್ನರ್ ಮನ್ರೋರವರು ಗಮನಿಸಿ ತಮ್ಮ ಮಾತಿನ ಧಾಟಿಯನ್ನು ಒಡನೆಯೆ ಬದಲಾಯಿಸಿದರು.

" ಆ ವಿಚಾರ ಇರಲಿ ಮಹಾರಾಜರೆ, ಆಮೇಲದನ್ನು ನೋಡಿಕೊಳ್ಳೋಣ. ನಾನು ಗಮನಿಸಿರುವಷ್ಟು ಮಟ್ಟಿಗೆ ಈ ರಾಜ್ಯದ ಆಡಳಿತ ಪೂರ್ಣವಾಗಿ ತಮ್ಮ ಕೈಗೆ ಬಂದ ಮೇಲೆ ಆದಾಯಕ್ಕಿಂತ ಖರ್ಚು ಹೆಚ್ಚಾಗಿದೆ."

" ಇತ್ತೀಚೆಗೆ ಹಾಗಾಗಿದೆ, ನಿಜ."

" ಆದ್ದರಿಂದ ಪೂರ್ವದ ನಿಧಿಯಿಂದ ಹಣ ಬಳಸಿಕೊಂಡು ಈ ಹೆಚ್ಚುವೆಚ್ಚ ನಿರ್ವಹಿಸಿದ್ದೀರಿ."

" ಹೌದು."

" ಇಷ್ಟು ಅಂಶ ನಮಗೆ ಸಾಕು. ಈ ಒಂದು ನಿಧಿಯ ಬೆಂಬಲವಿದ್ದಿದ್ದರಿಂದ ನಮಗೆ ಕೊಡಬೇಕಾದ ಪೊಗದಿಯನ್ನು ಕಾಲಕಾಲಕ್ಕೆ ಸರಿಯಾಗಿ ಕೊಡುವುದು ನಿಮಗೆ ಸಾಧ್ಯವಾಯಿತು. ಅದಿಲ್ಲದಿದ್ದರೆ ?"

" ಸಾಧ್ಯವಾಗುತ್ತಿರಲಿಲ್ಲ."

" ಈ ಅಂಶ ಸ್ವಯಂಸ್ಪಷ್ಟತಾನೆ ? – ನಿಮ್ಮಲ್ಲಿದ್ದ ನಿಧಿಯೆಲ್ಲ – ಅದು ಏಳೋ ಎಪ್ಪತ್ತೋ ಎಷ್ಟೋ ಆಗಿರಲಿ – ವೆಚ್ಚವಾಗಿ ಹೋಗಿದೆ. ಆದ್ದರಿಂದ, ಇನ್ನು ಮುಂದೆ ನೀವು ನಿಯಮಿತ ರೀತಿಯಲ್ಲಿ ಪೊಗದಿ ಮೊಬಲಗು ಕೊಡಲು ಸಾಧ್ಯವಿಲ್ಲ ಎಂದು ನಮ್ಮ ಅಭಿಪ್ರಾಯ. ಅಂಥ ಸ್ಥಿತಿಯಿಂದ ಕಂಪೆನಿಯ ಸರ್ಕಾರಕ್ಕೆ ನಷ್ಟವಾಗಲಿ ಅನಾನುಕೂಲವಾಗಲಿ ಆಗದಂತೆ ನೋಡಿಕೊಳ್ಳಬೇಕಾದುದು ನಮ್ಮ ಕರ್ತವ್ಯತಾನೆ."

" ಅದು ತಮ್ಮ ಕರ್ತವ್ಯವೆಂದು ಒಪ್ಪಿಕೊಳ್ಳುತ್ತೇವೆ. ಆದರೆ ನಮ್ಮ ಮಾತು ಸ್ವಲ್ಪ ಕೇಳಬೇಕು. ನಮ್ಮ ರಾಜ್ಯದ ಹಣಕಾಸಿನ ವ್ಯವಸ್ಥೆ ಗೌರ್ನರ್ ಸಾಹೇಬರು ಭಾವಿಸಿಕೊಂಡಿರುವಷ್ಟು ಕೆಟ್ಟಿಲ್ಲ. ಕಳೆದ ಕೆಲವು ವರ್ಷಗಳಿಂದ ನಾವು ಸಂಸ್ಥಾನದ ಆಡಳಿತಕ್ಕಾಗಿ ಆದಾಯಕ್ಕಿಂತ ಹೆಚ್ಚು ಹಣ ವೆಚ್ಚ ಮಾಡಿದ್ದೇವೆ. ನಿಜ. ಆದರೆ ಅದು ಅನಿವಾರ್ಯ ಪರಿಸ್ಥಿತಿಯ ಪರಿಣಾಮ. ಕಳೆದ ಏಳು ಎಂಟು ವರ್ಷ ಗಳಿಂದ ಮಳೆ ಬೆಳೆ ಕೆಟ್ಟು, ದೇಶಕ್ಕೆ ಅರೆಕ್ಷಾಮ ಬಂದಿದ್ದರಿಂದ ಸರ್ಕಾರದ ಆದಾಯ ತಗ್ಗಿತು. ಜೊತೆಗೆ ಕಂಪನಿಯ ಪರವಾಗಿ ಹೋರಾಡಲು ಉತ್ತರ ದೇಶಕ್ಕೆ

ಹೋಗಿದ್ದ ನಮ್ಮ ಸೇನೆಗಳ ಮೂಲಕ ಆ ಕಡೆಯಿಂದ ಶಾಂತಿಭೇದಿ ಮಾರಿ ನಮ್ಮ ದೇಶಕ್ಕೂ ಹಬ್ಬಿ ಜನ ತುಂಬ ಕಂಗಾಲಾದರು. ಬೇಸಾಯ ಕೆಟ್ಟಿತು. ಇದರಿಂದಲೂ ಆದಾಯ ತಗ್ಗಿತು. ಇದಲ್ಲದೆ ನಮ್ಮ ಸೇನೆ ಉತ್ತರದೇಶಕ್ಕೆ ಹೋದದ್ದರಿಂದ ಸೇನೆಯ ವೆಚ್ಚ ಹೆಚ್ಚಾಯಿತು. ಈಗ ಸ್ಥಿತಿಗತಿಗಳು ಉತ್ತಮಗೊಳ್ಳುತ್ತಿವೆ. ಕಂಪನಿ ಸರ್ಕಾರಕ್ಕೆ ಪೊಗದಿ ಸಲ್ಲಿಸಲು ಇನ್ನುಮುಂದೆ ಯಾವ ತೊಂದರೆಯೂ ಇಲ್ಲ. ಈ ವರ್ಷ ಖರ್ಚು ಕಳೆದು ಐದು ಲಕ್ಷ ವರಹ ಉಳಿಯುತ್ತದೆಂದು ನಿರೀಕ್ಷಿಸಿದ್ದೇವೆ."

"ಹಾಗಾದರೆ ನಮಗೆ ಸಂತೋಷ. ಆದರೆ, ಸಂಸ್ಥಾನದ ಆಡಳಿತ ವ್ಯವಸ್ಥೆ ಸಮರ್ಪಕವಾಗಿಲ್ಲವಾದ್ದರಿಂದ ಈ ನಿರೀಕ್ಷಣೆ ಫಲಿಸದೆ ಹೋದೀತೇನೊ ಎಂಬ ಶಂಕೆ ನಮಗಿದ್ದೇಯಿದೆ. ಆದ್ದರಿಂದ ಸಂಸ್ಥಾನದ ಆಡಳಿತ ವ್ಯವಸ್ಥೆಯನ್ನು ಉತ್ತಮಗೊಳಿಸಲು ಮಹಾರಾಜರವರು ಒಡನೆಯೇ ತಕ್ಕ ಏರ್ಪಾಡು ಮಾಡಬೇಕೆಂದು ನಾವು ಆಗ್ರಹಪೂರ್ವಕವಾಗಿ ಸೂಚಿಸಬೇಕಾಗಿದೆ."

"ಈ ವಿಚಾರವನ್ನು ನಾವು ಒಡನೆಯೇ ಪರಿಶೀಲಿಸುತ್ತೇವೆ."

"ದಯವಿಟ್ಟು ಹಾಗೆ ಮಾಡಿ. ಮಹಾರಾಜರವರಿಗೆ ಅನಾವಶ್ಯಕವಾಗಿ ತೊಂದರೆ ಕೊಡಬೇಕೆಂಬ ಉದ್ದೇಶ ಕಂಪನಿ ಸರ್ಕಾರಕ್ಕಿಲ್ಲ. ಆದರೆ, ಸಂಸ್ಥಾನದ ಆದಾಯ ಹೀಗೆ ಇಳಿಯುತ್ತ ಹೋದರೆ, ಕಂಪನಿ ಸರ್ಕಾರ ತಮ್ಮ ಹಿತರಕ್ಷಣೆಗಾಗಿ ನಿಮ್ಮ ರಾಜ್ಯದ ಆಡಳಿತವನ್ನು ತಾನು ವಹಿಸಿಕೊಳ್ಳಬೇಕಾಗುತ್ತದೆ. ಅದಕ್ಕೆ ಅವಕಾಶವಾಗದಂತೆ ಸಂಸ್ಥಾನದ ಆಡಳಿತವನ್ನು ನಿರ್ವಹಿಸುತ್ತೀರೆಂದು ನಂಬಿದ್ದೇನೆ" ಎಂದು ಹೇಳಿ ಮನ್ರೋ ಸಾಹೇಬರು ಮಹಾರಾಜರಿಗೆ ವಂದಿಸಿ ಕೋಲ್ ಸಾಹೇಬರೊಡನೆ ಹೊರಟುಹೋದರು.

§

"ಕಾಸಾ ಮೈಜರ್ ಸಾಹೇಬರಿಗೆ ನನ್ನ ಅಭಿವಂದನೆಗಳು; ಈ ಹಾರ ತುರಾಯಿಗಳನ್ನೊಪ್ಪಿಸಿಕೊಳ್ಳಬೇಕು. ಕೋಲ್ ಸಾಹೇಬರ ಸ್ಥಾನದಲ್ಲಿ ತಾವು ಈ ಸಂಸ್ಥಾನದ ರೆಸಿಡೆಂಟರಾಗಿ ಬಂದಿದ್ದು ನಮಗೆಲ್ಲಾ ತುಂಬ ಸಂತೋಷ. ಕೋಲ್ ಸಾಹೇಬರು ಮೇಲಿಂದ ಮೇಲೆ ನಿಮ್ಮ ಮಾತನ್ನಾಡುತ್ತಿದ್ದರು. ಅವರಿಗೆ ನಿಮ್ಮ ಮೇಲೆ ತುಂಬ ಅಭಿಮಾನ."

"ನೀವು ನನ್ನನ್ನು ನೋಡಲು ಬಂದಿದ್ದು ತುಂಬ ಸಂತೋಷ ರಾಮಸ್ವಾಮಿ

ಮೊದಲಿಯಾರ್. ನೀವು ನಮಗೆ ಹಳೆಯ ಪರಿಚಯರಷ್ಟರೇ ಆಯಿತಲ್ಲ. ಈಗ ನೀವು ರೆಸಿಡೆನ್ಸಿ ಕಛೇರಿಯಲ್ಲಿಲ್ಲವಂತೆ."

"ಇಲ್ಲ. ಕೋಲ್ ಸಾಹೇಬರೇ ನನ್ನನ್ನು ಮಹಾರಾಜರ ಅಂಚೇ ಕಛೇರಿ ಭಕ್ಷಿಯನ್ನಾಗಿ ನಿಯಮಿಸಿದರು. ಎಲ್ಲಿದ್ದರೇನು, ನಾನು ಯಾವಾಗಲೂ ಅವರ ಸೇವೆಗೆ ಸಿದ್ಧನಾಗಿದ್ದೆ."

"ಅದು ನನಗೆ ಗೊತ್ತು. ಕೋಲ್ ಸಾಹೇಬರಿಗೆ ನಿಮ್ಮ ಮೇಲೆ ತುಂಬ ಅಭಿಮಾನ. ನಿಮಗೊಂದು ಜಹಗೀರಿಯನ್ನು ಕೊಡಿಸಿದರೆಂದು ಕೇಳಿದೆ."

"ಎಲ್ಲ ಅವರ ಅನುಗ್ರಹ. ಕೋಲ್ ಸಾಹೇಬರು ಇರುವವರೆಗೂ ಅವರ ಸೇವೆಯ ಪುಣ್ಯ ಇರಲೆಂದು ಅವರು ಹೇಳಿದ ಕೆಲಸ ಮಾಡಿದ್ದಾಯಿತು. ನನಗೆ ಅಂಚೆ ಭಕ್ಷಿ ಕೆಲಸದಲ್ಲಿ ಆಸಕ್ತಿಯಿಲ್ಲ. ಆ ಕೆಲಸ ಬಿಟ್ಟುಬಿಡಬೇಕೆಂದಿದ್ದೇನೆ."

"ನಿಮ್ಮ ಅಪೇಕ್ಷೆ ಹಾಗಿದ್ದರೆ ಹಾಗೇ ಮಾಡಿ. ನಿಮ್ಮಂಥ ಅನುಭವಶಾಲಿಗಳ ನೆರವು ನನಗಿರಲಿ. ನನ್ನ ದುಬಾಷಿಯಾಗಿರಿ – ಕೋಲ್‌ಗೆ ದುಬಾಷಿಯಾಗಿದ್ದಂತೆ."

"ತಾವು ನನ್ನ ಮೇಲೆ ಇಷ್ಟೊಂದು ಕೃಪೆ ತೋರಿದ್ದು ನನ್ನ ಪುಣ್ಯ. ತಮ್ಮಂಥವರ ಸೇವೆ ಮಾಡುವುದಕ್ಕಿಂತ ಶ್ರೇಯಸ್ಕರವಾದ ಕೆಲಸ ಇನ್ನೇನಿದ್ದೀತು? ಆದರೆ ನನಗೂ ವಯಸ್ಸಾಯಿತು. ಹೇಗೂ, ಕೋಲ್ ಸಾಹೇಬರ ದಯದಿಂದ ನನಗೆ ಅನ್ನ ನೀರಿನ ಚಿಂತೆಯಿಲ್ಲ. ಕೊನೆಗಾಲದಲ್ಲಿ ಶಿವಸಮುದ್ರದಲ್ಲಿ – ಅದೇ ಕೋಲ್ ಸಾಹೇಬರು ಕೊಡಿಸಿದ ಜಹಗೀರಿ–ಅಲ್ಲಿ ನಾನೇ ಕಟ್ಟಿಸಿರುವ ರಂಗನಾಥ ಸ್ವಾಮಿ ಸೇವೆ ಮಾಡಿಕೊಂಡು ಶಾಂತವಾಗಿರಬೇಕೆಂದು ಆಸೆ."

"ಅಂತು, ನೀವು ನಮ್ಮ ಸೇವೆಯಲ್ಲಿರಲು ಸಿದ್ಧರಿಲ್ಲ ಅನ್ನಿ."

"ರೆಸಿಡೆಂಟ್ ಸಾಹೇಬರು ಕ್ಷಮಿಸಬೇಕು. ಆ ಮಾತು ಆಡಿದರೆ ನಾನು ಹಾಳಾಗಿ ಹೋದೇನು! ನಾನು ಸದಾ ತಮ್ಮ ಸೇವೆಗೆ ಸಿದ್ಧ. ಆದರೆ, ಈ ವಯಸ್ಸಿನಲ್ಲಿ ನೌಕರಿಯ ನಿಯಮಗಳಿಗೆ ಕಟ್ಟುಬಿದ್ದು ದುಡಿಯುವ ಶಕ್ತಿಯಿಲ್ಲ. ಆದ್ದರಿಂದ ತಮ್ಮ ದುಬಾಷಿಯಾಗಿರಲು ಹಿಂದೆ ಮುಂದೆ ನೋಡಿದೆ. ಅಷ್ಟೇಯೆ."

"ನೀವು ಹೇಳುವುದೂ ಸರಿ ಮೊದಲಿಯಾರ್. ನಿಮಗೂ ವಯಸ್ಸಾಯಿತು. ನೀವು ವಿಶ್ರಾಂತಿ ಸುಖವನ್ನು ಬಯಸುವುದೂ ಸಹಜವೇ. ಆಯಿತು. ನಮ್ಮ ಆಪ್ತರಾಗಿದ್ದುಕೊಂಡು, ನಮಗೆ ನಿಮ್ಮಿಂದಾದ ಸಹಾಯ ಮಾಡಬಹುದಲ್ಲ."

"ಅತ್ಯಗತ್ಯವಾಗಿ. ನನಗೆ ಅದಕ್ಕಿಂತ ಸಂತೋಷಕರವಾದದ್ದು ಇನ್ನೇ ನಿದ್ದೀತು ?"

"ಮೊದಲಿಯಾರ್, ನಿಮಗೆ ಈಗ ಇನ್ನೇನಾದರೂ ಕೆಲಸವಿದೆಯೇನು ?"

"ಅಂಥ ಆತುರದ ಕೆಲಸವೇನಿಲ್ಲ. ಛಕ್ಷಿ ಕೆಲಸ ಬಿಡುವುದೆಂದು ನಿರ್ಣಯಿಸಿದ ಮೇಲೆ, ನನ್ನ ಕೆಲಸದ ಬಹುಭಾಗವನ್ನೆಲ್ಲಾ ಮುಂದೆ ಆ ಜವಾಬುದಾರಿ ಹೊರ ಬೇಕಾದವರ ತಲೆಯ ಮೇಲೆ ಹಾಕಿ ನನ್ನ ಕೆಲಸ ಹಗುರಮಾಡಿಕೊಂಡಿದ್ದೇನೆ."

"ಸ್ವಲ್ಪ ಮಾತನಾಡುವುದಿದೆ. ಒಳಗೆ ಬನ್ನಿ."

ಆಗತಾನೆ ಮೈಸೂರು ಸಂಸ್ಥಾನದ ರೆಸಿಡೆಂಟ್ ಹುದ್ದೆಗೆ ಬಂದಿದ್ದ ಕಾಸಾ ಮೈಜರ್ ಎದ್ದು ಒಳಕೋಣೆಗೆ ಹೊರಟರು. ರಾಮಸ್ವಾಮಿ ಮೊದಲಿಯಾರ್ ಆತನನ್ನು ಹಿಂಬಾಲಿಸಿದರು. ಕೊಟಡಿಯ ಬಾಗಿಲು ಮುಚ್ಚಿ ಅವರಿಬ್ಬರೂ ಮಾತ ನಾಡಲಾರಂಭಿಸಿದರು.

"ಮೊದಲಿಯಾರ್, ಕೆಲವಾರು ವಿಚಾರಗಳಲ್ಲಿ ನನಗೆ ನಿಮ್ಮ ಅನುಭವದ ನೆರವು ಬೇಕಾಗಿದೆ."

"ಅಪ್ಪಣೆಯಾದರೆ, ನನ್ನ ಕೈಲಾದದ್ದನ್ನೆಲ್ಲಾ—"

"ಅಂಥದೇನೂ ಇಲ್ಲ. ಕೋಲ್ ಇಲ್ಲಿ ಹದಿನಾಲ್ಕು ವರ್ಷ ರೆಸಿಡೆಂಟ್ ಆಗಿದ್ದವ. ಮಹಾರಾಜರಿಗೆ ತುಂಬ ಆಪ್ತನಾಗಿದ್ದವ. ತನ್ನ ಕೆಲಸದಲ್ಲಿ ಬಹಳ ದಕ್ಷನೆಂದು ಹೆಸರು ಪಡೆದಿದ್ದವ. ಆದರೂ, ಇಲ್ಲಿಂದ ಹೋಗುವಾಗ ಅವನ ಮನಸ್ಸಿಗೆ ತುಂಬ ಬೇಜಾರಾಗಿತ್ತೆಂದು ಕೇಳಿದೆ. ಆತ ಈಗ ರಜದ ಮೇಲೆ ಸೀಮೆಗೆ ಹೋಗಿದ್ದಾನಾದರೂ ಮತ್ತೆ ಕೆಲಸಕ್ಕೆ ಬರುವ ಸಂಭವವಿಲ್ಲ ಎಂದು ಮದರಾಸು ಸುದ್ದಿ. ಗೌರ್ನರ್ ಮನ್ರೋರವರಿಗೂ ಕೋಲ್‌ಗೂ ಏನಾದರೂ ಘರ್ಷಣೆ ಆಯಿತೆ? ನೀವು ಕೋಲ್‌ನ ಆಪ್ತರಾಗಿದ್ದುದರಿಂದ – ಗೊತ್ತಿರ ಬಹುದು."

"ಇತ್ತೀಚೆಗೆ ಕೋಲ್ ಸಾಹೇಬರಿಗೂ ಮಹಾರಾಜರಿಗೂ ಸ್ನೇಹವಿರಲಿಲ್ಲ. ಅಲ್ಲಿ ರಾಜರ ಸುತ್ತ ದುರ್ಮಂತ್ರಿಗಳ ಪ್ರಾಬಲ್ಯ ಹೆಚ್ಚಾಗಲಾಗಿ, ಅದರಿಂದ ಆಡಳಿತ ಕೆಡುತ್ತಿದೆಯೆಂದು ಕೋಲ್ ಸಾಹೇಬರು ಮಹಾರಾಜರಿಗೆ ಎಚ್ಚರಿಕೆ ಕೊಟ್ಟರು – ಸ್ನೇಹಧರ್ಮದಲ್ಲಿ. ಅದು ರಾಜರಿಗೆ ಸರಿಬೀಳಲಿಲ್ಲ. ಸ್ನೇಹ ಕೆಟ್ಟಿತು. ಆಡಳಿತ ತೀರಾ ಹದಗೆಡುತ್ತಿದೆಯೆಂದು ತಿಳಿದಾಗ, ಆ ವಿಚಾರ ಕೋಲ್ ಸಾಹೇಬರು ಗೌರ್ನರ್ ಸಾಹೇಬರಿಗೆ ಪತ್ರ ಬರೆದರು."

"ಅದನ್ನು ನೋಡಿದ್ದೇನೆ."

"ಗೌರ್ನರ್ ಸಾಹೇಬರು ಬಂದು ವಿಚಾರಣೆ ನಡೆಸಿದರು. ಅಲ್ಲಿಂದಾಚೆಗೆ ಕೋಲ್ ಸಾಹೇಬರು ನೀವು ಹೇಳಿದ ಹಾಗೆ ಬೇಜಾರಾಗೇ ಇದ್ದರು. 'ಸೀಮೆಗೆ ಹಿಂದಿರುಗಬೇಕೆಂಬ ಮನಸ್ಸಾಗಿದೆ ಮೊದಲಿಯಾರ್. ರಜ ತೆಗೆದುಕೊಳ್ಳಬೇಕೆಂದಿದ್ದೇನೆ' ಅಂದರು—"

"ಅವರಿಗೆ ಬೇಜಾರಾದದ್ದೇಕೆ ?"

"ಸಂಸ್ಥಾನದ ಆಡಳಿತವನ್ನು ಮಹಾರಾಜರ ಕಯ್ಯಿಂದ ತಪ್ಪಿಸಿ, ಕಂಪನಿ ಸರ್ಕಾರವೇ ಅದನ್ನು ವಹಿಸಿಕೊಳ್ಳಬೇಕು ಎಂಬುದು ಕೋಲ್ ಸಾಹೇಬರ—"

"ಅವರ ಪತ್ರದಲ್ಲೇ ಅದು ಸ್ಪಷ್ಟವಾಗಿದೆ."

"ಆದರೆ – ಹಾಗಾಗಲಿಲ್ಲ. ಗೌರ್ನರ್ ಸಾಹೇಬರು ಅದಕ್ಕೊಪ್ಪಲಿಲ್ಲ."

"ಕಾರಣ ?"

"ನನಗದು ಗೊತ್ತಿಲ್ಲ. – ಈ ವಿಚಾರದಲ್ಲಿ ಮಹಾರಾಜರೋ ಅವರ ಕಡೆಯವರೋ ಏನೋ ತಂತ್ರಮಾಡಿ—"

"ತಂತ್ರಮಾಡಿ—"

"ಕೋಲ್‌ರವರ ವಿಚಾರವಾಗಿ ಗೌರ್ನರ್‌ರವರ ಮನಸ್ಸು ಕೆಡಿಸಿರಬಹುದು."

"ಇದ್ದೀತು. ಇಂಥ ತಳತಂತ್ರಗಳಲ್ಲಿ ಈ ಸಂಸ್ಥಾನಿಕರೂ ಅವರ ಅನುಯಾಯಿಗಳೂ ಬಲು ಚತುರರು."

"ಅಪ್ಪಣೆಯಾದರೆ – ನಾನಿನ್ನು—"

"ಇನ್ನೊಂದೆರಡು ನಿಮಿಷ, ಅಷ್ಟೇಯೆ. ಈ ತಳತಂತ್ರದ ಗೋಜುಗಳಲ್ಲಿ ಸಿಕ್ಕಿಬೀಳಲು ನನಗೆ ಅಪೇಕ್ಷೆಯಿಲ್ಲ. ಮಹಾರಾಜರೊಡನೆಯೂ ಅಷ್ಟೇಯೆ – ಮದರಾಸು ಗೌರ್ನರ್ ಆಜ್ಞೆಮಾಡಿದಷ್ಟೆ ವ್ಯವಹಾರ. ನಾನು ಪದೇ ಪದೇ ಮಹಾರಾಜರನ್ನು ನೋಡಲೂ ಕೂಡದೆಂದು ಮನಸ್ಸು ಮಾಡಿದ್ದೇನೆ. ಅವರಲ್ಲಿ ಹೆಚ್ಚು ಸ್ನೇಹ ಬೆಳೆಸಿಕೊಂಡಿದ್ದೆ ಕೋಲ್‌ಗೆ ಮುಳಿಯಾಯಿತು."

"ನಿಜ ನಿಜ. ತಾವು ಅವರೊಡನೆ ಸ್ವಲ್ಪ ಬಿಗಿಮಾನದಿಂದ ಇರುವುದೇ ಒಳ್ಳೇದು."

"ಆಯಿತು. ನನ್ನ ಕಛೇರಿಯಲ್ಲೂ ಅಷ್ಟೇ. ಎಲ್ಲರಿಗೂ ಸ್ಥಾನಪಲ್ಲಟ ಮಾಡಿ ಹಳೆಬೇರು ಕಿತ್ತು ಹೊಸ ವ್ಯವಸ್ಥೆ ಮಾಡಬೇಕೆಂದಿದ್ದೇನೆ."

"ತುಂಬ ಸಂತೋಷ. ವ್ಯವಹಾರ ಹಳೇಜಾಡು ಬಿಟ್ಟು ಹೊಸಮಾರ್ಗ ಹಿಡಿಯಲು ಆದರಿಂದ ಸಹಾಯವಾಗುತ್ತದೆ."

"ಈ ಸಂದರ್ಭದಲ್ಲಿ ನೀವು ನಮ್ಮ ದುಭಾಷಿಗಳಾಗಿದ್ದರೆ ಚೆನ್ನಾಗಿರುತ್ತಿತ್ತು."

"ಆಗಲೇ ಬಿನ್ನವಿಸಿಕೊಂಡೆನಲ್ಲ. ನೌಕರಿಗೆ ಬರಲಾರೆ. ಅದೊಂದನ್ನು ಬಿಟ್ಟು ಇನ್ನು ಯಾವ ಕೆಲಸವನ್ನಾದರೂ ಮಾಡಿಕೊಡುತ್ತೇನೆ, – ಪರಸ್ಪರ ಸ್ನೇಹ ಭಾವದಲ್ಲಿ."

"ತುಂಬ ಸಂತೋಷ. ನೀವು ದುಬಾಷಿಯಾಗಿದ್ದರೆ ನಮಗೆ ಯಾವ ಚಿಂತೆಯೂ ಇರುತ್ತಿರಲಿಲ್ಲ. ನೀವು ಬರುವುದಿಲ್ಲವೆಂದು ಗಟ್ಟಿ ಮನಸ್ಸು ಮಾಡಿಯೇ ಬಿಟ್ಟಿದ್ದೀರಿ. ನಿಮ್ಮ ಬದಲು ನಾನು ಯಾರಲ್ಲಿ ಸಂಪೂರ್ಣ ನಂಬಿಕೆಯಿಡಬಹುದು – ಅಂಥವರು ಯಾರಿದ್ದಾರೆ ನಮ್ಮ ಕಛೇರಿಯಲ್ಲಿ. ಹೇಳಿ. ಇಲ್ಲಿಯವರ ವಿಚಾರ ನನಗಿಂತ ನಿಮಗೆ ಚೆನ್ನಾಗಿ ಗೊತ್ತಿರುತ್ತದೆ—"

"ಯೋಚಿಸಬೇಕು – ಅಂಥವರು ಈಗಾಗಲೇ ನಿಮ್ಮ ಕಛೇರಿಯಲ್ಲಿ ದೊಡ್ಡ ಹುದ್ದೆಯಲ್ಲಿರಬೇಕೆ ಹೇಗೆ —"

"ಅಂಥದೇನಿಲ್ಲ."

"ನಿಮ್ಮ ಕಛೇರಿಯಲ್ಲೋ – ಬೇರೆ ಕಛೇರಿಯಲ್ಲೋ ಸಣ್ಣ ಹುದ್ದೆಯಲ್ಲಿದ್ದರೆ—"

"ಮೊದಲಿಯಾರ್, ನನ್ನ ಮಾತು ಇಷ್ಟೆ. ನನಗೆ ಬೇಕಾದ ಆಸಾಮಿ, ನಂಬಿಕೆಗೆ ಅರ್ಹನಾದ ಆಸಾಮಿ. ಅವನು ಕೆಲಸದಲ್ಲಿ ದಕ್ಷನಾದರೆ ಮತ್ತೂ ಒಳ್ಳೆಯದು. ಅವನು ಈಗಾಗಲೇ ದೊಡ್ಡ ಹುದ್ದೆಯಲ್ಲಿದ್ದರೆ ಇನ್ನೂ ಒಳ್ಳೆಯದು. ಇಲ್ಲದಿದ್ದರೆ ಒಂದು ಒಳ್ಳೆ ಹುದ್ದೆ ನಿರ್ಮಿಸಿ ಅದನ್ನವನಿಗೆ ಕೊಡೋಣ. ಮುಖ್ಯ ನಮ್ಮ ಹತ್ತಿರ ಇರುವವನು ನಂಬಿಕೆಗೆ ಅರ್ಹನಾಗಿರಬೇಕು."

"ರೆಸಿಡೆಂಟರ ಅಭಿಪ್ರಾಯ ತಿಳಿಯಿತು. – ಒಳ್ಳೆ ಆಸಾಮಿ ಒಬ್ಬ ಇದಾನೆ."

"ಎಲ್ಲಿ."

"ತಮ್ಮ ಸೇವೆಯಲ್ಲೇ—"

"ಒಳ್ಳೆಯದೇ ಆಯಿತಲ್ಲ."

"ಅಂದರೆ ರೆಸಿಡೆನ್ಸಿ ಸರ್ಜನರ ಗುಮಾಸ್ತೆ. ಆತ ಒಳ್ಳೆ ಘಟಿಕ. ದಕ್ಷ. ಅವನನ್ನು ಬಿಟ್ಟುಕೊಡಲು ಸರ್ಜನ್ ಸಾಹೇಬರು ಒಪ್ಪಬೇಕು."

"ಇಷ್ಟುತಾನೆ. ಸರ್ಜನರ ಗುಮಾಸ್ತೆ ಕೆಲಸಕ್ಕೆ ಸಾಮಾನ್ಯ ವ್ಯಕ್ತಿ ಸಾಕು.

ಆತ ನನ್ನ ಕೆಲಸಕ್ಕೆ ತಕ್ಕವನೆಂದು ನೀವು ಹೇಳಿದರೆ–ನಮ್ಮ ಕಛೇರಿಗೆ ವರ್ಗಮಾಡಿಕೊಳ್ಳೋಣ. ಅದೇನು ಕಷ್ಟದ ಕೆಲಸ ಅಲ್ಲ. ಆತನ ಹೆಸರು."

"ಹಿರೀಸಾವೆ ಚೌಡಯ್ಯ."

"ಅನುಭವಸ್ಥನೋ?"

"ಓಹೋ! ಒಳ್ಳೆ ಅನುಭವವೂ ಇದೆ. ಬುದ್ಧಿಶಕ್ತಿಯೂ ಇದೆ. ದಕ್ಷತೆಯೂ ಇದೆ."

"ಆತನಿಗೆ ನಮ್ಮಲ್ಲಿ ಏನು ಹುದ್ದೆ ಕೊಡಬಹುದು? ನೀವಾಗಿದ್ದರೆ ನೇರವಾಗಿ ದುಬಾಷಿಯಾಗಬಹುದಾಗಿತ್ತು."

"ಆತ ಸದ್ಯಕ್ಕೆ ತಮ್ಮ ಕಛೇರಿಯ ಶಿರಸ್ತೇದಾರನಾಗಿರಲಿ. ಆವನ ಕೆಲಸ, ನಡತೆ ತಮ್ಮ ಮನಸ್ಸಿಗೆ ಹಿಡಿದರೆ ಆಮೇಲೆ ನೋಡೋಣ."

"ಆಗಬಹುದು. ಈ ಸಂಜೆ ನೀವು ಅವನನ್ನು ಇಲ್ಲಿಗೆ ಕರೆದುಕೊಂಡು ಬನ್ನಿ. ಮಾತನಾಡೋಣ."

"ನಮಸ್ಕಾರ."

"ವಂದನೆಗಳು ಮೊದಲಿಯಾರ್. ನಿಮಗೆ ತೊಂದರೆ ಕೊಡುತ್ತಿದ್ದೇನೆ."

"ಹಾಗೇನಿಲ್ಲ. ಆಜ್ಞೆಯಾದಾಗ ಸೇವೆಗೆ ಸಿದ್ಧನಾಗಿದ್ದೇನೆ. ಬರಲೆ—"

§

ಚದುರಂಗದ ಕಾಯಿಗಳನ್ನು ತುಂಬ ಬುದ್ಧಿವಂತಿಕೆಯಿಂದ ಹೂಡಿದ್ದಾಯಿತು. ಸಂಸ್ಥಾನದಲ್ಲಿ ನಡೆಯುತ್ತಿರುವ ಅನ್ಯಾಯಗಳು ಮಹಾರಾಜರವರ ಗಮನಕ್ಕೆ ಬರದಂತೆ ಅವರಿಗೆ ಕಣ್ಣು ತಡೆಯಾಗಿರುವುದಕ್ಕೆ ವೀಣೆ ವೆಂಕಟಸುಬ್ಬಯ್ಯ, ಮೋತೀಖಾನೆ ನರಸಿಂಗರಾಯ. ಇತ್ತ ರೆಸಿಡೆಂಟರು ಸಂಸ್ಥಾನದ ಸ್ಥಿತಿಗತಿಗಳನ್ನು ಸರಿಯಾಗಿ ತಿಳಿದುಕೊಂಡು ಸ್ವತಂತ್ರವಾಗಿ ವರ್ತಿಸುವುದಕ್ಕಾಗದಂತೆ ಆತನಿಗೆ ತಡೆಯಾಗಿರುವುದಕ್ಕೆ ಹಿರೀಸಾವೆ ಚೌಡಯ್ಯ, ಹಾನಗಲ್ಲು ಕೃಷ್ಣರಾಯ. ಮಹಾರಾಜರು ರೆಸಿಡೆಂಟರ ನಡುವೆ ಪುಳ್ಳೆ ಹೊತ್ತಿಸಿ ಅವರಿಬ್ಬರೂ ಪರಸ್ಪರ ವಿರಸವಾಗಿರುವಂತೆ ನೋಡಿಕೊಳ್ಳುವುದಕ್ಕೆ 'ಜನೋಪಕಾರಕರ್ತ' ರಾಮಸ್ವಾಮಿ ಮೊದಲಿಯಾರ್!

ದೇಶದಲ್ಲಿ ಅಮಲುದಾರರಾಗಿ, ಕಂದಾಯದ ಅಧಿಕಾರಿಗಳಾಗಿದ್ದವರಲ್ಲಿ ಬಹುಮಂದಿ ಈ ಅನಿಷ್ಟ ಪಂಚಕದಲ್ಲಿ ಒಬ್ಬರಲ್ಲ ಇನ್ನೊಬ್ಬರ ಹಸ್ತಕರು.

ಆ ಅಧಿಕಾರಿಗಳ ಅನ್ಯಾಯದ ಆದಾಯದಲ್ಲಿ ಇವರಿಗೊಂದು ಪಾಲು. ಅವರ ಮೇಲೆ ದೂರು ಬಂದರೆ ಅದು ಅರಸರ, ರೆಸಿಡೆಂಟರ ಕಿವಿಗೆ ಬೀಳದಂತೆ, ಬಿದ್ದರೂ ಅದರಿಂದ ಸಂಬಂಧಪಟ್ಟ ತಪ್ಪಿತಸ್ಥನಿಗೆ ತೊಂದರೆಯಾಗದಂತೆ ನೋಡಿಕೊಳ್ಳುವುದು ಇವರ ಕರ್ತವ್ಯ. ಇಂಥ ರಕ್ಷಣೆ ದೊರೆಯುವುದೆಂದು ಧೈರ್ಯವಾದ ಮೇಲೆ ಇನ್ನೇತರ ಹೆದರಿಕೆ ? ಪ್ರಜೆಗಳಿಗೆ ಚಿತ್ರ ವಿಚಿತ್ರ ಹಿಂಸೆಕೊಟ್ಟು ಅವರನ್ನು ಸುಲಿಯುವುದರಲ್ಲಿ, ಹಾಗೆ ಸುಲಿದ ಹಣವಲ್ಲದೆ, ಸರ್ಕಾರಕ್ಕೆ ಸಲ್ಲಬೇಕಾದ ಹಣವನ್ನು ಕೂಡ ನಿರಾತಂಕವಾಗಿ ನುಂಗುವುದರಲ್ಲಿ ಈ ಅಧಿಕಾರಿಗಳು ಪ್ರವೀಣರಾದರು. ಒಳ್ಳೆಯದೇ. ಹೆಚ್ಚು ಸುಲಿಗೆ ಅಂದರೆ ಹೆಚ್ಚು ಪಾಲುತಾನೆ! ಹೆಚ್ಚು ಪಾಲು ಎಂದಮೇಲೆ ಹೆಚ್ಚು ರಕ್ಷಣೆ; ಹೆಚ್ಚು ರಕ್ಷಣೆ ಎಂದ ಮೇಲೆ ಹೆಚ್ಚು ಸುಲಿಗೆ....

ಸುಲಿದ ಬಾಳೆಯ ಹಣ್ಣಿನಂತೆ, ಸರ್ಕಾರಿ ಹಣ ನುಂಗುವುದು; ಕಳೆದ ಸಿಗುರಿನ ಕಬ್ಬಿನಂತೆ ಜನರನ್ನು ಹೀರುವುದು ಅವಿಚ್ಛಿನ್ನವಾಗಿ, ಕೆಲಕಾಲ ನಡೆಯಿತು. ಕೆಲಕಾಲ ಮಾತ್ರ! ಕಾರಣ–ಅಂಥ ಸುಲಿಗೆ ಶಾಶ್ವತವಾಗಿ ನಡೆಯಲು ಸಾಧ್ಯವಿಲ್ಲವಾದ್ದರಿಂದ!

. ದುಷ್ಟ ಅಧಿಕಾರಿಗಳ ವಿರುದ್ಧ ಎಷ್ಟು ದೂರು ಹೇಳಿದರೂ ಪ್ರಯೋಜನವಿಲ್ಲ; ದೂರು ಕೇಳಬೇಕಾದ ಕಿವಿಗಳಿಗೆ ಬಲವಾದ ಬಿರಡೆ ಬಿದ್ದಿದೆ ಎಂಬುದು ಖಚಿತವಾದೊಡನೆಯೇ ಜನ ಕೆರಳಿದರು.

ಮೂವತ್ತು ವರ್ಷಗಳ ಹಿಂದೆ ಪೂರ್ಣಯ್ಯನವರಿಂದ, ವೆಲ್ಲೆಸ್ಲಿಯವರಿಂದ ಹೊಡೆತ ತಿಂದು ತಾತ್ಕಾಲಿಕವಾಗಿ ತಲೆ ಬಗ್ಗಿಸಿಕೊಂಡಿದ್ದ ಪಾಳೆಯಗಾರರು ಈ ಸುಸಂಧಿ ಸಂಭವಿಸಿದೊಡನೆಯೇ ಮತ್ತೆ ತಲೆಯೆತ್ತಿದರು. ಸುತ್ತ ನೋಡಿದರು. ಆಡಳಿತದಲ್ಲಿ ಅವ್ಯವಸ್ಥೆಯ ಹದ; ಜನರ ಮನಸ್ಸಿನಲ್ಲಿ ದಂಗೆಯ ಬೆದೆ. ಬಂಡಾಯಕ್ಕೆ ಕಾಲ ಸನ್ನಿವೇಶಗಳು ತುಂಬ ಚೆನ್ನಾಗಿವೆಯೆಂದು ಭಾವಿಸಿ ಹಳೆಯ ಪಾಳೆಯಗಾರರೂ ಅವರ ಅನುಯಾಯಿಗಳೂ ಮಹಾರಾಜರ ಸರ್ಕಾರದ ವಿರುದ್ಧ ಜನರನ್ನು ರೊಚ್ಚಿಗೆಬ್ಬಿಸಿ ಸಂಸ್ಥಾನದ ನಾನಾ ಪ್ರದೇಶಗಳಲ್ಲಿ ಹೊಯ್ಲಿಟ್ಟರು. ತೀವ್ರವಾದ ಬಂಡಾಯ ಆರಂಭವಾಯಿತು.

ತಮ್ಮ ರಾಜ್ಯದ ನಾನಾ ಭಾಗಗಳಲ್ಲಿ ಬಂಡಾಯ ಆರಂಭವಾಗಿದೆಯೆಂಬ ಸುದ್ದಿ ತಿಳಿದು ಬಂದೊಡನೆಯೇ ಮಹಾರಾಜರು ವಿಹ್ವಲಚಿತ್ತರಾದರು. ತಮ್ಮ ದಿವಾನರಾದ ವೆಂಕಟೇ ಅರಸಿನವರನ್ನು ಕರೆಸಿಕೊಂಡು ಅವರೊಡನೆ ಈ ದಂಗೆಯ ವಿಚಾರವಾಗಿ ಮಾತನಾಡಿದರು. ಒಡನೆಯೇ ರೆಸಿಡೆಂಟರನ್ನು ಕಂಡು

ಅವರ ಸಲಹೆಗಳನ್ನು ಕೇಳಿ, ಬಂಡಾಯ ಆರಂಭವಾಗಿರುವ ಪ್ರದೇಶಗಳಲ್ಲಿ ಪರಿಸ್ಥಿತಿಯನ್ನು ಮೊದಲು ಹತೋಟಿಗೆ ತರಬೇಕೆಂದೂ, ಅನಂತರ ತಾವೇ ದಂಗೆಯ ಕಾರಣಗಳನ್ನು ವಿವೇಚಿಸಿ ತಪ್ಪಿತಸ್ಥರನ್ನು ಶಿಕ್ಷಿಸಿ ಮುಂದೆ ಅಂಥ ಅಸಂತೃಪ್ತಿಗೆ ಅವಕಾಶವಾಗದಂತೆ ವ್ಯವಸ್ಥೆ ಮಾಡುವುದಾಗಿಯೂ ಹೇಳಿದರು.

ವೆಂಕಟೇ ಅರಸರು ರೆಸಿಡೆಂಟರ ಭೇಟಿಗೆ ಹೋದರು. ಆದರೆ ಅವರು ರೆಸಿಡೆಂಟರನ್ನು ಕಾಣುವುದಕ್ಕೆ ಮೊದಲೇ ರೆಸಿಡೆಂಟರ ಸುತ್ತಲಿದ್ದ ಉಪಗ್ರಹಗಳು ಅವರ ಕಿವಿ ಹಿಂಡಿಬಿಟ್ಟಿದ್ದುವು. ದಂಗೆಯ ಕಾರಣ ಮಹಾರಾಜರಿಗೆ ತಿಳಿಯದೆ ಇದ್ದಿದ್ದು ಸರಿಯೇ. ಆದರೆ ಅದಕ್ಕೆ ಕಾರಣವನ್ನೊದಗಿಸಿದ್ದವರಿಗೆ ಅದು ತಿಳಿಯದೆ ? ಆ ಕಾರಣ ಮಹಾರಾಜರಿಗೆ ತಿಳಿದರೆ ಅದರಿಂದ ತಮಗೆ ಹಿತವಿಲ್ಲ ವೆಂದು ಅವರಿಗೆ ತಿಳಿಯದೆ ? ಅದನ್ನು ತಿಳಿದೇ ಕಿವಿ ಹಿಂಡಿದ್ದರು.

ವೆಂಕಟೇ ಅರಸಿನವರು ತಮ್ಮ ಭೇಟಿಗೆ ಬಂದಾಗ ಕಾಸಾ ಮೈಜರ್ ತುಂಬ ಬಿಗಿಮಾನದಿಂದಲೇ ಅವರನ್ನು ಕಂಡರು.

ದಂಗೆಯನ್ನು ಅಡಗಿಸಲು ಕಂಪನಿ ಸೇನೆಗಳ ನೆರವು ಬೇಕೆಂಬ ಪ್ರಾರ್ಥನೆ ಯನ್ನು ವೆಂಕಟೇ ಅರಸಿನವರು ಮುಂದುವರಿಸಿದಾಗ ಕಾಸಾ ಮೈಜರ್ ನಿರ್ದಾಕ್ಷಿಣ್ಯವಾಗಿ—"ಅದು ಸಾಧ್ಯವಿಲ್ಲ. ಸಂಸ್ಥಾನದ ಹೊರಗಿನಿಂದ ಏನಾದರೂ ತೊಂದರೆಯುಂಟಾಗಿದ್ದರೆ ನಾವು ನಮ್ಮ ಸೇನೆಗಳನ್ನು ನಿಮ್ಮ ಸಹಾಯಕ್ಕೆ ಕಳುಹಿಸುತ್ತಿದ್ದೆವು. ಇದೆಲ್ಲಾ ನಿಮ್ಮ ರಾಜ್ಯದ ಒಳ ಆಡಳಿತಕ್ಕೆ ಸಂಬಂಧಿಸಿದ ವಿಚಾರ. ಇದರಲ್ಲಿ ನಾವು ಸಾಮಾನ್ಯವಾಗಿ ಕೈಹಾಕುವುದಿಲ್ಲ. ಅಂಥ ಆವಶ್ಯಕತೆ ಇದ್ದರೆ ನಿಮ್ಮ ಸಂಸ್ಥಾನದ ಸೇನೆಗಳನ್ನೇ ಉಪಯೋಗಿಸಿ. ವಿಶೇಷ ಪರಿಸ್ಥಿತಿ ಬಂದಾಗ ನೋಡಿಕೊಳ್ಳೋಣ. ಪ್ರಕೃತ ಈ ಪ್ರಸಂಗ ನೀವು ನಿಮ್ಮ ಮಹಾರಾಜರು ಸರಿಪಡಿಸಿಕೊಳ್ಳಬೇಕಾದದ್ದು. ಅದನ್ನು ಸರಿಪಡಿಸಲು ಹೇಗೆ ಬೇಕೋ ಹಾಗೆ ನಡೆದುಕೊಳ್ಳುವುದಕ್ಕೆ ನೀವು ಸ್ವತಂತ್ರರು. ನೀವು ಈ ವಿಚಾರ ದಲ್ಲಿ ನನ್ನೊಡನೆ ಮಾತನಾಡಲು ಬಂದಿದ್ದರಿಂದ ನಾನೊಂದು ಸಲಹೆ ಕೊಡುತ್ತೇನೆ. ದಂಗೆ ಎದ್ದಿರುವ ಜನ ಸೈನ್ಯ ಕಂಡರೆ ಇನ್ನಷ್ಟು ರೇಗುತ್ತಾರೆ. ಆದ್ದರಿಂದ ನೀವೇ ಮಿತಪರಿವಾರದೊಡನೆ ಗಲಭೆಯಾಗಿರುವ ಸ್ಥಳಗಳಿಗೆ ಹೋಗಿ ಜನರ ಮುಖಂಡ ರನ್ನು ಕಂಡು ಮಾತನಾಡಿ ಜನರನ್ನು ಸಮಾಧಾನಗೊಳಿಸುವುದು ಉತ್ತಮವೆಂದು ತೋರುತ್ತದೆ. ನೀವೇನು ನನ್ನ ಮಾತಿನಂತೆ ನಡೆಯಬೇಕಾಗಿಲ್ಲ ನಿಮಗೆ, ನಿಮ್ಮ ಮಹಾರಾಜರವರಿಗೆ ಸರಿದೋರಿದಂತೆ ಮಾಡಿ" ಎಂದರು.

ಅವರಲ್ಲಿ ಬಹು ಜನರು ಕತ್ತಿ ಕವಣೆ ದೊಣ್ಣೆಗಳನ್ನು ಹಿಡಿದಿದ್ದಾರೆಂಬುದನ್ನು ಅವನು ಗಮನಿಸಿದ. ಮಹಾರಾಜರನ್ನು ಕಂಡೊಡನೆಯೇ ಅವರಿಗೆ ಈ ಅಂಶವನ್ನು ತಿಳಿಸಿ ಅವರಿಂದ ಆ ಆಯುಧಗಳನ್ನು ಕಸಿದುಕೊಳ್ಳಬೇಕೆಂದು ಸೂಚಿಸಿದ.

ಮಹಾರಾಜರು ಭಕ್ಷಿ ಬಸಪ್ಪಾಜಿಯನ್ನು ಕರೆದು "ಇಲ್ಲೇ ಪಕ್ಕದ ದಿಣ್ಣೆಯ ಮೇಲೆ ರೈತರು ಗುಂಪು ಸೇರಿದ್ದಾರೆ. ಕತ್ತಿ ಕವಣೆ ದೊಣ್ಣೆ ಹಿಡಿದು ನಿಂತಿದ್ದಾರೆ. ಒಡನೆಯೇ ಅವರನ್ನು ನಿರಾಯುಧರನ್ನಾಗಿ ಮಾಡಿ ಎಂದು ರೆಸಿಡೆಂಟ್ ಸಾಹೇಬರು ಹೇಳುತ್ತಿದ್ದಾರೆ. ನಮ್ಮ ಜನ ಊರು ಬಿಟ್ಟು ಹೊರಗೆ ಬರಬೇಕಾದರೆ ಕಯ್ಯಲ್ಲೊಂದು ಆಯುಧ ಹಿಡಿದೇ ಬರುತ್ತಾರೆಂಬುದು ರೆಸಿಡೆಂಟರಿಗೆ ತಿಳಿಯದು. ನಮ್ಮ ಮಕ್ಕಳು ನಮ್ಮನ್ನು ಏನು ಮಾಡಿಯಾರು? ಅಂಥ ದುರುದ್ದೇಶವಿದ್ದರೆ ಅಲ್ಲೇಕೆ ಗುಂಪು ಕಟ್ಟಿಕೊಂಡು ಸುಮ್ಮನೆ ನಿಂತಿರುತ್ತಿದ್ದರು. ತಮ್ಮ ಕಷ್ಟ ಕಾರ್ಪಣ್ಯ ನಮ್ಮಲ್ಲಿ ಹೇಳಿಕೊಳ್ಳಲು ಬಂದಿರಬೇಕು. ನೀವು ಅಲ್ಲಿಗೆ ಹೋಗಿ ಅವರಿಗೆ ನಾಲ್ಕು ಸಮಾಧಾನದ ಮಾತು ಹೇಳಿ, ಅವರ ಪರವಾಗಿ ಮಾತನಾಡಲು ಹತ್ತು ಜನ ಮುಖ್ಯಸ್ಥರನ್ನು ಕರೆದುಕೊಂಡು ಬನ್ನಿ. ಅವರ ಕಷ್ಟವೇನು ವಿಚಾರಿಸೋಣ" ಎಂದರು.

ಭಕ್ಷಿ ಬಸಪ್ಪಾಜಿ ಅಲ್ಲಿಗೆ ಹೋಗಿ ಅವರೊಡನೆ ಮಾತನಾಡಿ ಹತ್ತು ಜನ ಮುಖಂಡರನ್ನು ಪ್ರಭುಗಳ ಸನ್ನಿಧಿಗೆ ಕರೆದುಕೊಂಡು ಬಂದರು.

ಆ ಹತ್ತು ಜನರಲ್ಲಿ ಒಬ್ಬೊಬ್ಬರೂ ಯಾರು ಯಾವ ಗ್ರಾಮದವರು ಎಂದು ವಿಚಾರಿಸಿದಾಗ ಒಂದು ಸ್ವಾರಸ್ಯವಾದ ಸಂಗತಿ ಹೊರಬಿತ್ತು.

ಅಲ್ಲಿಗೆ ಬಂದಿದ್ದ ಹತ್ತು ಮಂದಿ ಮುಖಂಡರಲ್ಲಿ ಕೂಸಪ್ಪ ಒಬ್ಬ. ಇವನೇನು ರೈತನಲ್ಲ. ಸರ್ಕಾರಿ ನೌಕರಿಯಲ್ಲಿದ್ದವನು. ಅಂಥವನು ಜನರಲ್ಲಿ ಅಶಾಂತಿ ಯುಂಟಾದೊಡನೆ ಅವರ ಕಷ್ಟವನ್ನು ತಿಳಿದು ಅದನ್ನು ಪರಿಹರಿಸುವುದನ್ನು ಬಿಟ್ಟು, ಅವರೊಡನೆ ಸೇರಿಕೊಂಡು ಅವರನ್ನು ಇನ್ನಷ್ಟು ಉದ್ರೇಕಗೊಳಿಸಿ 'ಜನನಾಯಕ' ಪಟ್ಟಕ್ಕೇರಿದ್ದಾನೆಂದು ತಿಳಿದುಬಂತು.

ಈ ಅಂಶ ವ್ಯಕ್ತವಾದೊಡನೆಯೇ ಪ್ರಭುಗಳು "ಕೂಸಯ್ಯ ನಮ್ಮ ನೌಕರನಾಗಿದ್ದು ಈ ರೀತಿ ವರ್ತಿಸಿದ್ದು ದೊಡ್ಡ ಅಪರಾಧ. ಅದನ್ನು ಕುರಿತು ಆಮೇಲೆ ವಿಚಾರಣೆ ನಡೆಸೋಣ. ಮೊದಲು ಅವನನ್ನು ಬಂಧನದಲ್ಲಿಡಿ" ಎಂದು ಆಜ್ಞೆ ಮಾಡಿದರು.

ಅನಂತರ ರೈತ ಮುಖಂಡರ ಕಡೆ ತಿರುಗಿ ಅವರ ಕಷ್ಟವೇನೆಂದು ವಿಚಾರಿ

ಸಿದರು. ಅಲ್ಲೂ ಅದೇ ಹಾಡು. ಕಿಕ್ಕೇರಿಯ ಅಮಿಲದಾರ ಅಲ್ಲಿನ ರೈತರಿಗೆ ಅನಾವಶ್ಯಕವಾದ ಹಿಂಸೆ ಕೊಟ್ಟನೆಂಬುದು ವಿಚಾರಣೆಯಿಂದ ದೃಢಪಟ್ಟಿತಾಗಿ, ಅವನನ್ನು ಆ ಕೆಲಸದಿಂದ ಕಿತ್ತುಹಾಕುವಂತೆ ಮಹಾಸ್ವಾಮಿಯವರು ಆಜ್ಞೆಮಾಡಿ, "ಹೊಸದಾಗಿ ನಿಯಮಿಸಲ್ಪಡುವ ಅಮಿಲದಾರ ನಿಮ್ಮ ಕಷ್ಟ ಅನಾನುಕೂಲ ಗಳನ್ನೆಲ್ಲಾ ಸರಿಯಾಗಿ ವಿಚಾರಿಸಿ ಅವನ್ನು ನಿವಾರಿಸಬೇಕೆಂದು ಆಜ್ಞೆ ಮಾಡುತ್ತೇವೆ" ಎಂದು ಮುಖಂಡರಿಗೆ ಆಶ್ವಾಸನ ಕೊಟ್ಟರು.

ರೈತರು ತಮ್ಮ ಈ ಅಹವಾಲನ್ನು ಹೇಳಿಕೊಳ್ಳಲು ದೂರದಿಂದ ನಡೆದು ಬಂದು ಒಂದು ದಿನವೆಲ್ಲಾ ತಮ್ಮ ದರ್ಶನಕ್ಕಾಗಿ ಕಾದಿದ್ದರೆಂಬುದು ತಿಳಿದೊಡ ನೆಯೇ, ಬಂದಿದ್ದವರಿಗೆಲ್ಲಾ ಹುರಿಗಡಲೆ ಬೆಲ್ಲ, ಅವಲಕ್ಕಿ ಮೊಸರು ಹಂಚುವಂತೆ ಪ್ರಭುಗಳು ಆಜ್ಞೆಮಾಡಿ, ಮುಖಂಡರಿಗೆ ಹಾಲು ಅನ್ನ ಊಟ ಹಾಕಿಸಿದರು. ತಮ್ಮ ಕಷ್ಟನಿವಾರಣೆಯಲ್ಲಿ ಮಹಾರಾಜರು ತೋರಿದ ಆಸಕ್ತಿ, ತಮ್ಮ ವಿಚಾರವಾಗಿ ಅವರು ತೋರಿದ ಆದರ ಇವು ರೈತರ ಮನಸ್ಸಿನ ಮೇಲೆ ತುಂಬ ಶುಭ ಪರಿಣಾಮ ವನ್ನುಂಟು ಮಾಡಿದುವು.

ಮಾರನೆಯ ದಿನ ಬೆಳಗ್ಗೆ ರೈತರೆಲ್ಲರೂ ಒಟ್ಟಿಗೆ ಮಹಾರಾಜರ ಸಮ್ಮುಖಕ್ಕೆ ಬಂದು ಅವರಿಗೆ ವಂದಿಸಿ, ತಾವು ಹಿಂದಿರುಗಲು ಅನುಜ್ಞೆ ಕೊಡಬೇಕೆಂದು ಬೇಡಿಕೊಂಡರು.

ಮಹಾರಾಜರು ಅವರೆಲ್ಲರಿಗೂ ವೀಳಯ ಕೊಡಿಸಿ ಅವರನ್ನು ಕಳುಹಿಸಿದರು.

§

"ರೆಸಿಡೆಂಟ್ ಸಾಹೇಬರು ನನ್ನ ಮಾತನ್ನು ಲಾಲಿಸಬೇಕು. ಹೀಗೆ ಬಿಟ್ಟರೆ ಈ ದಂಗೆ ಎಂದಿಗೂ ಹತೋಟಿಗೆ ಬರುವುದಿಲ್ಲ. ಸಂಸ್ಥಾನದ ಇತರ ಭಾಗಗಳ ಜನ ಹೇಗೋ ಏನೋ ?–ಅದು ನನಗೆ ತಿಳಿಯದು. ಆದರೆ ಈ ಭಾಗದ ಜನ ನನಗೆ ಚೆನ್ನಾಗಿ ಗೊತ್ತು. ನಾನು ಇಲ್ಲಿಯೇ ಹತ್ತಿರ ಹಳ್ಳಿಯಲ್ಲಿ ಹುಟ್ಟಿ ಬೆಳೆದವನು. ಅದೇ ಹಳ್ಳಿಯಲ್ಲಿ–ಹಿರೀಸಾವೆ ಅಂತ–ಶಾನುಭೋಗನಾಗಿದ್ದವನು. ಇಲ್ಲಿಯ ಅನುಭವ ನನಗೆ ಚೆನ್ನಾಗಿ ಇದೆ. ಬಲವಾಗಿ ಬರೆಹಾಕಿದಲ್ಲದೆ ಈ ಜನ ಹಿಡಿತಕ್ಕೆ ಸಿಕ್ಕುವುದೇಯಿಲ್ಲ. ಈ ವಿಚಾರದಲ್ಲಿ ನಿಮ್ಮ ಅನುಭವ, ಅಭಿಪ್ರಾಯ ಏನು ರೆಸಿಡೆಂಟರಿಗೆ ಸ್ಪಷ್ಟವಾಗಿ ಹೇಳಿ ವೆಂಕಟೀಅರಸಿನವರೆ."

"ಸ್ಪಷ್ಟವಾಗಿ ಬಿನ್ನವಿಸಿಕೊಳ್ಳುತ್ತೇನೆ. ಚೌಡಯ್ಯನವರು ತಮ್ಮ ಅನುಭವ

ದಿಂದ ಈ ಪ್ರಾಂತದ ವಿಚಾರ ಹೇಳಿದರು. ನಾನು ಬೂದೀಹಾಳು, ಚಿಕ್ಕನಾಯಕನ ಹಳ್ಳಿಯ ಕಡೆ ವ್ಯವಹಾರದ ಅನುಭವ ಪಡೆದು ಬಂದಿದ್ದೇನಲ್ಲ. ಅಲ್ಲೂ ಅಷ್ಟೇ. ನಾನು ಏನು ಹೇಳಿದರೂ ಅವರು ಕೇಳಲಿಲ್ಲ. ಜನ ತೀರಾ ಎದ್ವಾತದ್ವವಾಗಿ ವರ್ತಿಸಿದರು. ತಾವು ಏನು ಮಾಡಿದರೂ ದಕ್ಕಿಸಿಕೊಳ್ಳಬಹುದು ಎಂಬ ಭಾವನೆ ಅವರಿಗೆ ಬಂದು ಬಿಟ್ಟಿದೆ."

"ಹಾಗಲ್ಲದೆ ಇನ್ನೇನಾಗುತ್ತದೆ ಹೇಳಿ – ಇವತ್ತು ಬೆಳಗಿನ ವ್ಯವಹಾರ ನೋಡಿದಿರಲ್ಲ. ಮಹಾರಾಜರು ರೆಸಿಡೆಂಟರ ಮಾತನ್ನು ಕೂಡ ಲಕ್ಷ್ಯಕ್ಕೆ ತಂದು ಕೊಳ್ಳಲಿಲ್ಲ. ಶಸ್ತ್ರ ಹಿಡಿದು ದಂಗೆ ಮಾಡಲು ಬಂದಿದ್ದವರಿಂದ ಶಸ್ತ್ರ ಕಿತ್ತುಕೊಂಡು ಒದೆಯುವಂತೆ ದಂಡಿಗೆ ಹೇಳಿದ್ದರೆ, ಆಗ ಆ ಬಂಡಾಯಗಾರರಿಗೆ ಬುದ್ಧಿ ಬರುತ್ತಿತ್ತು, ಇನ್ನೊಮ್ಮೆ ಪುಂಡಾಟ ಮಾಡಿದರೆ ಬದುಕುವುದು ಕಷ್ಟ ಅಂತ. ಅದರ ಬದಲು ಮಹಾರಾಜರು ತಮ್ಮ ಭಕ್ಷಿಗಳನ್ನು ಆ ಜನಗಳ ಹತ್ತಿರಕ್ಕೆ ಕಳಿಸಿ, ಆ ಪುಂಡ ಪೋಕರಿಗಳ ಮುಖಂಡರನ್ನು ಸನ್ನಿಧಾನಕ್ಕೆ ಕರೆಸಿಕೊಂಡು ಅವರು ಹೇಳಿದಂತೆ ನಡೆದುಕೊಂಡು ಅವರಿಗೆ ಹಾಲು ಅನ್ನ ಊಟ ಮಾಡಿಸಿ, ವೀಳಯಕೊಟ್ಟು 'ದಯವಿಟ್ಟು ಹೋಗಿಬನ್ನಿ' ಎಂದು ಕೈ ಮುಗಿದು ಕೇಳಿಕೊಂಡರೆ–ಅವರು ದಾರಿಗೆ ಬರುತ್ತಾರೆಯೆ ಹೇಳಿ ? ಸ್ವಲ್ಪ ಹೆದರಿಸಿದೆ ಸಾಕು ; ತಾವು ಹೇಳಿದ್ದು ನಡೆದು ಹೋಗುತ್ತಿದೆ ಎಂದು ಕೊಬ್ಬಿ ಕೂರುತ್ತಾರೆ! ಈ ಸುದ್ದಿ ಬೇರೆ ಕಡೆಗೆ ಹಬ್ಬುತ್ತದೆ – ಸರಿ, ಅಲ್ಲಿಯವರು ಅಟ್ಟಕ್ಕೇರಿ ಕೂರುತ್ತಾರೆ. ಅದೇ ನಿಮ್ಮ ಅನುಭವ ಹೇಳುತ್ತಿದ್ದೀರಲ್ಲಾ ದಿವಾನರೇ !"

"ಚೌಡಯ್ಯನವರು ಹೇಳಿದ್ದು ನಿಜ. ರೆಸಿಡೆಂಟರು ಏನಾದರೂ ತಕ್ಕ ಏರ್ಪಾಡು ಮಾಡಬೇಕು."

"ರೆಸಿಡೆಂಟ್ ಸಾಹೇಬರು ಏನು ಮಾಡಬೇಕೊ ಅದು ಮಾಡುತ್ತಾರೆ. ಆ ವಿಚಾರ ನಾನು ಅವರಲ್ಲಿ ವಿಸ್ತಾರವಾಗಿ ಬಿನ್ನವಿಸಿಕೊಂಡಿದ್ದೇನೆ. ಆ ಮಾತು ಇರಲಿ. ಈಗ ನಾವು ಹೇಳಿದ ಅಭಿಪ್ರಾಯಗಳನ್ನೆಲ್ಲಾ ನೀವು ನಿಮ್ಮ ಮಹಾರಾಜ ರಿಗೆ ತಿಳಿಸಿ ಹೇಳಿ. ಅವರೇ ತಮ್ಮ ಕಾರ್ಯನೀತಿ ಬದಲಾಯಿಸಬಹುದು."

"ಹೇಳಿ ಆಯಿತು. ಒತ್ತಾಯ ಮಾಡಿಯೂ ಆಯಿತು."

"ಅವರ ಅಭಿಪ್ರಾಯವೇನು ?"

"ಪ್ರಜೆಗಳನ್ನು ಪ್ರೀತಿಯಿಂದ ನಡೆಸಿಕೊಳ್ಳಬೇಕು. ದಂಡಪ್ರಯೋಗ ಮಾಡುವುದು ಬೇಡ–ಎನ್ನುತ್ತಾರೆ. ಆದರೂ, ನಾನು ತುಂಬ ಒತ್ತಾಯ ಮಾಡಿದ

ಮೇಲೆ–'ನಾವು ಈ ವಿಚಾರದಲ್ಲಿ ಈಗೊಂದು ನೀತಿ ಅನುಸರಿಸಿಕೊಂಡು ಬಂದಿದ್ದೇವೆ. ಅದನ್ನು ಬದಲಾಯಿಸುವುದರ ಆವಶ್ಯಕತೆಯನ್ನು ಕುರಿತು ರೆಸಿಡೆಂಟ್ ಸಾಹೇಬರ ಅಭಿಪ್ರಾಯವೇನು ತಿಳಿದು ಬಾ. ಅನಂತರ ಆಲೋಚನೆ ಮಾಡೋಣ' ಎಂದು ಅಪ್ಪಣೆ ಕೊಡಿಸಿದರು. ಆದ್ದರಿಂದಲೇ ರೆಸಿಡೆಂಟ್ ಸಾಹೇಬರು ಏನಾದರೊಂದು ತಕ್ಕ ಏರ್ಪಾಡು ಮಾಡಬೇಕು ಎಂದು ನಾನು ಅವರಲ್ಲಿ ಬಿನ್ನವಿಸಿಕೊಂಡಿದ್ದು."

"ಸರಿ. ನಿಮ್ಮ ಅಭಿಪ್ರಾಯವೇನು ಚೌಡಯ್ಯ?"

"ಅದನ್ನು ಈಗಾಗಲೇ ರೆಸಿಡೆಂಟ್ ಸಾಹೇಬರಲ್ಲಿ ಬಿನ್ನವಿಸಿಕೊಂಡಿದ್ದೇನೆ. ಎಷ್ಟು ಬಾರಿ ಕೇಳಿದರೂ ಅಷ್ಟೇಯೇ. ನಮ್ಮ ಹಿರಿಯರು ಹೇಳುವ ಮಾತಿನಲ್ಲಿ ನನಗೆ ಪೂರ್ಣ ನಂಬಿಕೆಯಿದೆ. 'ದಂಡಂ ದಶಗುಣಂ ಭವೇತ್'–ಈ ಜನಕ್ಕೆ ಒದ್ದಲ್ಲದೆ ಬುದ್ಧಿ ಬರುವುದಿಲ್ಲ. ಮಹಾಪುಂಡರು."

"ದಿವಾನರ ಅಭಿಪ್ರಾಯ."

"ಇನ್ನೇನಿದ್ದೀತು. ಚೌಡಯ್ಯನವರ ಅಭಿಪ್ರಾಯವೇ ನನ್ನ ಅಭಿಪ್ರಾಯ."

"ಆಯಿತು, ನಾನು ಈ ವಿಚಾರವನ್ನು ಕುರಿತು ಆಲೋಚನೆ ಮಾಡಿ, ಒಂದು ನಿರ್ಣಯಕ್ಕೆ ಬಂದೊಡನೆಯೇ ಅದನ್ನು ಚೌಡಯ್ಯನವರ ಮೂಲಕ ನಿಮಗೆ ಹೇಳಿಕಳುಹಿಸುತ್ತೇನೆ. ನೀವೂ ಚೌಡಯ್ಯನವರೂ ಮಹಾರಾಜರಿಗೆ ನನ್ನ ನಿರ್ಣಯ ತಿಳಿಸುವಿರಂತೆ. ಅನಂತರ ಅವರು ಏನು ಹೇಳುತ್ತಾರೋ ನೋಡೋಣ. ಹಾಗೆ ಮಾಡಬಹುದಲ್ಲವೆ ಚೌಡಯ್ಯನವರೆ?"

"ರೆಸಿಡೆಂಟ್ ಸಾಹೇಬರು ಹೇಗೆ ಅಪ್ಪಣೆ ಕೊಟ್ಟರೆ ಹಾಗೆ!—"

"ಸರಿ. ಇನ್ನು ಒಂದು ಒಂದೂವರೆ ಗಂಟೆಯೊಳಗಾಗಿ ಚೌಡಯ್ಯನವರು ನಿಮ್ಮ ಬಿಡಾರಕ್ಕೆ ಬರುತ್ತಾರೆ ವೆಂಕಟೇ ಅರಸಿನವರೆ. ಅವರೂ ನೀವೂ ಮಹಾರಾಜರನ್ನು ಕಂಡು ಮಾತನಾಡುವುದಕ್ಕೆ ವ್ಯವಸ್ಥೆ ಮಾಡಿಕೊಂಡಿರಿ."

"ರೆಸಿಡೆಂಟರ ಅಪ್ಪಣೆ ಆದಂತೆ ನಡೆದುಕೊಳ್ಳುತ್ತೇನೆ."

"ಆಗಲಿ. ಹೋಗಿಬನ್ನಿ."

§

" ಈ ವಿಚಾರದಲ್ಲಿ ನಮ್ಮ ಅಭಿಪ್ರಾಯವೇನೆಂಬುದನ್ನು ನೀವು ರೆಸಿಡೆಂಟ್ ಸಾಹೇಬರಿಗೆ ಸ್ಪಷ್ಟವಾಗಿ ತಿಳಿಸಲಿಲ್ಲವೆ ದಿವಾನರೆ ?"

" ತಿಳಿಸಿದೆ ಮಹಾಪ್ರಭು. ಆದರೆ ಅವರು—"

" ನಮ್ಮ ಅಭಿಪ್ರಾಯಕ್ಕೆ ಸಮ್ಮತಿಸಲಿಲ್ಲ ?—"

" ಇಲ್ಲ."

" ನಿಮಗೂ ನಮ್ಮ ಅಭಿಪ್ರಾಯ ರುಚಿಸಿರಲಿಲ್ಲ."

" ಸನ್ನಿಧಾನದ ಅಪ್ಪಣೆಯಾದಂತೆ ನಾನು ನಡೆದುಕೊಳ್ಳಲು ಸಿದ್ಧನಾಗಿದ್ದೇನೆ. ಪ್ರಭುಗಳ ಅಪೇಕ್ಷೆಯಂತೆಯೇ ಅಲ್ಲವೆ ನಾನು ರೆಸಿಡೆಂಟ್ ಸಾಹೇಬರನ್ನು ನೋಡಿದ್ದು. – ಸನ್ನಿಧಾನದ ಅಭಿಮತ ಏನೆಂಬುದನ್ನು ಅವರಿಗೆ ತಿಳಿಸಿದೆ. – ಆದರೂ—"

" ಸರಿ ; ನಮ್ಮ ಪ್ರಜೆಗಳನ್ನು ಸಾಮದಾನಗಳಿಂದ ಸರಿಪಡಿಸಬಹುದೆಂಬುದರಲ್ಲಿ ನಮಗೆ ಯಾವ ಅನುಮಾನವೂ ಇಲ್ಲ. ರೆಸಿಡೆಂಟರು ದಂಡವೇ ಆವಶ್ಯಕ ಎನ್ನುತ್ತಾರೆ. – ಈ ವಿಚಾರದಲ್ಲಿ ಕೊನೆಯ ನಿರ್ಣಯ ಮಾಡುವುದಕ್ಕೆ ಮುಂಚೆ, ನಮ್ಮ ಆಪ್ತರೊಡನೆ ಸಮಾಲೋಚನೆ ಮಾಡುವುದು ಉಚಿತವೆಂದು ನಮಗೆ ತೋರುತ್ತದೆ. – ಸರಿ ತಾನೆ."

" ಪ್ರಭುಗಳು ಅಪೇಕ್ಷಿಸಿದಂತೆ ಆಗಬಹುದು."

" ಹಾಗಾದರೆ ನಮ್ಮ ಜೊತೆಯಲ್ಲಿ ಬಂದಿರುವ ಭಕ್ಷಿಗಳು, ಮೂಸಾಹೇಬರು, ಮಾಜಿ ದಿವಾನರು ಎಲ್ಲರನ್ನೂ ಕರೆಸಿ, ಸಭೆ ಸೇರಿಸಿ. ಇದು ಒಳ ಓಲಗದಂತೆ ನಡೆಯಲಿ."

" ಅಪ್ಪಣೆ ; ಇನ್ನೊಂದು ಬಿನ್ನಹ. ಈ ವಿಚಾರದಲ್ಲಿ ರೆಸಿಡೆಂಟರ ಅಭಿಪ್ರಾಯವನ್ನು ನಮಗೆ ತಿಳಿಸಲು ಬಂದ ಚೌಡಯ್ಯನವರೂ ಇಲ್ಲೇ ಇದ್ದಾರೆ. ಅವರೂ ಸಭೆಯುಲ್ಲಿ ಇದ್ದರೆ—"

" ನಮ್ಮಿಂದ ಭಿನ್ನವಾದ ಅಭಿಪ್ರಾಯವುಳ್ಳವರ ದೃಷ್ಟಿಯೇನು ಎಂಬುದನ್ನು ಸಭೆಯ ಮುಂದೆ ಒಕ್ಕಣಿಸುವುದಕ್ಕೆ ಅನುಕೂಲವಾಗುತ್ತದೆ."

" ಹೌದು ಮಹಾಪ್ರಭು."

" ನಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿ ನಮ್ಮ ದಿವಾನರು ಮಾತನಾಡಬೇಕಾದ ಶ್ರಮವೂ ತಪ್ಪುತ್ತದೆ !"

"ಪ್ರಭುಗಳು ನನ್ನಲ್ಲಿ ತಪ್ಪೆಣಿಸಬಾರದು. ನನಗೆ ಸರಿತೋರಿದ್ದನ್ನು ಬಿನ್ನವಿಸಿಕೊಳ್ಳುತ್ತಿದ್ದೇನೆ. ಕ್ಷಮಿಸಿ ಕಾಪಾಡಬೇಕು."

"ಆಗಲಿ. ಸಭೆಗೆ ಬರುವಂತೆ ಚೌಡಯ್ಯನವರಿಗೂ ಹೇಳಿಕಳುಹಿಸಿ."

"ಅಪ್ಪಣೆ."

ಒಂದೆರಡು ಗಂಟೆಗಳ ಅನಂತರ ಸಭೆ ಸೇರಿತು. ದಿವಾನ ವೆಂಕಟೇಅರಸಿನವರು ತಾವು ಸಂಚರಿಸಿ ಬಂದಿದ್ದ ಬೂದಿಹಾಳು, ಚಿಕ್ಕನಾಯಕನಹಳ್ಳಿ ಪ್ರದೇಶದಲ್ಲಿ ಬಂಡಾಯಗಾರರು ಮಿತಿಮೀರಿ ವರ್ತಿಸುತ್ತಿರುವುದನ್ನು ವಿವರವಾಗಿ ಹೇಳಿ, "ಈ ಪ್ರಾಂತದ ಸ್ಥಿತಿಗತಿಗಳು ನನಗಿಂತ ನಿಮಗೆ ಚೆನ್ನಾಗಿ ಗೊತ್ತಿರಬಹುದು. ಏಕೆಂದರೆ ನೀವೆಲ್ಲಾ ಇತ್ತೀಚೆಗೆ ಈ ಪ್ರದೇಶದಲ್ಲಿ ಪ್ರವಾಸ ಮಾಡಿದ್ದೀರಿ. ಮಹಾಸ್ವಾಮಿಯವರ ಖಾಸಾಸವಾರಿ ಇಲ್ಲಿಗೆ ಚಿತ್ತೈಸಿರುವುದರಿಂದ, ಅದರ ಪ್ರಭಾವದಿಂದಾಗಿ, ಇಲ್ಲಿಯ ಜನ ತಕ್ಕಮಟ್ಟಿನ ಶಾಂತತೆಯಿಂದ ವರ್ತಿಸುತ್ತಿದ್ದಾರೆಂಬುದು ನಿಜ. ಆದರೆ ಸವಾರಿ ಇಲ್ಲಿಂದ ಮುಂದಕ್ಕೆ ಚಿತ್ತೈಸಿದ ಮೇಲೆ ಏನಾಗುತ್ತದೆಯೋ ಹೇಳುವುದು ನನಗಂತೂ ಸಾಧ್ಯವಿಲ್ಲ. ಅದು ಹೇಗಾದರೂ ಇರಲಿ. ಅಶಾಂತಿ, ಬಂಡಾಯಗಳು ದೇಶದ ಎಲ್ಲ ಭಾಗಗಳಿಗೂ ಹಬ್ಬುತ್ತಿದೆ. ಎಲ್ಲ ಕಡೆಗೂ ಖಾಸಾ ಸವಾರಿಯೇ ಚಿತ್ತೈಸಿ ಜನರನ್ನು ಸಮಾಧಾನಗೊಳಿಸುವುದು ಸಾಧ್ಯವೆ ? ಸಂಚಾರ ಸೌಲಭ್ಯ ಏನೇನೂ ಇಲ್ಲದಿರುವ ಮಲೆನಾಡಿನ ಪ್ರದೇಶದಲ್ಲಿ ಸವಾರಿ ಪರಿವಾರ ಸಮೇತ ಸಂಚಾರ ಮಾಡುವುದು ತುಂಬ ಕಷ್ಟಸಾಧ್ಯ. ಪ್ರಜೆಗಳ ವಿಚಾರದಲ್ಲಿ ನನಗೂ ಪ್ರೀತಿಯಿದೆ. ಆದರೆ ಜನ ನಮ್ಮ ಪ್ರೀತಿಯನ್ನು ಅರ್ಥಮಾಡಿಕೊಂಡು ನಮ್ಮ ಮಾತಿನಂತೆ ನಡೆಯುತ್ತಾರೆಯೆ, ನಡೆಯಲು ಸಿದ್ಧರಾಗಿದ್ದಾರೆಯೆ ಎಂಬುದನ್ನು ನಾವು ಆಲೋಚಿಸಬೇಕಾಗಿದೆ. ನನ್ನ ಅನುಭವದಿಂದ ಹೇಳುವುದಾದರೆ ಅನೇಕ ಕಡೆಗಳಲ್ಲಿ ಜನ ನಮ್ಮ ಪ್ರೀತಿಯನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ಕೆಲವು ಕಡೆಗಳಲ್ಲಂತೂ ಅದು ನಮ್ಮ ದೌರ್ಬಲ್ಯದ ಲಕ್ಷಣವೆಂದೇ ತಿಳಿದುಕೊಂಡಿದ್ದಾರೆ. ಇಂಥ ಜನರಿಗೆ ಸಾಮ ಅರ್ಥವಾಗುವುದಿಲ್ಲ. ದಾನ ಇವರ ಕೊಬ್ಬನ್ನು ಹೆಚ್ಚಿಸುತ್ತದೆ. ಇವರನ್ನು ಬಗ್ಗಿಸಲು ದಂಡವೇ ತಕ್ಕ ಸಾಧನ ಎಂದು ನಾನು ಮಹಾಸ್ವಾಮಿಯವರಲ್ಲಿ ಬಿನ್ನವಿಸಿಕೊಂಡಿದ್ದೇನೆ. ಈ ಸಭೆಗೆ ದಯಮಾಡಿಸಿರುವ ತಾವೆಲ್ಲರೂ ಆಡಳಿತ ವಿಚಾರಗಳಲ್ಲಿ ಚೆನ್ನಾದ ತಿಳುವಳಿಕೆಯುಳ್ಳವರು. ಕಾರ್ಯಕುಶಲರು. ಕೆಲವರಂತೂ ಅನುಭವಸ್ಥರಾದ ಹಿರಿಯರು. ತಾವೆಲ್ಲರೂ ಈ ಮಂತ್ರಾಲೋಚನೆಯಲ್ಲಿ ಭಾಗವಹಿಸಿ ಮುಂದೆ

ಯಾವ ರೀತಿ ವ್ಯವಸ್ಥೆಯಾದರೆ ಒಳ್ಳೆಯದೆಂಬುದನ್ನು ಸನ್ನಿಧಾನದಲ್ಲಿ ಬಿನ್ನವಿಸಿಕೊಳ್ಳಬೇಕು" ಎಂದು ಪ್ರಭುಗಳಿಗೂ ಸಭೆಗೂ ನಮಸ್ಕರಿಸಿ ಕುಳಿತುಕೊಂಡರು.

ಅನಂತರ ತೋಷೀಖಾನೆ ನಂಜಪ್ಪನವರು ಈ ವಿಚಾರದಲ್ಲಿ ಮಹಾಸ್ವಾಮಿಯವರ ಅಭಿಪ್ರಾಯವೇನೆಂಬುದನ್ನು ವಿವರಿಸುತ್ತಾ "ಮಹಾಸ್ವಾಮಿಯವರು ಈ ವಿಚಾರವಾಗಿ ದೀರ್ಘವಾಗಿ ಆಲೋಚನೆ ಮಾಡಿದ್ದಾರೆ. ಸಾಮದಾನಗಳು ಫಲಕಾರಿಯಾಗಲಿಲ್ಲವೆಂದು ತೋರಿದ ಮೇಲೆ ದಂಡಪ್ರಯೋಗ ಮಾಡಬಹುದೆಂಬುದು ಸನ್ನಿಧಾನದ ಅಭಿಪ್ರಾಯವಾಗಿದೆ. ಪ್ರಜೆಗಳು ರಾಜರ ಮಕ್ಕಳಂತೆ. ಶಿಕ್ಷೆ ಆವಶ್ಯಕವೆಂದು ಕಂಡಾಗ ಎಷ್ಟು ಬೇಕೋ ಅಷ್ಟು ಶಿಕ್ಷೆ ಮಾಡಿದರೆ ಸಾಕು. ಅನಾವಶ್ಯಕವಾಗಿ ಪ್ರಜೆಗಳನ್ನು ಶಿಕ್ಷಿಸುವುದು ಬೇಡ – ಎಂಬುದು ಪ್ರಭುಗಳ ಅಭಿಪ್ರಾಯ. ಈ ಅಭಿಪ್ರಾಯ ತುಂಬ ಸಾಧುವಾದದ್ದು. ಅನಾವಶ್ಯಕವಾಗಿ ಜನರಿಗೆ ಶಿಕ್ಷೆ ವಿಧಿಸಿ ಅವರ ವೈರ ಕಟ್ಟಿಕೊಳ್ಳುವುದು ಬೇಡ ಎಂಬುದು ನನ್ನ ಅಭಿಪ್ರಾಯ ಕೂಡ" ಎಂದರು.

ಈ ವಿಚಾರವಾಗಿ ಚರ್ಚೆ ಸುಮಾರು ಎರಡು ಗಂಟೆಗಳ ಕಾಲ ನಡೆಯಿತು.

ಕೊನೆಯಲ್ಲಿ ಚೌಡಯ್ಯನವರೆದ್ದು—"ಈ ಗಲಭೆಗಳನ್ನು ಆದಷ್ಟು ತೀವ್ರವಾಗಿ ಅಡಗಿಸುವುದಕ್ಕೆ ಸಹಾಯಕವಾದ ಕಾರ್ಯಕ್ರಮ ಒಡನೆಯೇ ಆರಂಭವಾಗಬೇಕೆಂಬುದು ರೆಸಿಡೆಂಟ್ ಸಾಹೇಬರ ಅಪೇಕ್ಷೆ. ಹಾಗೆ ಮಾಡದೆ ಗಲಭೆ ಬೆಳೆಯಲು ಬಿಟ್ಟರೆ ಅದು ಕಂಪನಿ ಸೀಮೆಗೂ ಹಬ್ಬಬಹುದೆಂದು ಅವರು ಭಾವಿಸುತ್ತಾರೆ. ಮಹಾರಾಜರವರು ಅಂಥ ಪರಿಸ್ಥಿತಿಯುಂಟಾಗಲು ಅವಕಾಶ ಕೊಡುವುದಿಲ್ಲವೆಂದು ರೆಸಿಡೆಂಟರು ನಂಬಿದ್ದಾರೆ. ಇಂದಿನ ಪರಿಸ್ಥಿತಿಯ ಪೂರ್ಣ ಪರಿಚಯ ರೆಸಿಡೆಂಟ್ ಸಾಹೇಬರಿಗಿದೆ. ಈ ವಿಚಾರದಲ್ಲಿ ಮಹಾರಾಜರ ಅಭಿಪ್ರಾಯಗಳೇನೆಂಬುದನ್ನೂ ತಿಳಿದಿದ್ದಾರೆ. ಆ ವಿಚಾರವಾಗಿ ಅವರು ದೀರ್ಘವಾಗಿ ಆಲೋಚಿಸಿದ್ದಾರೆ. ಅವರ ಅಭಿಪ್ರಾಯದಲ್ಲಿ ಶ್ರೀಮನ್ಮಹಾರಾಜರವರದು ತೀರಾ ಮೃದು ಹೃದಯ; ದಂಗೆಯನ್ನು ಅಡಗಿಸಬೇಕಾದರೆ ಇಂಥ ಹೆಂಗರುಳಿನಿಂದ ಪ್ರಯೋಜನವಿಲ್ಲ. ಆದ್ದರಿಂದ ಇಂದಿನ ಪರಿಸ್ಥಿತಿಯಲ್ಲಿ ಮಹಾರಾಜರವರು ಈ ದಂಗೆಯನ್ನಡಗಿಸುವ ವ್ಯವಹಾರವನ್ನು ಬೇರೆಯವರಿಗೆ ಬಿಟ್ಟು ತಾವು ಸುಮ್ಮನಿರುವುದು ಒಳಿತೆಂದು ಅವರ ಸೂಚನೆ. ಮಹಾರಾಜರವರಿಗೆ ಒಪ್ಪಿಗೆಯಾದರೆ ಅವರು ಈ ವ್ಯವಹಾರವನ್ನು ಪೂರ್ಣವಾಗಿ ತಮ್ಮ ದಿವಾನರಿಗೆ ವಹಿಸಬಹುದು. ಈ ಸಂಬಂಧದಲ್ಲಿ ರೆಸಿಡೆಂಟ್ ಸಾಹೇಬರಿಂದ ಏನೇನು ಸಹಾಯವಾಗಬಹುದು

ಅದೆಲ್ಲ ದಿವಾನರಿಗೆ ದೊರೆಯುತ್ತದೆಯೆಂದು ನಾನು ನಂಬಿಕೆ ಕೊಡಬಲ್ಲೆ. ಮಹಾರಾಜರವರು ಈ ಸಲಹೆಯನ್ನೂ ಆಲೋಚಿಸಬಹುದು—" ಎಂದರು.

ಒಡನೆಯೇ ನಿವೃತ್ತ ದಿವಾನ ಸವಾರ್ ಕಛೇರಿ ಭಕ್ಷಿ ರಾಮರಾಯರು ಎದ್ದು ಸನ್ನಿಧಾನಕ್ಕೆ ನಮಸ್ಕರಿಸಿ "ಪ್ರಭು, ಸುಮಾರು ಎರಡು ಗಂಟೆಗಳ ಕಾಲ ನಡೆದ ಮಾತುಕತೆಗಳನ್ನೆಲ್ಲಾ ಕೇಳಿದ ಮೇಲೆ ನನಗೆ ಸರಿಯೆಂದು ತೋರಿದ್ದನ್ನು ಬಿನ್ನವಿಸಿಕೊಳ್ಳಬೇಕೆಂದು ಎದ್ದು ನಿಂತಿದ್ದೇನೆ. ಪ್ರಭುಗಳು ಶಾಂತಚಿತ್ತರಾಗಿ ಲಾಲಿಸಬೇಕು.

"ಪ್ರಭುಗಳ ಪ್ರಜಾಪ್ರೇಮ ಸರ್ವವಿದಿತವಾದದ್ದು. ಸಂಸ್ಥಾನದ ಪ್ರಜೆಗಳಿಗೆ ಪ್ರಭುಗಳ ಬಗ್ಗೆ ಅಪಾರ ಪ್ರೀತಿ ಗೌರವಗಳಿವೆಯೆಂಬುದು ನಮಗೆಲ್ಲಾ ತಿಳಿದಿದೆ; ನಾವೆಲ್ಲಾ ಅದನ್ನು ಇಲ್ಲಿಯೇ ಕಣ್ಣಾರೆ ಕಂಡೂ ಇದ್ದೇವೆ. ಈ ವಿಚಾರದಲ್ಲಿ ನಮ್ಮಲ್ಲಿ ಯಾರಿಗೂ ಯಾವ ವಿಧವಾದ ಅನುಮಾನವೂ ಇಲ್ಲ.

"ಆದರೆ, ಇಂದಿನ ಪರಿಸ್ಥಿತಿ ಏನೆಂಬುದು ನಮಗೆಲ್ಲಾ ಈಗ ಸ್ಪಷ್ಟವಾಗಿ ಗೊತ್ತಾಗಿದೆ. ಈ ಪರಿಸ್ಥಿತಿಯಲ್ಲಿ ಲಾಭದಾಯಕವಾದ ಕಾರ್ಯಕ್ರಮ ಯಾವುದು ಎಂಬುದು ಮುಖ್ಯವಾದ ಪ್ರಶ್ನೆ. ನಾನು ಸೇನೆಯಲ್ಲಿಯೂ ಪಳಗಿದವನು; ರಾಜ್ಯಾಡಳಿತವನ್ನೂ ನೋಡಿಕೊಂಡವನು. ಇವೆರಡು ಅನುಭವದಿಂದ ಒಂದು ಮಾತು ಹೇಳುತ್ತೇನೆ. ರೆಸಿಡೆಂಟ್ ಸಾಹೇಬರ ಅಭಿಪ್ರಾಯ ಸರಿಯಾಗಿದೆ. ಮಹಾಪ್ರಭುಗಳು ಈ ವ್ಯವಹಾರವನ್ನು ಪೂರ್ಣವಾಗಿ ದಿವಾನರಿಗೆ ವಹಿಸಬಹುದು. ಅವರು ರೆಸಿಡೆಂಟ್ ಸಾಹೇಬರ ಸಲಹೆಯಂತೆ, ಅವರಿಂದ ದೊರೆಯಬಹುದಾದ ಸಹಾಯವನ್ನೂ ತೆಗೆದುಕೊಂಡು ದಂಗೆಯನ್ನಡಗಿಸಲಿ. ದಂಗೆ ಪ್ರಬಲವಾಗುತ್ತಿರುವ ಸ್ಥಳಗಳಿಗೆ ಖಾಸಾಸವಾರಿ ದಯಮಾಡಿಸುವುದನ್ನು ಹೋರಾಟದ ವ್ಯವಹಾರ ಬಲ್ಲ ನಾನು ಒಪ್ಪಲಾರೆ. ದಂಗೆ ಅಡಗುವವರೆಗೆ ಪ್ರಭುಗಳು ರಾಜಧಾನಿಯಲ್ಲಿರುವುದೇ ಒಳ್ಳೆಯದೆಂದು ನನ್ನ ಭಾವನೆ. ಪ್ರಭುಗಳು ನನ್ನ ಬಿನ್ನಹವನ್ನು ನಡೆಸಿಕೊಡಬೇಕು ಎಂದು ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತೇನೆ" ಎಂದು ಸನ್ನಿಧಾನಕ್ಕೆ ಮತ್ತೆ ನಮಸ್ಕರಿಸಿ ಕುಳಿತರು.

ಅದುವರೆಗೆ ನಡೆದ ವಾದ ವಿವಾದಗಳನ್ನೆಲ್ಲಾ ಕೇಳುತ್ತಿದ್ದ ಮಹಾಸ್ವಾಮಿಯವರು ಕೊನೆಯಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು :

"ನಮ್ಮ ಹಿತೈಷಿಗಳಾದ ನೀವೆಲ್ಲರೂ ಸುಸ್ಪಷ್ಟವಾಗಿ ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದು ಸಂತೋಷ. ಈ ವಿಚಾರದಲ್ಲಿ ನಮ್ಮ ಅಭಿಪ್ರಾಯ

ವೇನೆಂಬುದೂ ನಿಮಗೆ ವಿವರವಾಗಿ ತಿಳಿದಿದೆ. ನಾವು ಗ್ರಹಿಸಿದಂತೆ ಈ ಸಭೆಯ ಅಭಿಪ್ರಾಯ – ಇಂದಿನ ಸ್ಥಿತಿಯಲ್ಲಿ ಸಾಮದಾನಗಳಿಗಿಂತ ಯಾವುದಾದರೂ ರೀತಿಯ ದಂಡೋಪಾಯವನ್ನನುಸರಿಸುವುದೇ ಒಳ್ಳೆಯದು ಎಂದಿರುವಂತಿದೆ. ಸಾಮದಾನಗಳು ವ್ಯರ್ಥವಾದಲ್ಲಿ ದಂಡಪ್ರಯೋಗ ಇದ್ದೇ ಇದೆ. ಅದನ್ನನುಸರಿಸೋಣ. ಆದರೆ ಅದಕ್ಕೆ ಮೊದಲು ದಂಡ ಪ್ರಯೋಗ ಅನಿವಾರ್ಯವಾಗಿದೆಯೆಂದು ನಮ್ಮ ಮನಸ್ಸಿಗೆ ಖಚಿತಮಾಡಿಕೊಳ್ಳೋಣ. ನಮ್ಮ ದಿವಾನರು ಮತ್ತು ಅವರಂತೆ ಅಭಿಪ್ರಾಯವುಳ್ಳವರು ಇಂದಿನ ಪರಿಸ್ಥಿತಿಯನ್ನು ಕುರಿತು ಆಡಿದ್ದನ್ನೆಲ್ಲ ಕೇಳಿದಮೇಲೆ ಕೂಡ, ದಂಡಪ್ರಯೋಗವೊಂದೇ ತಕ್ಕಸಾಧನವಾಗುವಂಥ ಪರಿಸ್ಥಿತಿಯೊದಗಿದೆಯೆಂದು ನಮಗೆ ತೋರುವುದಿಲ್ಲ. ಆಡಳಿತದಲ್ಲಿ ಹಲವಾರು ದೋಷಗಳು ತಲೆಹಾಕಿವೆಯೆಂಬುದು ಈಗಾಗಲೇ ಸ್ಪಷ್ಟವಾಗಿದೆ. ಆ ದೋಷಗಳು ಸರಿಪಡಿಸುವಂತೆ ನಮ್ಮನ್ನು ಒತ್ತಾಯಪಡಿಸುವುದಕ್ಕಾಗಿ ನಮ್ಮ ಪ್ರಜೆಗಳು ಹೊಯ್ಲೆಬ್ಬಿಸಿದ್ದರೆ, ಆ ದೋಷಗಳನ್ನು ಸರಿಪಡಿಸಲು ನಾವು ಮೊದಲು ಪ್ರಯತ್ನ ಪಡಬೇಕೆ ಹೊರತು, ಆರಂಭದಲ್ಲೇ ದಂಡಪ್ರಯೋಗದಲ್ಲಿ ತೊಡಗಬಾರದು. ಅದರಿಂದ ಪ್ರಜೆಗಳನ್ನು ಕೆಣಕಿ ರೊಚ್ಚಿಗೆಬ್ಬಿಸಿದಂತಾಗುವುದೇ ಹೊರತು ಅವರನ್ನು ಸಮಾಧಾನಪಡಿಸಿದಂತಾಗುವುದಿಲ್ಲವೆಂದು ನಮಗೆ ತೋರುತ್ತದೆ. ಆದ್ದರಿಂದ ಒಡನೆಯೇ ದಂಡ ಪ್ರಯೋಗ ಮಾಡುವುದು ಹಿತಕರವಲ್ಲವೆಂದು ತೋರುತ್ತದೆ.—ಹೀಗೆ ಮಾಡೋಣ : ನಮ್ಮ ದಿವಾನರು ಮತ್ತು ಮೂರು ಮಂದಿ ಮುಸಾಹೇಬರು – ಅದಾಲತ್ ನ್ಯಾಯಾಲಯದ ಭಕ್ಷಿಗಳಾಗಿದ್ದ ವ್ಯಾಸರಾಯರು, ಮಲ್ಲರಾಜ ಅರಸರು, ಸೀಬಯ್ಯನವರು – ಈ ನಾಲ್ಕುಮಂದಿ ಅಶಾಂತರಾಗಿರುವ ರೈತರನ್ನು ವಿಚಾರಿಸಿ ಅವರ ಅಶಾಂತಿಗೆ ಕಾರಣಗಳೇನೆಂಬುದನ್ನು ನಿರ್ಣಯಿಸಲಿ. ನಾವೂ ಇವರ ಜೊತೆಯಲ್ಲಿಯೇ ಇರುತ್ತೇವೆ. ಅಶಾಂತಿಯ ಕಾರಣಗಳನ್ನು ಪರಿಹರಿಸಿ ಜನರನ್ನು ಸಮಾಧಾನಪಡಿಸಲು ಪ್ರಯತ್ನಿಸೋಣ. ಈ ಪ್ರಯತ್ನ ಫಲಿಸದೆ ಇದ್ದರೆ, ದಂಡ ಪ್ರಯೋಗವಿದ್ದೇಯಿದೆ. ನಾವು ಜನರ ಕಷ್ಟ, ಅವರಿಗಾಗಿರುವ ಅನ್ಯಾಯ ಇವನ್ನು ಪರಿಹರಿಸಿದರೆ, ಇಂಥ ದಂಡಪ್ರಯೋಗಕ್ಕೆ ಅವಕಾಶವಿರುವುದೇ ಇಲ್ಲವೆಂದು ತೋರುತ್ತದೆ."

ಮಹಾಸ್ವಾಮಿಯವರು ಈ ರೀತಿ ಅಪ್ಪಣೆ ಕೊಡಿಸಿದ ಮೇಲೆ ಮತ್ತಾರೂ ಮಾತನಾಡಲಿಲ್ಲ. ಪ್ರಭುಗಳ ಮಾತು ಮುಗಿದೊಡನೆಯೇ ದಿವಾನ ವೆಂಕಟೇಅರಸಿನವರು ಚೌಡಯ್ಯನ ಮುಖವನ್ನು ಚೌಡಯ್ಯ ವೆಂಕಟೇಅರಸಿನವರ ಮುಖ

ವನ್ನೂ ಅರ್ಥಪೂರ್ಣವಾಗಿ ನೋಡಿದರು. ಅವರಿಬ್ಬರಲ್ಲದೆ, ಸಭೆಯಲ್ಲಿದ್ದ ಇನ್ನು ಕೆಲವರಿಗೆ ಕೂಡ ಮಹಾಸ್ವಾಮಿಗಳವರ ಈ ನಿರ್ಣಯ ಒಪ್ಪಿಗೆಯಾಗಿಲ್ಲ. ಮಾತಿನಿಂದಲ್ಲದಿದ್ದರೂ ಮುಖಚರ್ಯೆಯಿಂದವರು ಅದನ್ನು ಸ್ಪಷ್ಟಪಡಿಸಿದರು.

§

"ರೆಸಿಡೆಂಟ್ ಸಾಹೇಬರಿಂದ ಮಹಾಸ್ವಾಮಿಯವರಿಗೆ ಒಂದು ಆತುರದ ಪತ್ರ ಬಂದಿದೆ. ಅದಕ್ಕೆ ಮಹಾಸ್ವಾಮಿಯವರು ದಯಪಾಲಿಸಬಹುದಾದ ಉತ್ತರವನ್ನೊಯ್ಯುವುದಕ್ಕಾಗಿ ಆ ಪತ್ರ ತಂದ ಹರಿಕಾರ ಕಾದುನಿಂತಿದ್ದಾನೆ."

"ಆ ಪತ್ರ ಓದಿಹೇಳು ನರಸಪ್ಪ. – ಅಂದಹಾಗೆ ಈ ದಿನ ಬೆಳಗ್ಗೆಯಿಂದ ನಮ್ಮ ದಿವಾನರು ಈ ಕಡೆಗೆ ಬಂದೇ ಇಲ್ಲವಲ್ಲ."

"ಬೆಳಗ್ಗೆ ಅಷ್ಟು ಹೊತ್ತಿಗೇ ಅವರು ರೆಸಿಡೆಂಟರ ಬಿಡಾರಕ್ಕೆ ಹೋದರು. ಇನ್ನೂ ಹಿಂದಿರುಗಿಲ್ಲವೆಂದು ಕಾಣುತ್ತದೆ."

"ಅಲ್ಲೇನು ಕೆಲಸವಿತ್ತು ಅವರಿಗೆ ?"

"ತಿಳಿಯದು. ಬೆಳಕುಹರಿಯುವಹೊತ್ತಿಗೆ ರೆಸಿಡೆಂಟರ ಬಿಡಾರದಿಂದ ಹರಿಕಾರ ಬಂದು ಅವರನ್ನು ಕರೆದುಕೊಂಡು ಹೋದುದನ್ನು ನಾನು ಕಂಡೆ. ಅಷ್ಟೆಯೆ."

"ಸರಿ, ಪತ್ರವೇನು ಓದಿ."

"—ನೆನ್ನೆಯ ದಿವಸ ತಾವು ನಡೆಸಿದ ಮಂತ್ರಾಲೋಚನ ಸಭೆಯಲ್ಲಿ ಜರುಗಿದ ಚರ್ಚೆ ಮತ್ತು ಕೊನೆಯಲ್ಲಿ ತಾವು ಕೊಟ್ಟ ನಿರ್ಣಯ ಇವುಗಳ ವಿವರ, ತಮ್ಮ ಆಹ್ವಾನದಂತೆ ಆ ಸಭೆಯಲ್ಲಿ ಭಾಗವಹಿಸಿದ ನಮ್ಮ ಕಛೇರಿ ಶಿರಸ್ತೇದಾರ್ ಚೌಡಯ್ಯನವರಿಂದ ನಮಗೆ ತಿಳಿಯಿತು. ನಾವು ಅವರ ಮೂಲಕ ಹೇಳಿಕಳುಹಿಸಿದ್ದ ಸಲಹೆಗಳು ತಮಗೆ ಒಪ್ಪಿಗೆಯಾಗಲಿಲ್ಲವೆಂಬುದೂ ಗೊತ್ತಾಯಿತು. ನನಗೆ ಈ ವಿಚಾರ ತಿಳಿದೊಡನೆಯೇ ನಿಮ್ಮ ದಿವಾನರಿಗೆ ಹೇಳಿಕಳುಹಿಸಿ, ಸಭೆಯಲ್ಲಿ ನಡೆದ ಚರ್ಚೆ, ತಾವು ಹೇಳಿದ ನಿರ್ಣಯಗಳನ್ನು ಕುರಿತು ಅವರೊಡನೆಯೂ ಮಾತನಾಡಿ ನಮ್ಮ ಶಿರಸ್ತೇದಾರರು ಹೇಳಿದ್ದು ಸರಿಯೆಂದು ಖಚಿತಮಾಡಿಕೊಂಡೆ.

"ಈಗ ಸಂಸ್ಥಾನದಲ್ಲಿ ಹಬ್ಬುತ್ತಿರುವ ಬಂಡಾಯದ ವಿಚಾರವಾಗಿ ತಮ್ಮ ತಿಳುವಳಿಕೆ ಸರಿಯಾದದ್ದೆಂದು ನನಗೆ ತೋರುವುದಿಲ್ಲ. ಅಂತೆಯೇ ಆ ತಪ್ಪು

ಗ್ರಹಿಕೆಯ ಮೇಲೆ ತಾವು ಕೈಗೊಂಡ ನಿರ್ಣಯ ಕೂಡ ಸರಿಯಲ್ಲವೆಂದು ನನ್ನ ಭಾವನೆ.

"ನಾನು ಗ್ರಹಿಸಿರುವಂತೆ, ಬಂಡಾಯ ನಮ್ಮ ಕೈಮೀರುವಂಥ ಸ್ಥಿತಿಯನ್ನು ಮುಟ್ಟುತ್ತಿದೆ. ಇಂಥ ಸ್ಥಿತಿಯಲ್ಲಿ ನಾವು ಯಾವ ವಿಧವಾದ ಆಲಸ್ಯಕ್ಕೂ ಎಡೆಗೊಡಕೂಡದು. ಬಂಡಾಯವನ್ನು ಭಗ್ನಮಾಡಲು ಒಡನೆಯೇ ತೀವ್ರವಾದ ಪ್ರಯತ್ನಗಳನ್ನು ಕೈಗೊಳ್ಳಬೇಕು ಎಂಬುದು ನನ್ನ ಅಭಿಪ್ರಾಯ.

"ತಾವು ಸೂಚಿಸಿರುವ ವಿಚಾರಣಾ ಮಂಡಲಿ ಇಂದಿನ ಜರೂರು ಪರಿಸ್ಥಿತಿಯಲ್ಲಿ ಯಶಸ್ವಿಯಾಗಿ ಕೆಲಸ ಮಾಡಬಹುದೆಂಬ ನಂಬಿಕೆ ನನಗಿಲ್ಲ. ಅವರಲ್ಲಿ ಒಬ್ಬೊಬ್ಬರೂ ತಮಗೆ ತೋರಿದಂತೆ ಮಾತನಾಡುತ್ತಾ ದಿನಗಟ್ಟಲೆ ವಾರಗಟ್ಟಲೆ ನಿಧಾನವಾಗಿ ವಿಚಾರಣೆ ಮಾಡುತ್ತಾ ಕುಳಿತರೆ, ಮನೆಗೆ ಬೆಂಕಿ ಹೊತ್ತಿರುವಾಗ, ಅದನ್ನಾರಿಸಲು ನೀರಿಗಾಗಿ ಬಾವಿ ತೋಡಲು ಮೂರು ಮಂದಿ ಮುದುಕರನ್ನು ನಿಯಮಿಸಿದಂತಾಗುತ್ತದೆಯೆಂದೆನಿಸುತ್ತದೆ ನನಗೆ.

"ಆದ್ದರಿಂದ ಬೇರೆ ವ್ಯವಸ್ಥೆ ಮಾಡುವುದು ಒಳ್ಳೆಯದು. ಈ ವಿಚಾರದಲ್ಲಿ ನನ್ನ ಅಭಿಪ್ರಾಯ ಈ ರೀತಿ ಇದೆ: ನಿಮ್ಮ ದಿವಾನರು ಮತ್ತು ಅವರು ಆರಿಸಿದ ಇಬ್ಬರು ಮುತ್ಸದ್ದಿಗಳು ತಮಗೆ ಸರಿತೋರಿದ ರೀತಿಯಲ್ಲಿ ವಿಚಾರಣೆ ನಡೆಸಲು ಅವಕಾಶ ಕೊಡತಕ್ಕದ್ದು. ದಿವಾನರು ಪ್ರತಿ ದಿವಸ ಸಂಜೆಯೂ ನನ್ನನ್ನು ಭೇಟಿಮಾಡಿ ಅಂದಿನ ವಿಚಾರಣೆಯ ಫಲಿತಾಂಶವನ್ನೂ, ಬಂಡಾಯವನ್ನು ಅಡಗಿಸುವ ವಿಚಾರದಲ್ಲಿ – ಅಂದಂದಿನ ವಿಚಾರಣೆಯ ಫಲಿತಾಂಶವನ್ನನುಸರಿಸಿ – ತಮ್ಮ ಸೂಚನೆಯೇನು ಎಂಬುದನ್ನೂ ನನಗೆ ತಿಳಿಸತಕ್ಕದ್ದು.

"ನನಗೆ ತಿಳಿದು ಬಂದ ಈ ಅಂಶಗಳನ್ನೆಲ್ಲಾ ನಾನೂ ವಿಮರ್ಶೆಮಾಡಿ ಮುಂದೆ ಯಾವ ಕಾರ್ಯಕ್ರಮ ಅನುಸರಿಸುವುದರಿಂದ ಎಲ್ಲರ ಹಿತವೂ ಸಾಧಿಸಲ್ಪಡುವುದೆಂಬುದನ್ನು ಸೂಚಿಸುತ್ತೇನೆ. ತಾವು ಆ ಸೂಚನೆಗೆ ಒಪ್ಪಿಗೆ ಕೊಡುವಿರೆಂದು ನಂಬಿದ್ದೇನೆ. ನಾನು ಈ ಹಿಂದೆ ತಮಗೆ ತಿಳಿಸಿದ್ದಂತೆ, ತಮ್ಮ ಸಂಸ್ಥಾನದಲ್ಲಿ ಹುಟ್ಟಿದ ಈ ಬಂಡಾಯ ಕಂಪನಿಯ ಸರ್ಕಾರವಿರುವ ಪ್ರದೇಶಗಳಿಗೂ ಹರಡುವ ಸಂಭವ ಕ್ಷಣಕ್ಷಣಕ್ಕೆ ಹೆಚ್ಚುತ್ತಿದೆಯಾಗಿ, ಅಂಥ ಸಂಭವವನ್ನು ತಡೆಗಟ್ಟುವುದು ನನ್ನ ಕರ್ತವ್ಯವಾದದ್ದರಿಂದ, ಆ ಕರ್ತವ್ಯ ಸಾಧನೆಗಾಗಿ ನಾನು ತಮಗೆ ಈ ಒತ್ತಾಯದ ಮಾತು ಹೇಳಬೇಕಾಗಿದೆ.

"ಕಂಪನಿಯ ಸರ್ಕಾರದ ವಿಚಾರವಾಗಿ ಪೂರ್ಣ ಗೌರವ ಮತ್ತು ಅದರ

ಹಿತಸಾಧನೆಯಲ್ಲಿ ಶ್ರದ್ಧೆಯುಳ್ಳ ತಾವು ನನ್ನ ಈ ಒತ್ತಾಯವನ್ನು ಉಚಿತ ದೃಷ್ಟಿಯಿಂದ ನೋಡಿ ಸೂಕ್ತವಾದ ರೀತಿಯಲ್ಲಿ ವರ್ತಿಸುವಿರೆಂದು ನಂಬಿದ್ದೇನೆ.

"ಈ ಸಂಜೆ ನಡೆಯಲಿರುವ ದರ್ಬಾರಿಗೆ ತಾವು ದಯಮಾಡಿಸುವುದಕ್ಕೆ ಮೊದಲು ತಮ್ಮನ್ನು ಕಂಡು ತಮ್ಮೊಡನೆ ಮಾತನಾಡಬೇಕಾದ ಅಂಶಗಳು ಕೆಲವಿವೆ. ನಾನು ಎಷ್ಟು ಹೊತ್ತಿಗೆ ತಮ್ಮ ದರ್ಶನಕ್ಕೆ ಬರಬಹುದೆಂಬುದಕ್ಕೆ ಈ ಪತ್ರ ತಂದಿರುವ ಹರಿಕಾರನೊಡನೆಯೇ ಉತ್ತರ ಕಳುಹಿಸಿದರೆ ತುಂಬ ಉಪಕಾರ ಮಾಡಿದಂತಾಗುತ್ತದೆ.—"

"ಊಂ. ಸರಿ."

"ಅವರ ಹರಿಕಾರ ತಮ್ಮ ಆಜ್ಞೆಗಾಗಿ ಕಾದಿದ್ದಾನೆ ಪ್ರಭು."

"ನಮಗೆ ಈ ಪತ್ರ ಬರೆಯುವುದರಲ್ಲಿ ಅವರ ಉದ್ದೇಶವೇನಿದ್ದೀತು ನರಸಪ್ಪ."

"ಬಲಪ್ರದರ್ಶನದಿಂದ, ದಬ್ಬಾಳಿಕೆಯಿಂದ ಜನರ ಬಂಡಾಯವನ್ನು ಮುರಿಯಬೇಕೆಂಬ ಅವರ ಅಭಿಪ್ರಾಯಕ್ಕೆ ಪ್ರಭುಗಳ ಸಮ್ಮತಿಯನ್ನು ಗಳಿಸಿಕೊಳ್ಳುವುದಕ್ಕಾಗಿ ಈ ದ್ರಾವಿಡ ಪ್ರಾಣಾಯಾಮ ಮಾಡುತ್ತಿದ್ದಾರೆಂದು ತೋರುತ್ತದೆ."

"ನಿಜ. ನಮ್ಮ ದಿವಾನರು ಕೂಡ ಆ ಅಭಿಪ್ರಾಯಕ್ಕೇ ಬೆಂಬಲವಾಗಿದ್ದಾರೆ"

"ಈ ವಿಚಾರದಲ್ಲಿ ರೆಸಿಡೆಂಟರ ಪಕ್ಷದ ಮತ್ತು ನಮ್ಮ ದಿವಾನರ ಅಭಿಪ್ರಾಯಗಳು ಒಂದೇ ರೀತಿಯಾಗಿವೆ. ಆದ್ದರಿಂದ ಆ ಪಕ್ಷದವರು ಅವರ ಬೆನ್ನುಕಟ್ಟಿ ನಿಂತಿದ್ದಾರೆ – ಎನ್ನಲೂ ಬಹುದು."

"ಅದು ಹೇಗೇ ಇರಲಿ – ನಮ್ಮ ದೃಷ್ಟಿಯಿಂದ ಪರಿಣಾಮ ಒಂದೆ. ನೋಡು ನರಸಪ್ಪ – ರೆಸಿಡೆಂಟರ ದೃಷ್ಟಿಯನ್ನು ನಾವು ಅರ್ಥಮಾಡಿಕೊಂಡಿದ್ದೇವೆ. ಅವರು ಇಲ್ಲಿಯ ಜನ ಅಲ್ಲ. ಹೊರಗಿನಿಂದ ಬಂದವರು. ತಮ್ಮ ಕೆಲಸದ ಅವಧಿ ಮುಗಿದ ಮೇಲೆ ಇಲ್ಲಿಂದ ಹೊರಟುಹೋಗತಕ್ಕವರು. ಅವರಿಗೆ ಇಲ್ಲಿಯ ಜನರ ಕಷ್ಟ ಸುಖ ಕಟ್ಟಿಕೊಂಡು ಏನಾಗಬೇಕು? 'ನಮ್ಮ ಕೆಲಸ ಸಾಧನೆಯಾದರೆ ಸಾಕು. ಯಾರಿಗೆ ಏನಾದರೇನು' ಎಂಬುದು ಅವರ ದೃಷ್ಟಿ. ನಾವು ಆ ದೃಷ್ಟಿಯನ್ನನುಸರಿಸಿ ನಡೆಯುವುದು ಒಳ್ಳೆಯದಲ್ಲ. ನಾವು, ನಮ್ಮ ಪ್ರಜೆಗಳು ಇಬ್ಬರೂ ಇಲ್ಲೇ ಇದ್ದು ಇಲ್ಲೇ ಬಾಳಬೇಕಾದವರು ತಾನೆ?"

"ಪ್ರಭುಗಳು ಅಪ್ಪಣೆ ಕೊಡಿಸಿದ್ದು ತುಂಬ ಸಾಧುವಾಗಿದೆ."

" ಈ ತಿಳುವಳಿಕೆ ಅವರಿಗೆ ಉಂಟಾಗಬೇಕಲ್ಲ !"

" ರೆಸಿಡೆಂಟ್ ಸಾಹೇಬರು ಈ ಸಂಜೆ ಸನ್ನಿಧಾನದ ಭೇಟಿ ಮಾಡುವ ಅಪೇಕ್ಷೆ ತೋರಿಸಿದ್ದಾರಲ್ಲ. ಆ ಕಾಲದಲ್ಲಿ ಪ್ರಭುಗಳು—"

" ನಾವು ಅವರೊಡನೆ ಈ ವಿಚಾರ ಮಾತನಾಡಬಹುದು. ಆದರೆ ತಾವು ಹಿಡಿದಿರುವ ಪಟ್ಟನ್ನು ಅವರು ಸಡಲಿಸುವರೆಂಬ ನಂಬಿಕೆ ನಮಗಿಲ್ಲ. ನೀನೂ ಯೋಚನೆ ಮಾಡಿನೋಡು ನರಸಪ್ಪ – ನಮ್ಮ ದಿವಾನರನ್ನು ಕರೆಸಿ ಅಲ್ಲಿ ಕೂರಿಸಿ ಕೊಂಡು, ಇಲ್ಲಿ ನಮಗೆ ಈ ರೀತಿ ಪತ್ರ ಕಳಿಸಿದ್ದಾರೆ. ಅಂದರೆ ಎಲ್ಲ ಮುಖ ಗಳಿಂದಲೂ ನಮ್ಮ ಮೇಲೆ ಒತ್ತಾಯ ಹೇರಿ ನಾವು ಅವರ ದಾರಿಗೆ ಬರುವಂತೆ ಎಳೆಯುತ್ತಾರೆಂಬುದು ಇದರಿಂದ ಸ್ಪಷ್ಟವಾಗುತ್ತದೆ."

" ಅದೇನೋ ನಿಜ."

" ಸರಿ. ಯಾವುದೇ ಕಾರಣಕ್ಕಾಗಲಿ ನಮ್ಮ ಪ್ರಜೆಗಳ ರಕ್ತ ಚೆಲ್ಲುವುದು ನಮಗೆ ಒಪ್ಪಿಗೆಯಿಲ್ಲ. ಅಪರಾಹ್ನ ಎರಡನೆಯ ಜಾಮದಲ್ಲಿ ಯಾವಾಗ ಬೇಕಾದರೂ ರೆಸಿಡೆಂಟರು ನಮ್ಮ ಭೇಟಿಗೆ ಬರಬಹುದೆಂದು ಪತ್ರ ಬರೆಸಿ ಕಳುಹಿಸು. ಆಗಲಿ ನೋಡೋಣ. ಆ ದೇವಿಯ ಅಪೇಕ್ಷೆ ಹೇಗಿದೆಯೋ ಹಾಗಾಗಲಿ."

" ಸನ್ನಿಧಾನದ ಅಪ್ಪಣೆಯಂತೆ ರೆಸಿಡೆಂಟರಿಗೆ ಪತ್ರ ಕಳಿಸುತ್ತೇನೆ" ಎಂದು ಸಮ್ಮುಖದ ಕರಣಿಕ ನರಸಪ್ಪ ಪ್ರಭುಗಳಿಗೆ ನಮಸ್ಕರಿಸಿ, ತನ್ನ ಬಿಡಾರಕ್ಕೆ ಹೊರಟರು.

§

" ಮಹಾರಾಜರು ನನ್ನ ಪ್ರಾರ್ಥನೆಯನ್ನು ಅಂಗೀಕರಿಸಿ ನನ್ನೊಡನೆ ಮಾತ ನಾಡಲು ಒಪ್ಪಿದ್ದು ನನಗೆ ತುಂಬ ಸಂತೋಷವಾಯಿತು."

" ರೆಸಿಡೆಂಟ್ ಸಾಹೇಬರು ನಮ್ಮ ವಿಚಾರದಲ್ಲಿ ಇಷ್ಟು ಆಸಕ್ತಿ ವಹಿಸು ತ್ತಿರುವುದು ನಮಗೂ ಸಂತೋಷ."

" ಪ್ರಕೃತ ಸಂಸ್ಥಾನದಲ್ಲೆಲ್ಲಾ ಹಬ್ಬಿರುವ ಬಂಡಾಯವನ್ನು ಅಡಗಿಸುವ ವಿಚಾರದಲ್ಲಿ ತಮ್ಮ ಅಭಿಪ್ರಾಯವೇನೆಂಬುದನ್ನು ತಮ್ಮ ದಿವಾನರು ನನಗೆ ಬಹು ಸ್ಪಷ್ಟವಾಗಿ ವಿವರಿಸಿದ್ದಾರೆ."

" ಆ ವಿಚಾರವನ್ನು ತಮಗೆ ತಿಳಿಸುವಂತೆ ನಾವು ನಮ್ಮ ದಿವಾನರಿಗೆ ಆಜ್ಞೆ ಮಾಡಿದ್ದೆವು."

"ಈ ವಿಚಾರದಲ್ಲಿ ನನ್ನ ಅಭಿಪ್ರಾಯ ಏನೆಂಬುದನ್ನು ಅವರೂ, ನಮ್ಮ ಕಛೇರಿಯ ಶಿರಸ್ತೇದಾರ ಚೌಡಯ್ಯನವರೂ ತಮಗೆ ಅರಿಕೆಮಾಡಿಕೊಂಡಿದ್ದಾರೆಂದು ನಾನು ನಂಬಿದ್ದೇನೆ."

"ಅರಿಕೆ ಮಾಡಿಕೊಂಡಿದ್ದಾರೆ."

"ಈ ಬೆಳಗ್ಗೆ ನಾನು ಕಳುಹಿಸಿದ್ದ ಪತ್ರವನ್ನೂ ತಾವು ಪರಾಂಬರಿಸಿರಬಹುದು."

"ನಮ್ಮ ಕರಣಿಕರು ಆ ಪತ್ರವನ್ನು ನಮಗೆ ಶೃತಪಡಿಸಿದರು."

"ನಾನು ಆ ಪತ್ರದಲ್ಲಿ ತಿಳಿಸಿರುವ ಕಾರ್ಯಕ್ರಮಕ್ಕೆ ತಮ್ಮ ಸಮ್ಮತಿಯಿದೆಯೆಂದು ಭಾವಿಸುತ್ತೇನೆ."

"ನಮ್ಮ ಸಮ್ಮತಿಯ ಮಾತು ಇರಲಿ. ತಾವು ಸೂಚಿಸಿರುವ ವ್ಯವಸ್ಥೆಯಲ್ಲಿ ನಮ್ಮ ಪಾತ್ರವೇನೂ ಇಲ್ಲದಿದ್ದರೆ ಚೆನ್ನಾಗಿರುತ್ತದೆಯೆಂದು ನಮ್ಮ ಅಭಿಪ್ರಾಯ."

"ಮಹಾರಾಜರ ಅಭಿಪ್ರಾಯವೇನೆಂಬುದು ನನಗೆ ಹೊಳೆಯಲಿಲ್ಲ."

"ಇನ್ನೇನೂ ಇಲ್ಲ. ನಮ್ಮ ಅಭಿಪ್ರಾಯವನ್ನನುಸರಿಸಿ ಕೆಲಸ ನಡೆದರೆ ಅದರ ಹೊಣೆಗಾರಿಕೆ ನಾವು ಹೊರುವುದು ಯುಕ್ತ. ಬೇರೊಬ್ಬರ ನಿರ್ಣಯದಂತೆ ನಡೆಯುವ ಕೆಲಸದ ಹೊಣೆಗಾರಿಕೆ ನಾವು ಹೊರುವುದೆಂದರೆ ಅದು ಎಲ್ಲ ಸಂದರ್ಭಗಳಲ್ಲೂ ಸರಿಹೋಗದೆ ಹೋಗಬಹುದು. ಬಹು ಬೇಗ ಪರಸ್ಪರ ಘರ್ಷಣೆಗೆ ಕಾರಣವಾಗಬಹುದು."

"ಅಂದರೆ ನನ್ನ ಸೂಚನೆಗಳನ್ನು ಮಾನ್ಯ ಮಾಡುವ ಅಪೇಕ್ಷೆ ಮಹಾರಾಜರಿಗೆ ಇಲ್ಲ ಎಂದು ನಾನು ಭಾವಿಸಲೇನು?"

"ಹಾಗಲ್ಲ. ಪರಿಸ್ಥಿತಿ ಕಠಿಣವಾಗಿದೆ ಎಂದು ನೀವೇ ಒಪ್ಪಿಕೊಳ್ಳುತ್ತೀರಿ. ಇಂಥ ಸನ್ನಿವೇಶದಲ್ಲಿ ಕಾರ್ಯ ಸುಗಮವಾಗಬೇಕಾದರೆ ಎಲ್ಲ ಕೆಲಸಗಳೂ ಒಬ್ಬರ ನಿರ್ದೇಶನದಂತೆ ನಡೆಯುವುದು ಅತ್ಯಾವಶ್ಯಕ. ಅದರಂತೆಯೇ ಅಂಥ ಕಾರ್ಯ ನಿರ್ವಹಣೆಯಲ್ಲಿ ತೊಡಗಿರುವ ಪ್ರಮುಖ ವ್ಯಕ್ತಿಗಳಲ್ಲಿ ಪರಸ್ಪರ ಅಭಿಪ್ರಾಯ ಸಾಮರಸ್ಯವಿರುವುದೂ ಅವಶ್ಯಕ. ಈ ವಿಚಾರದಲ್ಲಿ ನಿಮ್ಮ ಮತ್ತು ನಮ್ಮ ದಿವಾನರ ನಡುವೆ ಹೊಂದಾಣಿಕೆ ಚೆನ್ನಾಗಿದೆಯಾಗಿ ನೀವೇ ಈ ಪ್ರಸಂಗದ ಪೂರ್ಣ ಜವಾಬ್ದಾರಿ ವಹಿಸಿಕೊಂಡರೆ ಒಳ್ಳೆಯದು. ನಮ್ಮ ಪರವಾಗಿ ನಿಮ್ಮೊಡನೆ ಸಹಕರಿಸಲು ನಮ್ಮ ದಿವಾನರು ಇರುತ್ತಾರೆ."

"ಈ ದಂಗೆಯನ್ನಡಗಿಸುವ ಪೂರ್ಣ ಜವಾಬ್ದಾರಿಯನ್ನು ನಾನೇ ವಹಿಸಿ ಕೊಳ್ಳಬೇಕೆಂಬುದು ಮಹಾರಾಜರ ಅಭಿಪ್ರಾಯವಾಗಿರುವಂತಿದೆ."

"ಹೌದು."

"ಕಂಪನಿ ಸರ್ಕಾರದ ಅನುಮತಿಯಿಲ್ಲದೆ ನಾನು ಹಾಗೆ ಮಾಡುವುದು ಸಾಧ್ಯವಿಲ್ಲ. ನೀವು ಈ ರಾಜ್ಯದ ಅಧಿಪತಿಗಳು. ಆದ್ದರಿಂದ, ಕಾರ್ಯಕ್ರಮವನ್ನು ಯಾರೇ ನಿರ್ಣಯಿಸಲಿ, ಅದಕ್ಕೆ ತಮ್ಮ ಸಮ್ಮತಿಯ ಮುದ್ರೆ ಬೀಳಬೇಕು. ನಾವು ಕೈಗೊಳ್ಳುವ ನಿರ್ಣಯಗಳಿಗೆ ತಾವು ಸಮ್ಮತಿ ಕೊಡುವುದಾಗಿ ಮಾತು ಕೊಟ್ಟರೆ, ನಾನು ಈ ವಿಚಾರದಲ್ಲಿ ಧೈರ್ಯವಾಗಿ ಮುಂದುವರೆಯುತ್ತೇನೆ. ಇಲ್ಲದಿದ್ದರೆ ತಟಸ್ಥನಾಗಿರುತ್ತೇನೆ. ಅನಂತರ ತಮಗೆ ನನ್ನಿಂದ ಯಾವ ವಿಧವಾದ ಸಹಕಾರವೂ ದೊರೆಯಲಾರದು. ಪರಿಸ್ಥಿತಿ ಏನೆಂಬುದನ್ನು ಕಂಪನಿ ಸರ್ಕಾರಕ್ಕೆ ವರದಿ ಮಾಡುತ್ತೇನೆ. ಮುಂದಿನ ವ್ಯವಹಾರ ನಿಮ್ಮ ಅವರ ನಡುವೆ."

ಮಹಾರಾಜರು ಮಾತನಾಡದೆ ಸುಮ್ಮನಿದ್ದರು. ರೆಸಿಡೆಂಟ್ ಕಾಸಾ ಮೈಜರ್ ತಾನೇ ಮಾತು ಮುಂದುವರಿಸಿದ.

"ನನ್ನ ಸಹಕಾರ ತಮಗೆ ಬೇಕೇ ಬೇಡವೇ ಎಂಬುದನ್ನು ನಿರ್ಣಯಿಸಲು ತಮಗೆ ಸ್ವಲ್ಪಕಾಲ ಬೇಕೆಂದು ನಾನು ಭಾವಿಸುತ್ತೇನೆ. ತಾವು ಈ ವಿಚಾರವನ್ನು ಚೆನ್ನಾಗಿ ಆಲೋಚಿಸಿ ತಮಗೆ ಬೇಕಾದ ನಿರ್ಣಯ ತೆಗೆದುಕೊಳ್ಳಬಹುದು. ನಾನು ಈ ವಿಚಾರದಲ್ಲಿ ತಮ್ಮನ್ನು ಒತ್ತಾಯಪಡಿಸುವುದಿಲ್ಲ. ಆದರೂ ತಡ ಮಾಡದೆ ಮುಂದಿನ ಕಾರ್ಯಗಳನ್ನು ನಡೆಸಬೇಕಾಗಿದೆಯಾಗಿ ತಾವು ಸಂಜೆಯ ದರ್ಬಾರಿಗೆ ಹೋಗುವುದಕ್ಕೆ ಮೊದಲು, ನನಗೆ ತಮ್ಮ ನಿರ್ಣಯವನ್ನು ತಿಳಿಸಿದರೆ, ನಾನು ನನ್ನ ಕಾರ್ಯಕ್ರಮವನ್ನು ರೂಪಿಸಿಕೊಳ್ಳಲು ಅನುಕೂಲವಾಗುತ್ತದೆ."

"ಆಗಲಿ. ನಾವು ಆಲೋಚಿಸಿ ನಿಮಗೆ ಹೇಳಿಕಳುಹಿಸುತ್ತೇವೆ. ನೀವು ಹೋಗಿಬನ್ನಿ."

§

ಎದೆ ಮಟ್ಟದ ಕಂಬಗಳ ಮೇಲೆ ಇಟ್ಟಿದ್ದ ನೂರಾರು ಶ್ರಾಪೆಗಳಿಂದ ಬೆಳಗುತ್ತಿದ್ದ ಕಂದುಬಣ್ಣದ ಬೆಳಕಿನಲ್ಲಿ ರಾತ್ರಿ ದರ್ಬಾರು ಆರಂಭವಾಗಿತ್ತು. ಮಹಾರಾಜರೊಡನೆ ಬಂದಿದ್ದ ಪ್ರಮುಖ ಅಧಿಕಾರಿಗಳೂ, ಮೂಸಾಹೇಬರುಗಳೂ, ಮಹಾರಾಜರ ದರ್ಶನಕ್ಕಾಗಿ ಬಂದಿದ್ದ ಅನೇಕ ಮಂದಿ ಪ್ರಜಾಪ್ರಮುಖರೂ

ಸಭೆಗೆ ಬಂದಿದ್ದರು. ಆರಂಭದಲ್ಲಿ ಸ್ವಲ್ಪ ಹೊತ್ತು ಸಂಗೀತ ನಡೆಯಿತು. ಅನಂತರ ದಿವಾನರು ತಮ್ಮ ವರದಿಯನ್ನೊಪ್ಪಿಸಿದರು.

ಅದು ಮುಗಿಯುವ ಹೊತ್ತಿಗೆ ರೆಸಿಡೆಂಟರ ಕಛೇರಿಯ ಶಿರಸ್ತೇದಾರ ಚೌಡಯ್ಯನೂ ಅದೇ ಕಛೇರಿಯಲ್ಲಿ ಕೆಲಸದಲ್ಲಿದ್ದ ಬೆಳವಾಡಿ ಸುಬ್ಬರಾಯನೂ ಸಭೆಗೆ ಬಂದು ಮಹಾರಾಜರಿಗೆ ನಮಸ್ಕರಿಸಿ, ತಾವು ತಂದಿದ್ದ ಖರೀತವನ್ನು ಮಹಾರಾಜರಿಗೆ ಒಪ್ಪಿಸಿದರು.

ಮಹಾರಾಜರು ಅದನ್ನು ನರಸಪ್ಪನವರ ಕೈಗೆ ಕೊಟ್ಟು ಅದನ್ನು ತಮ್ಮೊಬ್ಬರಿಗೇ ಶ್ರುತಪಡಿಸುವಂತೆ ತಿಳಿಸಿದರು. ನರಸಪ್ಪನವರು ಮೆಲುದನಿಯಲ್ಲಿ ಓದಿದರು.

"—ಈ ಮಧ್ಯಾಹ್ನಾನ್ತರ ನಾನು ತಮ್ಮೊಡನೆ ಸಂಭಾಷಣೆ ನಡೆಸಿದೆನಷ್ಟೆ. ಆ ಸಂಭಾಷಣೆಯ ಕಾಲದಲ್ಲಿ ನಾನು ಮಾಡಿದ ಸಲಹೆ, ಮಾಡಿದ ಕಾರ್ಯವ್ಯವಸ್ಥೆಗಳಿಗೆ ತಾವು ತಮ್ಮ ಒಪ್ಪಿಗೆ ಕೊಟ್ಟು ಬರೆಸಿದ ಪತ್ರ ತಲುಪಿತು.

"ಆ ಒಪ್ಪಿಗೆಯ ಮೇಲೆ ಆಧಾರಪಟ್ಟು ಈ ಕೆಳಕಂಡ ಕಾರ್ಯಕ್ರಮಗಳನ್ನು ಕೈಗೊಂಡಿದ್ದೇನೆ.

"೧. ಬಂಡಾಯದ ಬಗ್ಗೆ ತಪ್ಪಿತಸ್ಥರನ್ನು ಗೊತ್ತುಮಾಡಿ ಅವರಿಗೆ ಏನು ಶಿಕ್ಷೆ ಕೊಡಬೇಕೆಂಬುದನ್ನು ನಮಗೆ ಸೂಚಿಸುವುದಕ್ಕಾಗಿ, ನಿಮ್ಮ ದಿವಾನರಿಗೆ ಸಹಾಯಕರಾಗಿರಲು ಹಿರೀಸಾವೆ ಚೌಡಯ್ಯ ಮತ್ತು ಬೆಳವಾಡಿ ಸುಬ್ಬರಾಯ ಇವರಿಬ್ಬರನ್ನು ನಿಯಮಿಸಿದ್ದೇನೆ.

೨. ಇವರು ಈ ಸಂಜೆ ಸಭೆ ಸೇರಿ ಒಟ್ಟು ಒಂಭತ್ತು ಮಂದಿ ಬಂಡಾಯಗಾರರಿಗೆ ಫಾಸಿ ಶಿಕ್ಷೆ ಕೊಡಬೇಕೆಂದು ನಿರ್ಣಯಿಸಿ ಆ ಬಗ್ಗೆ ನನಗೆ ಪತ್ರ ಬರೆದಿದ್ದಾರೆ. ಆ ಪತ್ರದ ಪ್ರತಿಯನ್ನು ತಮ್ಮ ಅವಗಾಹನೆಗಾಗಿ ಇದರೊಂದಿಗೆ ಲಗತ್ತು ಮಾಡಿದೆ.

೩. ಅವರು ಫಾಸಿ ಶಿಕ್ಷೆಗೆ ಅರ್ಹರೆಂದು ಸೂಚಿಸಿರುವ ಒಂಭತ್ತು ಜನರಲ್ಲಿ ಒಬ್ಬನು ಶಿಕ್ಷಾರ್ಹನೆಂಬ ವಿಚಾರದಲ್ಲಿ ನನಗೆ ನಂಬಿಕೆ ಬರಲಿಲ್ಲವಾಗಿ ಅವನಿಗೆ ಫಾಸಿ ಶಿಕ್ಷೆ ವಿಧಿಸಕೂಡದೆಂಬುದು ನನ್ನ ಅಭಿಪ್ರಾಯ. ಈ ಅಂಶವನ್ನು ಅವರ ನಿರ್ಣಯ ಪತ್ರಕ್ಕೆ ನಾನು ಬರೆದಿರುವ ತಾಜಾಕಲಂನಲ್ಲಿ ತೋರಿಸಿದ್ದೇನೆ.

೪. ಉಳಿದ ಎಂಟು ಜನರಿಗೆ ಫಾಸಿ ಶಿಕ್ಷೆ ಕೊಡಲು ಮಹಾರಾಜರವರು ಅನುಮತಿ ಕೊಡಬೇಕೆಂದು ಪ್ರಾರ್ಥಿಸುತ್ತೇನೆ. —”

ಇದನ್ನು ಕೇಳಿ ಮಹಾರಾಜರಿಗೆ ತುಂಬ ವ್ಯಸನವಾಯಿತು. ಅವರ ಮನಸ್ಸು ರೋಸಿಹೋಯಿತು. ಪತ್ರವನ್ನೋದುತ್ತಿದ್ದ ನರಸಪ್ಪನವರಿಗೆ :

“ ಸಾಕು ಬಿಡು ನರಸಪ್ಪ. ನಾವು ರಕ್ಷಿಸಿಕೊಳ್ಳಲಾರದ ಆ ದುರ್ದೈವಿ ಪ್ರಜೆಗಳ ಹೆಸರು ಕೇಳಲು ಕೂಡ ನಮಗೆ ಮನಸ್ಸಿಲ್ಲ. ಆ ಕಾಗದವನ್ನು ದಿವಾನರ ಕೈಗೆ ಕೊಡು. ಏನಾದರೂ ಮಾಡಿಕೊಳ್ಳಲಿ ” ಎಂದರು.

ನರಸಪ್ಪನವರು ಆ ಪತ್ರವನ್ನು ದಿವಾನ ವೆಂಕಟೇ ಅರಸಿನವರ ಕೈಗೆ ಕೊಟ್ಟೊಡನೆಯೇ ಮಹಾರಾಜರು ತಮ್ಮ ಪೀಠದಿಂದೆದ್ದರು. ದರ್ಬಾರು ಮುಗಿಯಿತು.

ಮಾರನೆಯ ದಿನ ಇಬ್ಬರು ಬಂಡಾಯಗಾರರನ್ನು ಚನ್ನರಾಯಪಟ್ಟಣದಲ್ಲಿ ಇನ್ನಿಬ್ಬರನ್ನು ಕಿಕ್ಕೇರಿಯಲ್ಲಿ, ಇನ್ನೊಬ್ಬನನ್ನು ಹೊಳೆನರಸೀಪುರದಲ್ಲಿ ಹಿಡಿದು ಫಾಸಿ ಹಾಕಲಾಯಿತೆಂದು ಚನ್ನರಾಯಪಟ್ಟಣದ ಪೇಟೆಯಲ್ಲೆಲ್ಲಾ ಡಂಗುರ ಹಾಕಿಸಿದರು ದಿವಾನರು.

ಮಹಾರಾಜರು ತಮ್ಮ ಬಿಡಾರದಿಂದ ನಾಲ್ಕು ದಿನ ಹೊರಗೆ ಹೊರಡಲಿಲ್ಲ. ಐದನೆಯ ದಿನ ನುಗ್ಗಿಹಳ್ಳಿಗೆ ಹೊರಟರು. ಅಲ್ಲಿಂದ ಮಲ್ಲಾಘಟ್ಟ, ಸಂಪಿಗೆ, ಕಡಬ, ಗುಬ್ಬಿ, ತುಮಕೂರು, ಹೆಬ್ಬೂರು, ಯಡೆಯೂರು, ನಾಗಮಂಗಲಗಳ ಮಾರ್ಗವಾಗಿ ಪ್ರಯಾಣ ಬೆಳೆಸಿ ಮೈಸೂರಿಗೆ ಹಿಂದಿರುಗಿದರು.

§

ಚನ್ನರಾಯ ಪಟ್ಟಣದಿಂದ ಹೆಬ್ಬೂರಿನವರೆಗೆ ಮಹಾರಾಜರನ್ನನುಸರಿಸಿ ಬಂದ ರೆಸಿಡೆಂಟ್ ಕಾಸಾ ಮೈಜರ್ ತನ್ನ ಜೊತೆಯಲ್ಲಿದ್ದ ದಿವಾನ ವೆಂಕಟೇ ಅರಸರನ್ನು ನಗರ, ಚಿತ್ರದುರ್ಗ ತುಕಡಿಗಳ ಬಂಡಾಯವನ್ನು ಅಡಗಿಸಲು ಕಳುಹಿಸಿ ತಾನು ಬೆಂಗಳೂರು ಮುಖಾಂತರ ಮದರಾಸಿಗೆ ಪ್ರಯಾಣ ಮಾಡಿದನು.

ಮದರಾಸಿನಲ್ಲಿ ಗೌರ್ನರ್‌ರವರನ್ನು ಕಂಡು, ಜನರು ಆಡಳಿತಕ್ಕೆ ವಿರುದ್ಧವಾಗಿ ಬಂಡಾಯ ಎದ್ದಾಗ ಬಲಪ್ರಯೋಗದಿಂದ ಅವರನ್ನು ಸುಗ್ಗು ಬಡೆಯುವುದು ಸರ್ಕಾರದ ಕರ್ತವ್ಯವೆಂಬ ಅಂಶವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ತಮ್ಮ ಪ್ರಜೆಗಳ ಒಂದು ಹನಿ ರಕ್ತ ನೆಲಕ್ಕೆ ಬಿದ್ದರೆ ತಮ್ಮ ರಕ್ತವೇ ನೆಲಕ್ಕೆ ಬಿದ್ದಂತೆ

ಒದ್ದಾಡುತ್ತಿದ್ದ ಮಹಾರಾಜರವರ ಹೆಂಗರುಳು ನೀತಿಯಿಂದಾಗಿ ಮೈಸೂರು ಸಂಸ್ಥಾನದಲ್ಲಿ ಬಂಡಾಯ ಹಬ್ಬಲು ಅವಕಾಶವಾಯಿತೆಂದೂ, ಈ ವ್ಯವಹಾರವನ್ನು ಹೀಗೆಯೇ ಮುಂದುವರೆಯಲು ಬಿಟ್ಟರೆ ಒಳಿತಲ್ಲವೆಂದು ತಾನು ಇದನ್ನು ಸರಿಪಡಿಸಲು ಕೈ ಹಾಕಿ ದಬ್ಬಾಳಿಕೆ ಕಾರ್ಯಕ್ರಮವನ್ನನುಸರಿಸಿದ ಮೇಲೆ ಬಂಡಾಯದ ಉರುಬು ದಿನದಿನಕ್ಕೆ ತಗ್ಗಿಹೋಯಿತೆಂದೂ ಈ ಮೊದಲು ಬಂಡಾಯವೆದ್ದಿದ್ದ ಪ್ರದೇಶದಲ್ಲಿ ರೈತರು ಯಾವ ವಿಧವಾದ ತಂಟೆತಕರಾರುಗಳೂ ಇಲ್ಲದೆ, ಮೊದಲಿನಂತೆ ಕಂದಾಯ ಕೊಡಲು ಆರಂಭಿಸಿದ್ದಾರೆಂದೂ ವರದಿ ಮಾಡಿದನು.

ಗೌರ್ನರ್‌ರವರಿಗೆ ಈ ವರದಿಯನ್ನೊಪ್ಪಿಸಿದಾಗ ಕಾಸಾ ಮೈಜರ್ ತಾನು ಮನಸ್ಸಿನಲ್ಲಿ ಮಾಡಿಕೊಂಡಿದ್ದೆಲ್ಲಾ ನಿರಾತಂಕವಾಗಿ ನಡೆದುಹೋಗುವುದೆಂದು ನಿರೀಕ್ಷಿಸಿದ್ದನೇನೋ! ಆದರೆ ಅದು ಹಾಗಾಗಲಿಲ್ಲವೆನ್ನುವುದನ್ನು ಅರಿತುಕೊಳ್ಳಲು ಅವನಿಗೆ ಬಹುಕಾಲ ಬೇಕಾಗಲಿಲ್ಲ. ಅವನು ಮದರಾಸಿನಿಂದ ಹಿಂದಿರುಗುವ ಹೊತ್ತಿಗೆ ಬಂಡಾಯ ಪ್ರಬಲವಾಗಿ ಬೆಳೆದಿತ್ತು.

ಚನ್ನರಾಯ ಪಟ್ಟಣ, ಕಿಕ್ಕೇರಿ, ಹೊಳೆನರಸೀಪುರ ಮುಂತಾದ ಸ್ಥಳಗಳಲ್ಲಿ ಪ್ರಮುಖರನ್ನು ಗಲ್ಲಿಗೇರಿಸಿದ್ದರಿಂದ, ಅಲ್ಲಿಯ ಜನ ಹೆದರಿ ಹುದುಗಿ ಹೋಗುವರೆಂದು ಕಾಸಾ ಮೈಜರ್ ನಿರೀಕ್ಷಿಸಿದ್ದು ವ್ಯರ್ಥವಾಯಿತು. ಆ ತೀವ್ರ ಕಾರ್ಯಾಚರಣೆ ಆ ಪ್ರದೇಶದ ಜನರಲ್ಲಿ ಭಯವನ್ನು ಹುಟ್ಟಿಸುವುದರ ಬದಲು ಅವರ ಕೆಚ್ಚನ್ನು ಕೆರಳಿಸಿತು. ಉದ್ರೇಕಗೊಂಡ ಆ ಜನ ಸರ್ಕಾರದ ಮೇಲೆ ಮುಳಿದೆದ್ದು ಚಿತ್ರದುರ್ಗ, ನಗರ ತುಕಡಿಗಳಲ್ಲಿ ಬಂಡಾಯವೆದ್ದಿದ್ದ ಪಾಳೆಯಗಾರರ ದಂಡನ್ನು ಸೇರಿಕೊಂಡು ಬಂಡಾಯವನ್ನು ಬಲಪಡಿಸಿದರು. ಬಂಡಾಯ ಕ್ರಮಕ್ರಮವಾಗಿ ತುಕಡಿಯಿಂದ ತುಕಡಿಗೆ ಹಬ್ಬುವ ಲಕ್ಷಣಗಳು ತೋರಿಬಂದವು.

ಈ ಪರಿಸ್ಥಿತಿಯನ್ನಿದಿರಿಸಲು ಕಾಸಾ ಮೈಜರ್ ಕಂಪನಿ ಸೇನೆಗಳನ್ನುಪಯೋಗಿಸಿ ಬಂಡಾಯಗಾರರನ್ನಿದಿರಿಸಿದನು. ಆದರೂ ಬಂಡಾಯವನ್ನು ಪೂರ್ಣವಾಗಿ ಅಡಗಿಸುವುದಿರಲಿ, ಅದನ್ನು ಹತೋಟಿಗೆ ತರುವುದು ಕೂಡ ಅವನಿಂದ ಸಾಧ್ಯವಾಗಲಿಲ್ಲ. ತನ್ನ ಕಾರ್ಯಕ್ರಮ ಫಲಿಸದಿರುವುದಕ್ಕೆ ಕಾರಣವೇನೆಂಬುದನ್ನು ತನ್ನ ಆಪ್ತವರ್ಗದವರೊಡನೆ ಆಲೋಚಿಸಿದನು. ಅವರೆಲ್ಲರೂ, "ರೆಸಿಡೆಂಟರು ನಿರ್ಧರಿಸಿರುವ ಕಾರ್ಯಕ್ರಮ ಸರಿಯಾಗಿಯೆ ಇದೆ. ಆದರೆ ದಿವಾನ ವೆಂಕಟೇಅರಸು ರೆಸಿಡೆಂಟರ ಆಜ್ಞೆಗಳನ್ನು ಸರಿಯಾಗಿ ಪಾಲಿಸದೆ ಇರುವುದರಿಂದಲೂ

ಅವನು ಕಾರ್ಯದಕ್ಷತೆಯಿಲ್ಲದ ಅಸಮರ್ಥನಾದುದರಿಂದಲೂ ಕೆಲಸ ಕೆಡುತ್ತಿದೆ" ಎಂದು ಸೂಚಿಸಿದರು.

ಕಾಸಾ ಮೈಜರ್ ಈ ಸೂಚನೆಯನ್ನನುಸರಿಸಿ ದಂಗೆಯನ್ನಡಗಿಸುವ ಸಂಬಂಧದಲ್ಲಿ ಮಹಾರಾಜರು ತಮ್ಮ ಪರವಾಗಿ ನಿಯಮಿಸಿರುವ ದಿವಾನ ವೆಂಕಟೇ ಅರಸರನ್ನು ಆ ಕೆಲಸದಿಂದ ನಿವೃತ್ತಿಮಾಡಿ ಅವರ ಸ್ಥಾನದಲ್ಲಿ ಸೈನ್ಯದ ಇಲಾಖೆಯಲ್ಲಿದ್ದು ಹೋರಾಟದ ವಿಚಾರದಲ್ಲಿ ಹೆಚ್ಚು ಅನುಭವಸ್ಥರಾಗಿರುವ ಬಾರ್‌ಗೀರ್ ಕಛೇರಿಯ ಭಕ್ಷಿ ಬಾಳಾಜಿರಾಯರನ್ನು ನಿಯಮಿಸಬೇಕೆಂದು ಕೇಳಿಕೊಂಡನು. ಪ್ರಭುಗಳು ಈ ಬದಲಾವಣೆಗೂ ಸಮ್ಮತಿಸಿದರು.

ಆದರೂ ಕಾಸಾ ಮೈಜರ್ ಮದರಾಸು ಗೌರ್ನರ್‌ರ ಸಂದರ್ಶನ ತೆಗೆದುಕೊಂಡು ಹಿಂದಿರುಗಿ ಮೂರು ತಿಂಗಳು ಕಳೆಯುವುದರೊಳಗಾಗಿ, ಮೈಸೂರು ಬಂಡಾಯದ ವಿಚಾರವಾಗಿ ಆತ ತಮಗೆ ಕೊಟ್ಟ ವರದಿಯಲ್ಲಿ ನಂಬಿಕೆಗರ್ಹವಾದುದು ಯಾವುದೂ ಇಲ್ಲವೆಂಬುದು ಗೌರ್ನರ್‌ರವರಿಗೆ ಸ್ಪಷ್ಟವಾಗುವಮಟ್ಟಿಗೆ ಬಂಡಾಯ ಬೆಳೆಯಿತು.

ಆಗ ಮದರಾಸಿನ ಗೌರ್ನರ್ ಆಗಿದ್ದ ಲೂಷಿಂಗ್‌ಟನ್ ತುಂಬ ಪ್ರಭಾವಶಾಲಿ. ಆತನ ಅಣ್ಣ ಕಂಪನಿಯ ರಾಜ್ಯದ ವ್ಯವಹಾರಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಕಂಪನಿಯ ಬೋರ್ಡ್ ಆಫ್ ಡೈರೆಕ್ಟರ್ಸ್ ಸಭೆಯ ಸದಸ್ಯನಾಗಿದ್ದ. ತಮ್ಮ ಮದರಾಸ್ ಸರ್ಕಾರದಲ್ಲಿ ದೊಡ್ಡ ಅಧಿಕಾರಿಯಾಗಿದ್ದ.

ಮೈಸೂರು ಸಂಸ್ಥಾನ ಪ್ರದೇಶದಲ್ಲಿ ಅವ್ಯವಸ್ಥೆಯುಂಟಾದದ್ದು ಲೂಷಿಂಗ್‌ಟನ್‌ನ ಬಾಯಲ್ಲಿ ನಿರೂರಿಸಿತು. ಹೇಗಾದರೂ ಮಾಡಿ ಮೈಸೂರು ಸಂಸ್ಥಾನವನ್ನು ನೇರವಾಗಿ ತನ್ನ ಆಡಳಿತಕ್ಕೆ ತೆಗೆದುಕೊಂಡರೆ, ತನ್ನ ಆಡಳಿತ ಕ್ಷೇತ್ರ ವಿಸ್ತಾರಗೊಳ್ಳುವುದೆಂದೂ, ತನ್ನ ನಿಗ್ರಹಾನುಗ್ರಹ ಶಕ್ತಿ ಹೆಚ್ಚುವುದೆಂದೂ ಅವನು ಆಲೋಚಿಸಿದನು. ಮದರಾಸಿನಲ್ಲಿ ಕೆಲಸದಲ್ಲಿದ್ದ ತನ್ನ ತಮ್ಮ ಸಿ. ಎಂ. ಲೂಷಿಂಗ್‌ಟನ್‌ನನ್ನು ಮೈಸೂರು ಸಂಸ್ಥಾನದ ಮೇಲ್ವಿಚಾರಕನನ್ನಾಗಿ ನಿಯಮಿಸುವುದೆಂದು ನಿರ್ಧರಿಸಿಕೊಂಡು, ಗೌರ್ನರ್ ಜನರಲ್‌ರವರಿಗೊಂದು ಪತ್ರಬರೆದನು.

"....ಮೈಸೂರು ಸಂಸ್ಥಾನದಲ್ಲಿ ಬಂಡಾಯ ನಡೆಯುತ್ತಿರುವುದರ ಜೊತೆಗೆ ಅಲ್ಲಿಯ ಆರ್ಥಿಕ ಸ್ಥಿತಿ ಏನೇನೂ ಸಮರ್ಪಕವಾಗಿಲ್ಲ. ಸಂಸ್ಥಾನದಿಂದ ಕಂಪೆನಿಗೆ ಸಂದಾಯವಾಗಬೇಕಾದ ಪೊಗದಿಯ ಕಂತುಗಳು ಸಂದಾಯವಾಗುತ್ತಿಲ್ಲ. ಇದಲ್ಲದೆ ಸಂಸ್ಥಾನದ ಸೇನೆಗಳ ಸಂಬಳ ಕೂಡ ಬಾಕಿ ಬಿದ್ದಿದ್ದು

ಅವೂ ದಂಗೆಯೇಳುವ ಸ್ಥಿತಿಗೆ ಬಂದಿವೆ. ಈ ರೀತಿ ಇನ್ನು ಸ್ವಲ್ಪಕಾಲ ನಡೆದರೆ, ಮೈಸೂರು ಸಂಸ್ಥಾನದ ಪ್ರದೇಶ ನಮ್ಮ ಹತೋಟಿ ತಪ್ಪಿಹೋಗುವುದು ಮಾತ್ರವಲ್ಲ, ಅಲ್ಲಿನ ಬಂಡಾಯ, ಸಂಸ್ಥಾನದ ಗಡಿಯಲ್ಲಿರುವ ಕಂಪೆನಿ ಸೀಮೆಗೂ ಹರಡಿ ಕಷ್ಟಕ್ಕಿಟ್ಟುಕೊಳ್ಳುತ್ತದೆ. ಈಗಾಗಲೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂಥಾ ಲಕ್ಷಣಗಳು ಸ್ಫುಟವಾಗಿ ಕಾಣುತ್ತಿವೆ. ಆದ್ದರಿಂದ ಮೈಸೂರು ಸಂಸ್ಥಾನದ ಆಡಳಿತವನ್ನು ಮಹಾರಾಜರ ಕೈಯಿಂದ ತಪ್ಪಿಸಿ ನಮ್ಮ ಕೈಗೆ ತೆಗೆದುಕೊಳ್ಳುವುದು ಇಂದಿನ ಪರಿಸ್ಥಿತಿಯಲ್ಲಿ ಅತ್ಯಾವಶ್ಯಕವಾಗಿದೆ. ಗೌರ್ನರ್ ಜನರಲ್‌ರವರು ಈ ವಿಚಾರವನ್ನು ಪರ್ಯಾಲೋಚಿಸಿ ಒಡನೆಯೇ ನಿರ್ಣಯ ತೆಗೆದುಕೊಳ್ಳುವುದು ಅವಶ್ಯಕ. ಮೈಸೂರು ಸಂಸ್ಥಾನದ ಪ್ರಕೃತ ಪರಿಸ್ಥಿತಿಯೇನೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವ ಉದ್ದೇಶದಿಂದ ನಾನೇ ಅಲ್ಲಿಗೆ ಹೋಗುತ್ತಿದ್ದೇನೆ. ಅಲ್ಲಿಂದ ಹಿಂದಿರುಗಿ ಬಂದೊಡನೆಯೇ ತಮಗೆ ವಿವರವಾದ ವರದಿಯನ್ನೊಪ್ಪಿಸುತ್ತೇನೆ...."

ಈ ಕಾಗದವನ್ನತ್ತ ಕಲ್ಕತ್ತೆಗೆ ಕಳುಹಿಸಿ ಗೌರ್ನರ್ ಲೂಷಿಂಗ್‌ಟನ್ ಇತ್ತ ಮೈಸೂರಿಗೆ ಬಂದು ಮಹಾರಾಜರ ಭೇಟಿ ಮಾಡಿದ. ಪರಸ್ಪರ ಕುಶಲ ಪ್ರಶ್ನೆಗಳಾದ ಮೇಲೆ ಲೂಷಿಂಗ್‌ಟನ್ ಬಂಡಾಯದ ಮಾತೆತ್ತಿ ಹೇಳಿದ:

"ಸರ್ಕಾರ ಮತ್ತು ಅಧಿಕಾರ ಸ್ಥಾನದಲ್ಲಿರುವವರು ಎಲ್ಲಿ ಅಶಿಸ್ತು ಕಂಡರೂ ಸರಿಯೇ, ಅದಕ್ಕೆ ಕಾರಣ ಅದೇನೇ ಇರಲಿ, ಅದನ್ನು ಒಡನೆಯೇ ಬಡಿದು ನಿರ್ಮೂಲ ಮಾಡಬೇಕು. ಮಿಕ್ಕ ವಿಚಾರಣೆ ಆ ಮೇಲೆ. ಹಾಗೆ ಮಾಡದೆ ಅಳ್ಳಕ ಬಿಟ್ಟರೆ ಪರಿಸ್ಥಿತಿ ನಮ್ಮ ಕೈಮೀರಿ ಅಶಿಸ್ತು ಬಂಡಾಯದ ರೂಪು ತಾಳಿ ಹಿಂಸೆ ಕೊಡುತ್ತದೆ."

"ಗೌರ್ನರ್‌ರವರ ಮಾತು ಒಪ್ಪತಕ್ಕದ್ದೆ. ಆದರೆ ದಂಡಪ್ರಯೋಗ ಆವಶ್ಯಕವಿಲ್ಲದ ಕಡೆಯಲ್ಲಿ ಅದನ್ನು ಪ್ರಯೋಗಿಸಿದಲ್ಲಿ ಅದರಿಂದ ದುಷ್ಪರಿಣಾಮವಾಗುತ್ತದೆಯೇ ಹೊರತು ಸತ್ಪರಿಣಾಮವಾಗುವುದಿಲ್ಲ. ನಮ್ಮ ಸಂಸ್ಥಾನದಲ್ಲಿ ಜನರು ಅಶಾಂತರಾದೊಡನೆಯೇ ಆ ಅಶಾಂತಿ ಅಷ್ಟಕ್ಕೇ ನಿಲ್ಲುವಂತೆ ಮಾಡಬೇಕೆಂದು ನಾವು ಅಪೇಕ್ಷಿಸಿದೆವು. ನಮ್ಮ ಸಂಸ್ಥಾನದ ಸೇನೆಗಳ ಜೊತೆಗೆ ಕಂಪೆನಿ ಸೇನೆಗಳ ಸಹಾಯವನ್ನೂ ತೆಗೆದುಕೊಂಡು, ಅಶಾಂತಿಯಿರುವೆಡೆಗಳಲ್ಲೆಲ್ಲಾ ಸೇನೆಯ ತುಕಡಿಗಳು ಬೀಡು ಬಿಡುವಂತೆ ವ್ಯವಸ್ಥೆ ಮಾಡಿ, ಜೊತೆಯಲ್ಲಿಯೇ ನಮ್ಮ ದಿವಾನರೂ ಹೋಗಿ ಅಶಾಂತಿಯ ಕಾರಣಗಳನ್ನು ಗೊತ್ತು ಹಚ್ಚಿ ಅವನ್ನು ಸರಿಪಡಿಸಬೇಕೆಂದು ಸೂಚಿಸಿದೆವು. ಹೀಗೆ ನಡೆದಿದ್ದರೆ ಬಂಡಾಯ ಬೆಳೆಯುತ್ತಿರ

ಲಿಲ್ಲ. ನಮ್ಮ ಸರ್ಕಾರಕ್ಕೆ ಕಂಪನಿಯ ಸೇನೆಯ ಬಲವಾದ ಬೆಂಬಲವಿದೆಯೆಂದು ಜನ ಹೆದರುತ್ತಿದ್ದರು. ವಿಚಾರಣೆಯಿಂದಲೂ ಅದನ್ನನುಸರಿಸಿದ ಉಪಶಮನ ಕಾರ್ಯಕ್ರಮದಿಂದಲೂ ಅವರು ಶಾಂತರಾಗುತ್ತಿದ್ದರು. ಆದರೆ ನಿಮ್ಮ ರೆಸಿಡೆಂಟ್ ಸಾಹೇಬರು ಈ ಕಾರ್ಯಕ್ಕೆ ಸಮ್ಮತಿಸಲಿಲ್ಲ. ಕಂಪನಿಯ ಸೇನೆಗಳ ಸಹಾಯ ವನ್ನು ಕೊಡಲು ನಿರಾಕರಿಸಿದರು.

"ಎರಡನೆಯ ಘಟ್ಟದಲ್ಲಿ ನಾವೇ ಸಂಸ್ಥಾನದಲ್ಲಿ ಸಂಚಾರ ಹೊರಟು ನಮ್ಮ ವೈಯಕ್ತಿಕ ಪ್ರಭಾವದಿಂದ ಜನರನ್ನು ಶಾಂತಗೊಳಿಸುತ್ತಿದ್ದಾಗ, ಆ ಕಾರ್ಯಕ್ರಮ ಫಲಕಾರಿಯಾಗುತ್ತಿದ್ದಾಗ, ರೆಸಿಡೆಂಟರು, ಆ ಮಾರ್ಗ ಬಿಡಿಸಿ ಜನರ ಮುಖಂಡರಿಗೆ ಕ್ರೂರವಾದ ಶಿಕ್ಷೆಕೊಡಿಸಿ, ಜನರನ್ನೆಲ್ಲಾ ರೊಚ್ಚಿಗೆಬ್ಬಿಸಿದರು. ಹೀಗೆ ಬಂಡಾಯ ಬೆಳೆಯಲು ಎರಡು ಬಾರಿ ತಾವಾಗಿ ಅವಕಾಶ ಕಲ್ಪಿಸಿದರು."

"ಮಹಾರಾಜರ ಅಭಿಪ್ರಾಯ ನನಗೆ ತಿಳಿಯಿತು. ಆದದ್ದು ಆಗಿ ಹೋಯಿತು. ಬಂಡಾಯ ನಿಂತು, ರಾಜ್ಯ ಶಾಂತ ಸ್ಥಿತಿಗೆ ಬರಬೇಕಾದರೆ ಏನು ಮಾಡಬೇಕೆಂಬುದನ್ನು ಅಪ್ಪಣೆ ಕೊಡಿಸಿದರೆ ಅದನ್ನು ನಾವು ಆಲೋಚಿಸು ತ್ತೇವೆ."

"ನಮ್ಮ ಅಭಿಪ್ರಾಯದಲ್ಲಿ ಈಗ ಪರಿಸ್ಥಿತಿಗೆ ಕೈ ಮೀರಿದೆ. ಬಲ ಪ್ರಯೋಗದಿಂದಲ್ಲದೆ ಬೇರೆ ಯಾವ ಮಾರ್ಗದಿಂದಲೂ ಅದನ್ನು ಹಿಡಿತಕ್ಕೆ ತರುವುದು ಸಾಧ್ಯವಿಲ್ಲ. ಬಂಡಾಯಗಾರರನ್ನಿದಿರಿಸಲು ಪ್ರಕೃತ ಕಂಪನಿ ಸರ್ಕಾರ ಉಪಯೋಗಿಸುತ್ತಿರುವ ಸೇನಾಬಲ ಸಾಲದು. ಸಂಸ್ಥಾನಾಮುಳೆ ಹಬ್ಬಿರುವ ಮತ್ತು ಸಂಸ್ಥಾನದ ಹೊರಗಿನಿಂದ ಬೆಂಬಲ ಪಡೆಯುತ್ತಿರುವ ಈ ದಂಗೆ ಯನ್ನಡಗಿಸಲು ಇನ್ನೂ ಹೆಚ್ಚು ಸೈನ್ಯ ಬೇಕು. ವೇಗವಾದ ಕಾರ್ಯಾಚರಣೆ ಬೇಕು. ಹಾಗಲ್ಲದೆ ಒಂದೇ ತುಕಡಿ ಸೈನ್ಯವನ್ನು ಅಲ್ಲಿಂದಿಲ್ಲಿಗೆ ಅಲೆಸುತ್ತಿದ್ದರೆ, ಅಲ್ಲಿ ನಿಂತ ದಂಗೆ ಇಲ್ಲಿ ಆರಂಭವಾಗುತ್ತದೆ, ಇಲ್ಲಿ ನಿಂತ ದಂಗೆ ಅಲ್ಲಿ ಆರಂಭ ವಾಗುತ್ತದೆ. ಎಷ್ಟು ದಿನವಾದರೂ ಅದು ಹತೋಟಿಗೆ ಬರುವುದಿಲ್ಲ. ಈಗಾಗಲೇ ಆರುತಿಂಗಳಾಯಿತಲ್ಲ ಬಂಡಾಯ ಆರಂಭವಾಗಿ!"

"ಮಹಾರಾಜರ ಸೂಚನೆಗಳು ಮಾನ್ಯವಾದುವು. ಕಂಪನಿ ಸೇನೆಗಳನ್ನು ಆದಷ್ಟು ಹೆಚ್ಚು ಪ್ರಮಾಣದಲ್ಲಿ ಉಪಯೋಗಿಸಿ, ಆದಷ್ಟು ಶೀಘ್ರವಾಗಿ ಬಂಡಾಯವನ್ನು ಅಡಗಿಸಬೇಕೆಂಬುದು ನಮ್ಮ ಅಭಿಪ್ರಾಯ ಕೂಡ. ನಾನು ರೆಸಿಡೆಂಟರೊಡನೆ ಮಾತನಾಡಿ ಈ ಬಗ್ಗೆ ತಕ್ಕ ವ್ಯವಸ್ಥೆ ಮಾಡುತ್ತೇನೆ. ಮಹಾ

ರಾಜರು ಕೂಡ ರೆಸಿಡೆಂಟರವರಿಗೆ ಈ ಕಾರ್ಯದಲ್ಲಿ ಪೂರ್ಣ ಬೆಂಬಲ ಕೊಡಬೇಕು."

"ಅವರು ಅಪೇಕ್ಷಿಸಿದ ನೆರವನ್ನು ಕೊಡಲು ನಾವು ಸದಾ ಸಿದ್ಧರಿದ್ದೇವೆ. ಈ ಅಶಾಂತಿ ಆದಷ್ಟು ಶೀಘ್ರವಾಗಿ ಕಳೆದು, ಜನ ಸುಖವಾಗಿ ಬಾಳಬೇಕೆಂಬುದೇ ನಮ್ಮ ಅಪೇಕ್ಷೆ."

"ನಮ್ಮ ಅಪೇಕ್ಷೆಯೂ ಅದೇ. ಆ ಕಾರ್ಯವನ್ನು ಸಾಧಿಸಲು ನಾವು ಆದಷ್ಟು ಪ್ರಯತ್ನಿಸುತ್ತೇವೆ."

ಎಂದು ಆಶ್ವಾಸನ ಕೊಟ್ಟು ಲೂಷಿಂಗ್‌ಟನ್ ಮದರಾಸಿಗೆ ಹೊರಟು ಹೋದ. ಇತ್ತ ಮೈಸೂರು ಸಂಸ್ಥಾನದಲ್ಲಿ ಬಂಡಾಯ ತಗ್ಗದೆ ನಡೆದೇ ನಡೆಯಿತು. ರೆಸಿಡೆಂಟ್ ಕಾಸಾ ಮೈಜರ್ ತನಗೆ ಹೆಚ್ಚು ಹೆಚ್ಚು ಸೇನೆ ಬೇಕೆಂದ ಕೇಳಲಾರಂಭಿಸಿದ. ಅವನ ಸಹಾಯಕ್ಕೆ ಮದರಾಸಿನಿಂದ ಕಂಪನಿಯ ಸೇನೆಗಳನ್ನು ಮೇಲಿಂದ ಮೇಲೆ ಕಳುಹಿಸಿದ್ದೂ ಆಯಿತು.

§

ಗೌರ್ನರ್ ಲೂಷಿಂಗ್‌ಟನ್ ಮೈಸೂರಿಗೆ ಹೊರಡುವುದಕ್ಕೆ ಮೊದಲು ಗೌರ್ನರ್ ಜನರಲ್‌ರವರಿಗೆ ಬರೆದಿದ್ದ ಪತ್ರ ಪರಿಣಾಮಕಾರಿಯಾಯಿತು.

"ಮೈಸೂರು ಸಂಸ್ಥಾನವನ್ನು ಕಂಪನಿಯ ಆಡಳಿತಕ್ಕೆ ತೆಗೆದುಕೊಳ್ಳಬೇಕೆಂಬುದಕ್ಕೆ ನನ್ನ ಒಪ್ಪಿಗೆಯಿದೆ. ಹೀಗೆ ಕಂಪನಿಯ ಆಡಳಿತಕ್ಕೆ ಬಂದ ಮೈಸೂರು ಪ್ರದೇಶವನ್ನು ಬ್ರಿಟಿಷ್ ಅಧಿಕಾರಿಗಳ ಒಂದು ಕಮೀಷನ್ ಆಳಬೇಕೆಂಬುದು ನನ್ನ ಅಭಿಪ್ರಾಯ. ಮೈಸೂರಿನಿಂದ ಬಂದ ಮೇಲೆ ನೀವು ಕಳುಹಿಸುವ ವರದಿಯನ್ನು ನೋಡಿ, ಮೈಸೂರು ಆಡಳಿತ ವಹಿಸಿಕೊಳ್ಳುವ ಬಗ್ಗೆ ವಿವರವಾದ ಸೂಚನೆಗಳನ್ನು ಕೊಡುತ್ತೇನೆ" ಎಂದು ಗೌರ್ನರ್ ಜನರಲ್‌ನಿಂದ ಪತ್ರ ಬಂತು.

ಮೈಸೂರು ಸಂಸ್ಥಾನದ ಆಡಳಿತಕ್ಕಾಗಿ ಬೇರೆ ಒಂದು ಕಮೀಷನ್ ಅನ್ನು ನಿಯಮಿಸಬೇಕೆಂಬ ಅಭಿಪ್ರಾಯ ಲೂಷಿಂಗ್‌ಟನ್‌ಗೆ ಸರಿಬೀಳಲಿಲ್ಲ. ಏಕೆಂದರೆ ಮೈಸೂರನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಳ್ಳಬೇಕೆಂದಿದ್ದ ಅವನ ಆಸೆಗೆ ಇದು ಕಲ್ಲು ಹಾಕಿತು.

ಆದರೂ ಅವನು ತನ್ನ ಆಸೆಯನ್ನು ಬಿಡದೆ, "ಕಮೀಷನ್ ನಿಯಮಿ

ಸುವುದರ ಬದಲು ಕಂಪನಿಯ ಸರ್ಕಾರಕ್ಕೆ ಒಪ್ಪಿಗೆಯಾಗಬಹುದಾದ ಒಬ್ಬ ದಿವಾನನನ್ನು ನಿಯಮಿಸೋಣ; ಪೂರ್ಣಯ್ಯನನ್ನು ನಿಯಮಿಸಿದಂತೆ. ಅವನು ಮದರಾಸಿನ ಗೌರ್ನರಿಗೆ ಜವಾಬುದಾರನಾಗಿ, ಅವರ ಸೂಚನೆಯನ್ನನುಸರಿಸಿ ಸಂಸ್ಥಾನದ ಆಡಳಿತ ನಡೆಸಲಿ" ಎಂದು ಮತ್ತೊಂದು ಸೂಚನೆ ಮಾಡಿದ.

ಗೌರ್ನರ್‌ಜನರಲ್ ಬೆಂಟಿಂಕ್‌ರವರು ಈ ಸೂಚನೆಯನ್ನು ನಿರಾಕರಿಸಿ, "ಗೌರ್ನರ್ ಜನರಲ್ ಒಬ್ಬ ಅಧಿಕಾರಿಯನ್ನು ನಿಯಮಿಸತಕ್ಕದ್ದು. ಈತ ಹಿರಿಯ ಅಧಿಕಾರಿಯಾಗಿರತಕ್ಕದ್ದು. ಮದರಾಸು ಗೌರ್ನರ್ ಇನ್ನೊಬ್ಬ ಅಧಿಕಾರಿಯನ್ನು ನಿಯಮಿಸತಕ್ಕದ್ದು. ಇವರಿಬ್ಬರೂ ಒಂದು ಆಡಳಿತ ಸಮಿತಿಯಾಗಿ ಏರ್ಪಟ್ಟು ಮೈಸೂರು ಪ್ರದೇಶದ ಆಡಳಿತವನ್ನು ನೋಡಿಕೊಳ್ಳತಕ್ಕದ್ದು; ಆಡಳಿತದ ವಿಚಾರದಲ್ಲಿ ಮದರಾಸು ಗೌರ್ನರ್‌ರವರಿಗೆ ಅಧೀನರಾಗಿದ್ದು ಅವರ ಸೂಚನೆಯಂತೆ ನಡೆದುಕೊಳ್ಳತಕ್ಕದ್ದು" ಎಂದು ಆಜ್ಞೆಮಾಡಿದರು. ಈ ಆಜ್ಞೆಯನ್ನನುಸರಿಸಿ ಕರ್ನಲ್ ಬ್ರಿಗ್ಸ್ ಎಂಬ ಮಿಲಿಟರಿ ಅಧಿಕಾರಿಯನ್ನು ಹಿರಿಯ ಅಧಿಕಾರಿಯನ್ನಾಗಿ ನಿಯಮಿಸಿದರು. ಇನ್ನೊಬ್ಬ ಅಧಿಕಾರಿಯನ್ನು ನಿಯಮಿಸುವ ಕೆಲಸ ಮಾತ್ರ ಗೌರ್ನರ್ ಲೂಷಿಂಗ್‌ಟನ್‌ಗೆ ಉಳಿಯಿತು.

ಈ ವ್ಯವಸ್ಥೆ ಗೌರ್ನರ್ ಲೂಷಿಂಗ್‌ಟನ್‌ಗೆ ತುಂಬ ನಿರಾಶೆಯನ್ನುಂಟು ಮಾಡಿತು. ಗೌರ್ನರ್ ಜನರಲ್‌ರವರಿಂದ ನಿಯಮಿತನಾದ ಮಿಲಿಟರಿ ಅಧಿಕಾರಿ ತನಗೆ ಸೊಪ್ಪು ಹಾಕುವುದಿಲ್ಲವೆಂದು ಅವನಿಗೆ ತೋರಿತು. ಆದರೂ ಅವನನ್ನು ಸುಮ್ಮನೆ ಬಿಡಬಾರದೆಂದೂ ಅವನಿಗೆ ಆದಷ್ಟು ಹಿಂಸೆಕೊಟ್ಟು ಅವನನ್ನು ಓಡಿಸಬೇಕೆಂದೂ ನಿರ್ಧರಿಸಿದನು. ಇತ್ತ ಬೆಂದ ಮನೆಯಲ್ಲಿ ಹಿರಿದಿದ್ದೆ ಲಾಭ ಎಂದುಕೊಂಡು ತನ್ನ ತಮ್ಮ ಸಿ. ಎಂ. ಲೂಷಿಂಗ್‌ಟನ್‌ನನ್ನು ಮೈಸೂರು ಆಡಳಿತ ಸಮಿತಿಯ ಎರಡನೆಯ ಅಧಿಕಾರಿಯನ್ನಾಗಿ ನಿಯಮಿಸಿದನು.

ಇತ್ತ ಮದರಾಸು ಗೌರ್ನರ್‌ಗೆ ಪತ್ರ ಬರೆದ ಮಾರನೆಯ ದಿನವೇ ಗೌರ್ನರ್ ಜನರಲ್‌ರು ಶ್ರೀಕೃಷ್ಣರಾಜ ಒಡೆಯರವರಿಗೆ ಒಂದು ಪತ್ರ ಬರೆದು ಅದರಲ್ಲಿ ಮೈಸೂರು ಸಂಸ್ಥಾನದ ಆಡಳಿತ ತೀರಾ ಅವ್ಯವಸ್ಥೆಗಿಟ್ಟುಕೊಂಡು ಅದರಿಂದ, ಕಂಪನಿ ಸರ್ಕಾರದ ಹಿತಕ್ಕೆ ಧಕ್ಕೆಯುಂಟಾಗಿದೆಯಾಗಿ, ಮಹಾರಾಜರ ವಂಶೀಕರಿಗೂ ಕಂಪನಿ ಸರ್ಕಾರಕ್ಕೂ ಆಗಿದ್ದ ಕರಾರಿನ ನಾಲ್ಕು ಮತ್ತು ಐದನೇ ಕಲಂ ಪ್ರಕಾರ ಮೈಸೂರು ರಾಜ್ಯದ ಆಡಳಿತವನ್ನು ತಾನೇ ವಹಿಸಿಕೊಳ್ಳಬೇಕೆಂದು ಕಂಪನಿ ಸರ್ಕಾರ ನಿರ್ಧರಿಸಿದೆಯೆಂಬೂ ಈ ನಿರ್ಧಾರಕ್ಕೆ ಮಾನ್ಯತೆಕೊಟ್ಟು ಮಹಾ

ರಾಜರು ಸಂಸ್ಥಾನದ ಆಡಳಿತವನ್ನು ಕಂಪನಿ ಸರ್ಕಾರದಿಂದ ನಿಯಮಿತರಾಗಿರುವ ಅಧಿಕಾರಿಗಳಿಗೆ ವಹಿಸಿಕೊಡಬೇಕೆಂದೂ ಸೂಚಿಸಿದರು.

§

ಮೈಸೂರು ಅರಮನೆಯಲ್ಲಿ ನವರಾತ್ರಿಯ ಉತ್ಸವ ಆರಂಭವಾಗಿ ಎಂದಿನಂತೆ ನಡೆಯುತ್ತಿತ್ತು.

ಅಂದು ಪ್ರಭುಗಳು ಬೆಳಗಿನ ದರ್ಬಾರನ್ನು ಮುಗಿಸಿಕೊಂಡು ಸಜ್ಜೆಗೆ ಬಂದು ವಿಶ್ರಮಿಸಿಕೊಳ್ಳುತ್ತಿದ್ದಾಗ ಕರಣಿಕ ನರಸಪ್ಪನವರು ಅಲ್ಲಿಗೆ ಬಂದು "ಗೌರ್ನರ್ ಜನರಲ್ ಸಾಹೇಬರಿಂದ ಸನ್ನಿಧಾನಕ್ಕೆ ಒಂದು ಖರೀತ ಬಂದಿದೆ" ಎಂದು ಬಿನ್ನವಿಸಿಕೊಂಡು ಮೊಹರು ಮಾಡಿದ್ದ ಚೀಲವನ್ನು ಸನ್ನಿಧಾನಕ್ಕೆ ಅರ್ಪಿಸಿದರು.

ಮಹಾರಾಜರು ಅದನ್ನು ತೆಗೆದುಕೊಂಡು ಆ ಚೀಲದ ಬಾಯಿಗೆ ಕಟ್ಟಿದ್ದ ಮೊಹರು ದಾರವನ್ನು ತಮ್ಮ ಕೈಗತ್ತಿಯಿಂದ ಕತ್ತರಿಸಿ ನರಸಪ್ಪನವರ ಕೈಗೆ ಕೊಟ್ಟು "ಅದೇನು ಓದು ನರಸಪ್ಪ" ಎಂದು ಆಜ್ಞೆ ಮಾಡಿದರು.

ಪ್ರಭುಗಳ ಆಜ್ಞೆಯಂತೆ ನರಸಪ್ಪನವರು ಆ ಪತ್ರವನ್ನೋದಿದರು. ಅದನ್ನು ಕೇಳಿ ಮಹಾಸ್ವಾಮಿಯವರು ಕ್ಷಣಕಾಲ ಮೌನವಾಗಿದ್ದು ಅನಂತರ:

"ಎಲ್ಲಿ ಆ ಪತ್ರವನ್ನಿನ್ನೊಮ್ಮೆ ಓದು ನೋಡೋಣ." ಎಂದರು.

ನರಸಪ್ಪನವರು ಪತ್ರವನ್ನು ಇನ್ನೊಮ್ಮೆ ಮಹಾಸ್ವಾಮಿಯವರಿಗೆ ಶ್ರುತ ಪಡಿಸಿದರು. ಅದನ್ನು ಸಾವಧಾನದಿಂದ ಕೇಳಿ ಮಹಾಸ್ವಾಮಿಯವರು:

"ಕಂಪನಿ ಸರ್ಕಾರ ನಮಗೆ ತುಂಬ ಅನ್ಯಾಯಮಾಡಿದೆ. ನಮ್ಮಿಂದ ರಾಜ್ಯಾಡಳಿತವನ್ನು ಕಿತ್ತುಕೊಳ್ಳಲು ಅವರು ಸೂಚಿಸಿರುವ ಕಾರಣಗಳು ಸತ್ಯವಲ್ಲ. ನಾವು ಕರಾರಿನ ನಿಯಮಗಳನ್ನುಲ್ಲಂಘಿಸಿರುವುದಾಗಿ ಅಪಾದನೆ ಮಾಡಿರುವ ಅವರು, ತಾವೇ ಆ ನಿಯಮಗಳನ್ನುಲ್ಲಂಘಿಸಿ ನಮ್ಮ ರಾಜ್ಯವನ್ನು ತಮ್ಮ ವಶಕ್ಕೆ ತೆಗೆದು ಕೊಳ್ಳುವ ನಿರ್ಣಯ ಮಾಡಿದ್ದಾರೆ! ತಾವು ನ್ಯಾಯಶೀಲರೆಂದು ಮೇಲಿಂದ ಮೇಲೆ ಹೇಳಿಕೊಳ್ಳುವ ಆ ಜನ ಹೀಗೆ ಮಾಡಬಾರದಾಗಿತ್ತು."

"ನಿಜ ಪ್ರಭು."

"ನಾವು ಅವರ ತಪ್ಪನ್ನವರಿಗೆ ತೋರಿಸಿಕೊಡೋಣ. ಆಮೇಲೆ ಮುಂದಿನ ಮಾತು."

"ಅಂದರೆ ಅವರ ನಿರ್ಣಯವನ್ನು ಖಂಡಿಸಿ ಅವರಿಗೊಂದು ಪತ್ರ ಬರೆಯಬೇಕೆಂಬುದು ಸನ್ನಿಧಾನದ ಅಪೇಕ್ಷೆಯೋ ?"

"ಇದೇನು ನರಸಪ್ಪ ನೀನೂ ಹೀಗೆ ಮಾತನಾಡುತ್ತಿದ್ದೀಯೆ! ಅವರ ನಿರ್ಣಯಕ್ಕೆ ಆಧಾರವಾದ ಒಂದೊಂದು ಅಂಶವನ್ನೂ ಖಂಡಿಸಿ ಅವರ ನಿರ್ಣಯ ಹೇಗೆ ನಿರಾಧಾರವಾದುದೆಂಬುದನ್ನು ಬಿಚ್ಚಿ ತೋರಿಸುವಂಥ ಕಾಗದ ಬರೆಯಬಹುದು. ಈಗ ಅಂಥ ಕಾಗದ ಬರೆದುವೆಂದು ಇಟ್ಕೊಕೋ. ಅದಕ್ಕೆ ಅವರ ಪ್ರತಿಕ್ರಿಯೆ ಹೇಗಿದ್ದೀತು – ಸ್ವಲ್ಪ ಯೋಚಿಸಿನೋಡು. ಈ ಪ್ರಸಂಗದಲ್ಲಿ ನ್ಯಾಯ ನಮ್ಮ ಕಡೆಗೇ ಇರಲಿ, ಅವರ ಕಡೆಗೇ ಇರಲಿ, ಸದ್ಯಕ್ಕಂತೂ ಸೋಲು ನಮಗೆ; ಗೆಲುವು ಅವರಿಗೆ ಎಂಬುದು ನಿಜ. ಕಾರಣ ನಿನಗೆ ಗೊತ್ತೇಯಿದೆ. ತಾವು ಬಯಸಿದ್ದನ್ನು ನಡೆಸಿಕೊಳ್ಳಲು ಬೇಕಾದ ಬಲ ಇಂದು ಅವರಿಗಿದೆ. ಅವರ ಸೈನ್ಯಗಳು ಈಗ ನಮ್ಮ ರಾಜ್ಯದಲ್ಲೇ ಇವೆಯಲ್ಲ! ಅವರನ್ನು ನಿರೋಧಿಸಿ ಗೆಲ್ಲುವ ಶಕ್ತಿ ನಮಗೆಲ್ಲಿದೆ ?"

"ನಿಜ ಪ್ರಭು. ಹಾಗೆಂದು ಅವರು ನಮ್ಮ ಮೇಲೆ ಹೇರುವ ಅನ್ಯಾಯ ಅಪಮಾನಗಳನ್ನು ನಾವು ವಿರೋಧಿಸದೆ ಸಹಿಸಿಕೊಂಡಿರಬೇಕೆಂದರೆ —"

"ಕಷ್ಟವಾಗುತ್ತದೆ ನರಸಪ್ಪ. ಆದರೆ ಇಂಥ ಪ್ರಸಂಗಗಳಲ್ಲಿ ದುಡುಕಿ ಮಾನಭಂಗಮಾಡಿಕೊಳ್ಳಬಾರದು; ನಮ್ಮ ಕೆಲಸವನ್ನು ಕೆಡಿಸಿಕೊಳ್ಳಬಾರದು. ಆದಷ್ಟು ಗಂಭೀರವಾಗಿ ನಡೆದುಕೊಂಡು, ಎಚ್ಚರಿಕೆಯಿಂದ ಕಾರ್ಯ ಸಾಧಿಸಿಕೊಳ್ಳಬೇಕು. ಸಮಯ ಕಾದು, ಇವತ್ತಲ್ಲದಿದ್ದರೆ ನಾಳೆ ಅವರಿಗೆ ಅವರ ತಪ್ಪು ತಿಳಿಸೋಣ. ನಮಗೆ ದೊರೆಯಬೇಕಾದ ನ್ಯಾಯ ದೊರಕಿಸಿಕೊಳ್ಳೋಣ. ಸಮಬಲರೊಡನೆ ಹೋರಾಡಿ ನ್ಯಾಯ ದೊರಕಿಸಿಕೊಳ್ಳುವ ಮಾರ್ಗ ಬೇರೆ. ನಮಗಿಂತ ಪ್ರಬಲರಾದವರು ನ್ಯಾಯ ತಪ್ಪಿ ನಡೆದಾಗ, ಅವರಿಂದ ನ್ಯಾಯ ದೊರಕಿಸಿಕೊಳ್ಳುವ ಬಗೆ ಬೇರೆ. ಮಹಾಮಾತೃಶ್ರೀಯವರ ಚರಿತ್ರೆಯನ್ನು ಇಷ್ಟು ಬೇಗ ಮರೆತೆಯಾ ನರಸಪ್ಪ."

"ಸ್ವಾಮಿಯ ಚಿತ್ತ ಅರ್ಥವಾಯಿತು. ಪ್ರಭುಗಳ ಅಪೇಕ್ಷೆಯಂತಾಗಲಿ."

"ಮಧ್ಯಾಹ್ನಾನಂತರ ಎರಡನೆಯ ಜಾಮದಲ್ಲಿ ಇಲ್ಲಿಗೆ ಬಾ ನರಸಪ್ಪ.

ಕಂಪನಿಯ ಸರ್ಕಾರದಿಂದ ನಿಯೋಜಿತರಾಗಿರುವ ಅಧಿಕಾರಿಗಳು ಇಲ್ಲಿಗೆ ಬಂದೊಡನೆಯೇ ಸಂಸ್ಥಾನದ ಆಡಳಿತಾಧಿಕಾರವನ್ನು ಅವರಿಗೆ ವಹಿಸಿಕೊಡುತ್ತೇವೆಂದು ಗೌರ್ನರ್ ಜನರಲ್ಲರಿಗೆ ಪತ್ರ ಬರೆಯೋಣ."

"ಅಪ್ಪಣೆ ಪ್ರಭು." ಎಂದು ನರಸಪ್ಪನವರು ಮಹಾಸ್ವಾಮಿಯವರಿಗೆ ನಮಸ್ಕರಿಸಿ ಹೊರಟುಹೋದರು.

× × ×

ಅಂದು ಮಧ್ಯಾಹ್ನಾನಂತರ ಗೌರ್ನರ್ ಜನರಲ್‌ರವರಿಗೆ ತಾವು ಬರೆಸಿದ ಪತ್ರಕ್ಕೆ ತಮ್ಮ ಹಸ್ತಾಕ್ಷರವಿಟ್ಟು ರಾಜಮುದ್ರೆಯನ್ನೊತ್ತಿದೊಡನೆಯೇ ಮೈಸೂರು ರಾಜ್ಯದ ಆಳ್ವಿಕೆಯಲ್ಲಿ ತಮ್ಮ ನೇರವಾದ ಪಾತ್ರ ಸದ್ಯಕ್ಕೆ ಮುಗಿಯಿತೆಂದು ಶ್ರೀ ಕೃಷ್ಣ ಭೂಪಾಲರು ಭಾವಿಸಿದರು.

ರಾಜ್ಯಾಡಳಿತ ಮತ್ತೆ ತಮ್ಮ ಕೈಗೆ ಬರುವತನಕ ತಾವು ಸಿಂಹಾಸನಾರೂಢರಾಗಿದ್ದಾಗ ಪ್ರಜೆಗಳಿಗೆ ಪ್ರತ್ಯಕ್ಷವಾಗುವುದಿಲ್ಲವೆಂದು ಪ್ರಭುಗಳು ಪ್ರತಿಜ್ಞೆ ಮಾಡಿದರು.

× × ×

ವಂಶ ಪಾರಂಪರ್ಯವಾಗಿ ನಡೆದು ಬಂದಿದ್ದ ಪದ್ಧತಿಯಂತೆ ಅಂದು ಸಂಜೆ ಕೂಡ ಪ್ರಭುಗಳು ಸಿಂಹಾಸನಾರೂಢರಾಗಿ ನವರಾತ್ರಿಯ ದರ್ಬಾರು ನಡೆಸಿದರು. ಆದರೆ ಅವರು ಮಂಡಿಸಿದ್ದ ಸಿಂಹಾಸನದ ಮುಂದೆ ತೆಳ್ಳನೆಯ ತೆರೆ ಹರಡಿತ್ತು.

ಅನಂತರ ಅನೇಕ ವರ್ಷಗಳವರೆಗೆ ಪ್ರಭುಗಳು ತೆರೆಮರೆಯ ದೊರೆಯಾಗಿ ಇದ್ದುಕೊಂಡೇ ತಮ್ಮ ರಾಜ್ಯದ ಜನಮನವನ್ನು ಬೆಳಗಿಸುವ ದೀಪವಾಗಿ ಬಾಳಿದರು.

"ಶ್ರೀ ಕೃಷ್ಣಭೂಪ ಮನೆಯೆಲ್ಲ ದೀಪ" ಎಂಬ ನಾಡ ಹೊಗಳಿಕೆಗೆ ಪಾತ್ರರಾಗಿ ಮೆರೆದರು.

---

# ಶಾರದಾ ಪ್ರಕಟನಾಲಯದ ಪ್ರಕಟನೆಗಳು



| | | | | |
|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ* (ದ್ವಿತೀಯ ಮುದ್ರಣ) | ೨ | ೪ | ೦ |
| ೩. | ಜೀವನ – ಕಲೆ * | ೧ | ೦ | ೦ |
| ೪. | ಮುಗುಳುನಗೆ * | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | ೧ | ೪ | ೦ |
| ೬. | ಆಲದ ಹೂ | ೧ | ೧೨ | ೦ |
| ೭. | ಹುಡುಗಾಟ | ೧ | ೪ | ೦ |
| ೮. | ಶವದ ಮನೆ * | ೧ | ೪ | ೦ |
| ೯. | ಎದಿರೇಟು | ೧ | ೮ | ೦ |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) | ೩ | ೮ | ೦ |
| ೧೧. | ಕೇಡಿಗನ ಕಿಡಿಗಳು | ೧ | ೦ | ೦ |
| ೧೨. | ದೇವತೆಗಳು ನಕ್ಕಾಗ | ೧ | ೪ | ೦ |
| ೧೩. | ಜ್ವಾಲಾಮುಖಿಯ ಮೇಲೆ | ೪ | ೦ | ೦ |
| ೧೪. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ | ೧ | ೮ | ೦ |
| ೧೫. | ಹಾಳು – ಮೂಳು | ೧ | ೦ | ೦ |
| ೧೬. | ನಾಡಿಗೇರರ ನಗೆಬರಹಗಳು ೧ | ೧ | ೪ | ೦ |
| ೧೭. | ಮೋಹದ ಬಲೆಯಲ್ಲಿ (ದ್ವಿತೀಯ ಮುದ್ರಣ) | ೩ | ೮ | ೦ |
| ೧೮. | ಸಾವಿನೊಂದಿಗೆ ಸರಸ | ೧ | ೪ | ೦ |
| ೧೯. | ಅನುರಾಗ | ೧ | ೪ | ೦ |
| ೨೦. | ಬಿಡುಗಡೆಯ ಬೇಡಿ (ದ್ವಿತೀಯ ಮುದ್ರಣ) | ೧ | ೮ | ೦ |
| ೨೧. | ಜೋಳದ ಬೆಳೆಯ ನಡುವೆ (ದ್ವಿತೀಯ ಮುದ್ರಣ) | ೧ | ೦ | ೦ |
| ೨೨. | ಜರತಾರಿ ಜಗದ್ಗುರು (ತೃತೀಯ ಮುದ್ರಣ) | ೧ | ೧೨ | ೦ |
| ೨೩. | ಕಾನ್ವೆಂಟ್ ಗರ್ಲ್ (ದ್ವಿತೀಯ ಮುದ್ರಣ) | ೦ | ೧೨ | ೦ |
| ೨೪. | ಖಾನಾವಳಿಯ ನೀಲಾ (ದ್ವಿತೀಯ ಮುದ್ರಣ) | ೧ | ೦ | ೦ |
| ೨೫. | ರಂಗನಾಯಕಿ | ೨ | ೦ | ೦ |

* ಪ್ರತಿಗಳು ಮುಗಿದಿವೆ

| | | | | | | |
|---|---|---|---|---|---|---|
| ೨೬. | ಮದುವೆ ಮಾಡಿ ನೋಡು | .... | .... | ೧ | ೦ | ೦ |
| ೨೭. | ಕಲ್ಯಾಣಿ (ದ್ವಿತೀಯ ಮುದ್ರಣ) | .... | .... | ೧ | ೮ | ೦ |
| ೨೮. | ನೀ ನನ್ನ ಮುಟ್ಟಬೇಡ (ದ್ವಿತೀಯ ಮುದ್ರಣ) | | .... | ೧ | ೮ | ೦ |
| ೨೯. | ನನ್ನದೇವರು ('ಕುವೆಂಪು' ರವರ ಕಥಾಸಂಕಲನ) | | .... | ೧ | ೪ | ೦ |
| ೩೦. | ಕಾಮಿನಿ – ಕಾಂಚನ (ದ್ವಿತೀಯ ಮುದ್ರಣ).... | | .... | ೧ | ೮ | ೦ |
| ೩೧. | ಶನಿವಾರ ಮತ್ತು ಶಿವದಾರ (ತೃತೀಯ ಮುದ್ರಣ) | | .... | ೧ | ೮ | ೦ |
| ೩೨. | ಮಲ್ಲಿ | .... | .... | ೧ | ೮ | ೦ |
| ೩೩. | ಆನಂದ ಲಹರಿ | .... | .... | ೦ | ೧೨ | ೦ |
| ೩೪. | ಸೀತಾ – ರತ್ನ | .... | .... | ೦ | ೧೨ | ೦ |
| ೩೫. | ನಾಡಿಗೇರರ ನಗೆಬರಹಗಳು ೨ | .... | .... | ೧ | ೮ | ೦ |
| ೩೬. | ನಾನು ಪೋಲೀಸನಾಗಿದ್ದೆ | .... | .... | ೧ | ೮ | ೦ |
| ೩೭. | ರಾಗಿಣಿ | .... | .... | ೧ | ೮ | ೦ |
| ೩೮. | ಮಧುಚಂದ್ರ | .... | .... | ೦ | ೧೨ | ೦ |
| ೩೯. | ಬಂಗಾರದ ಜಿಂಕೆಯ ಹಿಂದೆ | .... | .... | ೧ | ೮ | ೦ |
| ೪೦. | ಬಣ್ಣದ ಮಾಲಿಂಗ | .... | .... | ೧ | ೮ | ೦ |
| ೪೧. | ಗೋವಾದೇವಿ | .... | .... | ೧ | ೮ | ೦ |
| ೪೨. | ಪಟ್ಟಣದ ಹುಡುಗಿ (ನಾಟಕ) (ದ್ವಿತೀಯ ಮುದ್ರಣ) | | .... | ೧ | ೦ | ೦ |
| ೪೩. | ಪಾಪಕೂಪ | .... | .... | ೧ | ೮ | ೦ |
| ೪೪. | ಪಾತರಗಿತ್ತಿ | .... | .... | ೧ | ೮ | ೦ |
| ೪೫. | ರೂಪಸರ್ಪಿಣಿ | .... | .... | ೧ | ೮ | ೦ |
| ೪೬. | ಕಾಂಚನ – ಗಂಗಾ | .... | .... | ೧ | ೮ | ೦ |
| ೪೭. | ಪಾಂಚಜನ್ಯ | .... | .... | ೧ | ೪ | ೦ |
| ೪೮. | ಬೆಳಗಿನ ಗಾಳಿ | .... | .... | ೧ | ೮ | ೦ |
| ೪೯. | ಅಕ್ಕಮಹಾದೇವಿ (ನಾಟಕ) | .... | .... | ೧ | ೧೨ | ೦ |
| ೫೦. | ಮಣ್ಣಿನ ಮಗಳು* | .... | .... | ೨ | ೦ | ೦ |
| ೫೧. | ರಾಘವಾಂಕನ ಹಲ್ಲು | .... | .... | ೧ | ೪ | ೦ |
| ೫೨. | ದೇವದಾಸಿ ಮತ್ತು ಎಚ್ಚಮನಾಯಕ | .... | .... | ೧ | ೮ | ೦ |
| ೫೩. | ಬೀದಿಯಲ್ಲಿ ಬಿದ್ದವಳು | .... | .... | ೧ | ೦ | ೦ |
| ೫೪. | ಹೃದಯಾಂತರಾಳ (ನಾಟಕ) | .... | .... | ೧ | ೪ | ೦ |
| ೫೫. | ಗಿರಿಯ ನವಿಲು | .... | .... | ೧ | ೮ | ೦ |
| ೫೬. | ಹತ್ಯಾ–ನಾಟಕ | .... | .... | ೦ | ೧೨ | ೦ |
| ೫೭. | ಮಾಯಾವತಿ | .... | .... | ೧ | ೮ | ೦ |

* ಪ್ರತಿಗಳು ಮುಗಿದಿವೆ

| | | | | | | |
|---|---|---|---|---|---|---|
| ೫೮. | ಆಗಸ್ಟ್ ಒಂಭತ್ತು | .... | .... | ೧ | ೦ | ೦ |
| ೫೯. | ರೂಪಲೇಖಾ | .... | .... | ೧ | ೧೨ | ೦ |
| ೬೦. | ಸಮರಭೂಮಿ | .... | .... | ೧ | ೮ | ೦ |
| ೬೧. | ಜಗಜ್ಜ್ಯೋತಿ ಬಸವೇಶ್ವರ (ನಾಟಕ) | .... | .... | ೧ | ೧೨ | ೦ |
| ೬೨. | ಅಮಾತ್ಯರತ್ನ | .... | .... | ೧ | ೮ | ೦ |
| ೬೩. | ಚಿನ್ನಾ | .... | .... | ೧ | ೦ | ೦ |
| ೬೪. | ಸುಂಟರಗಾಳಿ | .... | .... | ೧ | ೦ | ೦ |
| ೬೫. | ಬೇಡದ ಮಗು | .... | .... | ೧ | ೦ | ೦ |
| ೬೬. | ಭಾಗೀರಥಿ | .... | .... | ೧ | ೮ | ೦ |
| ೬೭. | ಮಾಡಿ ಮಡಿದವರು (ತೃತೀಯ ಮುದ್ರಣ).... | | .... | ೩ | ೦ | ೦ |
| ೬೮. | ದಿವಾನ್ ಬಹದ್ದೂರ್ | .... | .... | ೧ | ೪ | ೦ |
| ೬೯. | ರಂಗ ರೋಹಿಣಿ | .... | .... | ೧ | ೮ | ೦ |
| ೭೦. | ವಾತ್ಸಲ್ಯ ಪಥ | .... | .... | ೨ | ೧೨ | ೦ |
| ೭೧. | ಬೆಂಕಿಯ ಬಲೆ | .... | .... | ೧ | ೪ | ೦ |
| ೭೨. | ತುಟಿ ಮೀರಿದುದು | .... | .... | ೧ | ೧೨ | ೦ |
| ೭೩. | ಹಂಸಗೀತೆ | .... | .... | ೧ | ೮ | ೦ |
| ೭೪. | ಜಲತರಂಗ | .... | .... | ೧ | ೮ | ೦ |
| ೭೫. | ಶ್ರೀ ಕೃಷ್ಣಭೂಪಾಲ | .... | .... | ೧ | ೧೨ | ೦ |
| ೭೬. | ಶಕಾರನ ಶಾರೋಟು | .... | .... | ೨ | ೪ | ೦ |

# ಶ್ರೀ ಕೃಷ್ಣ ಭೂಪಾಲ

ಮಧ್ಯಾಹ್ನದ ವಿಶ್ರಾಂತಿಗಾಗಿ ಜನಾನದ ಕಡೆಗೆ ಹೊರಟಿದ್ದ ಟಿಪ್ಪೂಸುಲ್ತಾನರ ದೃಷ್ಟಿ ಅಲ್ಲೇ ಜಗಲಿಯ ಮೇಲೆ ಕಟ್ಟಿದ್ದ ಹೆಣ್ಣು ಹುಲಿ, ಅದರ ಮರಿ ಇವುಗಳ ಕಡೆಗೆ ತಿರುಗಿತು. ದರ್ಪದಿಂದ, ಠೀವಿಯಿಂದ ವರ್ತಿಸುತ್ತಿದ್ದ ಆ ಮರಿಯ ತಲೆಯಮೇಲೆ ಎರಡು ಹುಸಿ ಏಟು ಬಡಿದು, ಅದರ ಬಾಲವನ್ನು ಚಿವುಟಿ, ರೇಗಿಸಿ, ಆಡಿಸಿ ನೋಡಬೇಕೆಂಬ ಅಭಿಲಾಷೆ ಅವರಲ್ಲಿ ಮೊಳೆತು ಬೆಳೆಯಿತು. ಮರಿಯ ಕಡೆಗೆ ತೋಳು ಚಾಚಿದರು. ತಾಯಿ ಹುಲಿ ಸುಲ್ತಾನರ ಕಡೆಗೆ ತಲೆ ತಿರುಗಿಸಿ ಗುರುಗುಟ್ಟಿತು. ಆ ವಿರೋಧ ವರ್ತನೆ ಸುಲ್ತಾನರಿಗೆ ಸರಿಬೀಳಲಿಲ್ಲ. ಅಲ್ಲೇ ಕಂಬಕ್ಕೆ ನೇತು ಹಾಕಿದ್ದ ಚರ್ಮದ ಚಾಟಿಯನ್ನು ಎಳೆದುಕೊಂಡು ತಾಯಿ ಹುಲಿಯ ಮುಖದ ಮೇಲೆ ಫಟ ಫಟನೆ ನಾಲ್ಕೇಟು ಹಾಕಿದರು.... ಹುಲಿ ಆರ್ಭಟಿಸಿತು. ಇನ್ನೊಂದು ಬಲವಾದ ಏಟನ್ನು ಹಾಕಬೇಕೆಂದು ಕೈ ಎತ್ತುವುದರಲ್ಲಿದ್ದರು. ಆ ಹೊತ್ತಿಗೆ ಸರಿಯಾಗಿ, ಪೂರ್ವದ ಕಡೆಯ ಬತೇರಿಯಿಂದ ಫಿರಂಗಿಗುಂಡು ಹಾರಿದ ಸದ್ದು ಕೇಳಿ ಬಂತು....

ಆ ಸದ್ದಿನ ಹಿಂದೆಯೇ — "ಶ್ರೀಮನ್ಮೈಸೂರು ಮಹಾ ಸಂಸ್ಥಾನಾಧೀಶ್ವರ ಶ್ರೀಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀಮಚ್ಚಾಮರಾಜಮಹೀಪಾಲ ಮಹಾಸ್ವಾಮಿಯವರಿಗೆ ಪಟ್ಟದರಸಿಯರು ಕೆಂಪನಂಜಮ್ಮಾಂಬಾದೇವಿಯವರಲ್ಲಿ ಶ್ರೀಮದ್ಯುವರಾಜ ಕುಮಾರರ ಶುಭ ಜನನವಾಗಿದೆ" — ಎಂಬ ಸುದ್ದಿಯೂ ಬಂದಿತು.

× × ×

ಸುಮಾರು ನೂರೈವತ್ತು ವರ್ಷಗಳ ಹಿಂದೆ ಮೈಸೂರು ಸಂಸ್ಥಾನವನ್ನಾಳಿದ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದ ಚಾರಿತ್ರಿಕ ಘಟನೆಗಳ ಹಂದರದ ಮೇಲೆ ಹಬ್ಬಿ ಹರಡಿರುವ ಐತಿಹಾಸಿಕ ಕಾದಂಬರಿ ಶ್ರೀ ಕೃಷ್ಣ ಭೂಪಾಲ. ಶ್ರೀ ಮಾ. ನಾ. ಚೌ. ರವರ ಈ ಕಾದಂಬರಿ ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಒಂದು ಹೆಮ್ಮೆಯ ಕಾಣಿಕೆ.

